# ಕನ್ನಡ ಕಾವ್ಯಗಳಲ್ಲಿ ನಾಡು-ನುಡಿಯ ಪ್ರತಿನಿಧೀಕರಣ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ

ಸಂಶೋಧನೆ
**ಸೌಮ್ಯಲತಾ.ಪಿ**
ನೋಂದಣಿ ಸಂಖ್ಯೆ ೧೧೮೯

ಮಾರ್ಗದರ್ಶನ
**ಡಾ. ಎ. ಮೋಹನ ಕುಂಟಾರ್**
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ






ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ
2020

# ಕನ್ನಡ ಕಾವ್ಯಗಳಲ್ಲಿ ನಾಡು–ನುಡಿಯ ಪ್ರತಿನಿಧೀಕರಣ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಸಂಶೋಧನಾ ಮಹಾಪ್ರಬಂಧ


ಸಂಶೋಧನೆ

ಸೌಮ್ಯಲತಾ.ಪಿ

ನೋಂದಣಿ ಸಂಖ್ಯೆ ೧೧೭೮

ಮಾರ್ಗದರ್ಶನ

ಡಾ. ಎ. ಮೋಹನ ಕುಂಟಾರ್

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ






ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ

೨೦೨೦

# ಪ್ರಮಾಣಪತ್ರ

"ಕನ್ನಡ ಕಾವ್ಯಗಳಲ್ಲಿ ನಾಡು-ನುಡಿಯ ಪ್ರತಿನಿಧೀಕರಣ" ಎಂಬ ಮಹಾಪ್ರಬಂಧವನ್ನು ಡಾ. ಮೋಹನಕುಂಟಾರ್ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾಂತರ ಅಧ್ಯಯನ ವಿಭಾಗದ ಬಾಹ್ಯ ವಿದ್ಯಾರ್ಥಿಯಾಗಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸೌಮ್ಯಲತಾ.ಪಿ**
ಸಂಶೋಧನಾ ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿ.ವಿ, ಹಂಪಿ

ದಿನಾಂಕ: 14-09-2020
ಸ್ಥಳ: ವಿದ್ಯಾರಣ್ಯ

# ದೃಢೀಕರಣ ಪತ್ರ

ಸೌಮ್ಯಲತಾ.ಪಿ ಅವರು ನನ್ನ ಮಾರ್ಗದರ್ಶನದಲ್ಲಿ "ಕನ್ನಡ ಕಾವ್ಯಗಳಲ್ಲಿ ನಾಡು-ನುಡಿಯ ಪ್ರತಿನಿಧೀಕರಣ" ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಈ ಸಂಶೋಧನಾ ಮಹಾಪ್ರಬಂಧವು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢೀಕರಿಸಲಾಗಿದೆ.

ದಿನಾಂಕ: 14-09-2020
ಸ್ಥಳ: ವಿದ್ಯಾರಣ್ಯ

ಮಾರ್ಗದರ್ಶಕರು
ಡಾ. ಎ.ಮೋಹನ ಕುಂಟಾರ್
ಪ್ರಾಧ್ಯಾಪಕ, ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ 583 276, ಹೊಸಪೇಟೆ ತಾ.ಬಳ್ಳಾರಿ ಜಿ.

## ಪರಿವಿಡಿ

ಪ್ರಸ್ತಾವನೆ

ಅಧ್ಯಯನದ ವಿಧಾನ

ಅಧ್ಯಯನದ ಉದ್ದೇಶ

ವ್ಯಾಪ್ತಿ ಮತ್ತು ಸ್ವರೂಪ

ಅನ್ಯಭಾಷೆಗಳಲ್ಲಿ ನಾಡು-ನುಡಿ

ಪೂರ್ವಾಧ್ಯಯನಗಳ ಸಮೀಕ್ಷೆ

ನಾಡು-ನುಡಿ ಪರಿಕಲ್ಪನೆಯ ಸಾಮಾನ್ಯ ಸ್ವರೂಪ

ಹೊರನಾಡು-ಗಡಿನಾಡು

ಸಾಹಿತ್ಯ ಮತ್ತು ನೆಲದ ಸಂಬಂಧ

ಜನಪದರಲ್ಲಿ ನೆಲದ ಪ್ರಜ್ಞೆ

ಶಿಷ್ಟಸಾಹಿತ್ಯದಲ್ಲಿ ನೆಲದ ಪ್ರಜ್ಞೆ

## ಪ್ರಸ್ತಾವನೆ

ಪ್ರತಿಯೊಂದು ಭಾಷೆಯ ಮತ್ತು ಸಂಸ್ಕೃತಿಯ ಮುಖ್ಯ ನೆಲೆ ನಾಡು ಮತ್ತು ನುಡಿ. ಮನುಷ್ಯರಿಗೆ ತಮ್ಮ ವ್ಯಕ್ತಿತ್ವದ ಅರಿವಿನ ಜೊತೆಯಲ್ಲಿ ಜನರ ಬದುಕಿನ ಬಗೆಗೆ, ನಾಡು – ನುಡಿ ಸಂಸ್ಕೃತಿಯ ಬಗೆಗೆ ವಿಶೇಷ ಅಭಿಮಾನವಿರುವುದು ಸ್ವಾಭಾವಿಕ. ಯಾಕೆಂದರೆ, ಮನುಷ್ಯರು ಸಂಘ ಜೀವಿಗಳು. ಸಾಂಘಿಕ ಬದುಕು ಮನುಷ್ಯರ ಮನಸ್ಸನ್ನು ಅರಳಿಸುತ್ತದೆ. ನಿರ್ದಿಷ್ಟ ಪರಿಸರದಲ್ಲಿ ಬದುಕನ್ನು ಕಟ್ಟಿಕೊಂಡ ವ್ಯಕ್ತಿಗಳು ಅಲ್ಲಿನ ಪರಿಸರದ ಜೊತೆ ಭಾವನಾತ್ಮಕವಾದ ಸಂಬಂಧವನ್ನು ಬೆಳೆಸಿಕೊಳ್ಳುತ್ತಾರೆ. ತಾವು ಬದುಕಿದ ಸಂಸ್ಕೃತಿಯನ್ನು ಹಾಗೂ ಅದರ ಬಗೆಗಿನ ಅಭಿಮಾನವನ್ನು ತಮ್ಮ ಆಸಕ್ತಿಯ ಮಾಧ್ಯಮದ ಮೂಲಕ ಅನಾವರಣಗೊಳಿಸಲು ಪ್ರಯತ್ನಿಸುತ್ತಾರೆ.

'ಜನನಿ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎನ್ನುವ ಉಕ್ತಿಯಂತೆ ತಾಯಿ ಮತ್ತು ತಾಯ್ನಾಡು ಸ್ವರ್ಗಕ್ಕಿಂತಲೂ ಮಿಗಿಲಾದುದು. ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭವನ್ನು ಗಮನಿಸಿದಾಗ ಕವಿಗಳು ಕಾವ್ಯಗಳಲ್ಲಿ ನಾಡು – ನುಡಿಯ ಅಭಿಮಾನವನ್ನು ಪ್ರತಿನಿಧಿಸಿದ ಬಗೆ ವಿಶಿಷ್ಟವೆನಿಸುತ್ತದೆ. ಕನ್ನಡಿಗರಿಗೆ ನಾಡು ಹೆಣ್ಣಾಗಿ, ತಾಯಿಯಾಗಿ ಕಂಡದ್ದು ವಿಶೇಷ ಸಂಗತಿ. ತಾವು ಬೆಳೆದ ಪರಿಸರ ಹಾಗೂ ಅಲ್ಲಿಯ ಮಣ್ಣು ಕವಿಗಳ ಕಣ್ಣಿನಲ್ಲಿ ದೈವತ್ವವನ್ನು ಪಡೆದುಕೊಳ್ಳುತ್ತದೆ. ಕುವೆಂಪು ಅವರಿಗೆ ನಾಡು ಕೇವಲ ಜಡವಲ್ಲ ಅದೊಂದು ಚೈತನ್ಯ.

ಆಧುನೀಕರಣ ಪ್ರಕ್ರಿಯೆಯು ಭಾರತದಲ್ಲಿ ರಾಷ್ಟ್ರ ಕಲ್ಪನೆಯನ್ನು ಹುಟ್ಟುಹಾಕಿತು. ಇದು ಐರೋಪ್ಯ ಪ್ರಣೀತ ಕಲ್ಪನೆಯಾಗಿದ್ದು ಮಾತ್ರವಲ್ಲ, ಇವರು ರಾಷ್ಟ್ರವನ್ನು ಪಿತೃಭೂಮಿಯ ಕಲ್ಪನೆಯೊಂದಿಗೆ ಕಂಡವರು. ಕನ್ನಡದಲ್ಲಿ ಇದಕ್ಕಿಂತ ಭಿನ್ನವಾದ ಮಾತೃಭೂಮಿಯ ಕಲ್ಪನೆ ಇದ್ದು ವಾಸಿಸುವ ನೆಲವನ್ನು ಪವಿತ್ರವೆಂದು ಗುರುತಿಸಿಕೊಂಡು ಬದುಕನ್ನು ಕಟ್ಟಿಕೊಂಡದ್ದೂ ಇದೆ.

ಸಾಮಾನ್ಯವಾಗಿ ಜನವಸತಿಯ ಪ್ರದೇಶವನ್ನು 'ನಾಡು' ಎಂದೂ, 'ನುಡಿ' ಎಂದರೆ ಭಾಷೆ, ಮಾತು, ಬರಹ ಎಂದೂ ಭಾವಿಸಿರುವುದು ನಾಡು ಮತ್ತು ನುಡಿಯ ಬಗೆಗೆ ಇರುವ ಸಾಮಾನ್ಯ ಗ್ರಹಿಕೆ. ಕನ್ನಡ ನೆಲದಲ್ಲಿ ಅನೇಕ ನಾಡುಗಳಿದ್ದು, ಅವುಗಳನ್ನು ಭಾಷಿಕ ನೆಲೆಯಿಂದ, ಪ್ರಭುತ್ವಕ್ಕೆ ಸಂಬಂಧಪಟ್ಟಂತೆ, ನಿರ್ದಿಷ್ಟ ಸಂಸ್ಕೃತಿಯ ಹಿನ್ನೆಲೆಯಿಂದ ಗುರುತಿಸಲಾಗಿದೆ. ಉದಾಹರಣೆಗೆ,

ಮಲೆನಾಡು, ಕೆಳದಿನಾಡು, ಬೆಳುವೊಲನಾಡು, ತುಳುನಾಡು, ಬನವಾಸಿನಾಡು ಇತ್ಯಾದಿ. ಆದರೆ ಬೇರೆ ಬೇರೆ ಸನ್ನಿವೇಶಗಳಿಂದಾಗಿ ಆಧುನಿಕ ಸಂದರ್ಭದಲ್ಲಿ ಈ ನಿರ್ಮಿತಿಯು ಭಿನ್ನರೂಪದಲ್ಲಿ ಬಳಕೆಗೊಂಡದ್ದನ್ನು ಕಾಣಬಹುದು. ನಾಡು–ನುಡಿಯ ಬಗೆಗೆ ಇದ್ದಂತಹ ಕಲ್ಪನೆ ಅಥವಾ ಪ್ರತಿನಿಧೀಕರಣ ಕಾಲದಿಂದ ಕಾಲಕ್ಕೆ ಬದಲಾಗುತ್ತಲೇ ಬಂದಿದೆ. ಇದು ಪಾರಂಪರಿಕ ಕಾಲಘಟ್ಟದಿಂದ ಆರಂಭಗೊಂಡು ಆಧುನಿಕ ಕಾಲಘಟ್ಟದವರೆಗೂ ವಿಸ್ತಾರಗೊಂಡಿದೆ. ಅಲ್ಲದೇ ನಾಡು ನುಡಿಯ ಕುರಿತಾದ ಬದಲಾವಣೆ ಎಲ್ಲಾ ಕಾಲಘಟ್ಟಗಳಲ್ಲಿಯೂ ಭಿನ್ನವಾಗಿದೆ. ಸಮಾನ ಸಾಂಸ್ಕೃತಿಕ ವಿಚಾರಗಳನ್ನು ಗಮನಿಸಿ, ಆ ಗುಣಲಕ್ಷಣಗಳನ್ನು ಹೊಂದಿರುವ ಭೌಗೋಳಿಕ ವಲಯವನ್ನು ಸಾಮಾನ್ಯವಾಗಿ 'ನಾಡು' ಎನ್ನಬಹುದು. ಕರ್ನಾಟಕವು ದೇಶವಾಚಕವಾಗಿಯೂ, ಕನ್ನಡವು 'ನಾಡು' ನುಡಿ' 'ಜನಾಂಗ', ಸಂಸ್ಕೃತಿಯ ಹೆಸರಾಗಿಯೂ ಬಳಕೆಯಲ್ಲಿದೆ.

ಕನ್ನಡ ನಾಡು–ನುಡಿಗೆ ದೀರ್ಘವಾದ ಪ್ರಾಚೀನ ಇತಿಹಾಸವಿದೆ. ಇದನ್ನು ತಿಳಿಯುವುದಕ್ಕೆ ಕನ್ನಡ ಮತ್ತು ಇತರ ಭಾಷೆಗಳಲ್ಲಿಯೂ ಸಾಕಷ್ಟು ಆಧಾರಗಳಿದ್ದು, ಈ ಕುರಿತು ಅಧ್ಯಯನಗಳು ನಡೆದಿವೆ. ಪ್ರತಿಯೊಬ್ಬ ಬರಹಗಾರರಿಗೂ ನಾಡು–ನುಡಿಯ ಬಗೆಗಿನ ಮೋಹ, ಅಭಿಮಾನ ಅನನ್ಯವಾದುದು. ನಾಡಿನ ಚೆಲುವನ್ನು ವರ್ಣಿಸುವ ಬರವಣಿಗೆಯು ಎಲ್ಲಾ ಕಾಲದಲ್ಲಿಯೂ ಕಂಡು ಬರುತ್ತದೆ. ನಾಡು–ನುಡಿ ಎಂಬ ಕಲ್ಪನೆಯು ಸರ್ವತ್ರ ಒಂದೇ ಉದ್ದೇಶಕ್ಕೆ ಬಳಕೆಯಾಗದೆ, ಸಂದರ್ಭೋಚಿತವಾಗಿ ಬೇರೆ ಬೇರೆ ಉದ್ದೇಶಗಳೊಂದಿಗೆ ಮೂಡಿ ಬಂದುದನ್ನು ಗಮನಿಸಬಹುದು. ಆರಂಭದ ಕಾಲಘಟ್ಟದಲ್ಲಿ ಇದು ಒಂದು ಅಭಿಮಾನದ ಸಂಗತಿಯಾಗಿ ಪ್ರಕಟಗೊಂಡು ನಂತರ ವಸಾಹತುಶಾಹಿಯ ಸಂದರ್ಭದಲ್ಲಿ ಇದನ್ನೊಂದು 'ಪರಿಕಲ್ಪನೆ'ಯಾಗಿ ಗ್ರಹಿಸಲಾಯಿತು. ಈ ಪ್ರಜ್ಞೆಯು ಯುಗದ ಅವಶ್ಯಕತೆಗಾಗಿ ಮೂಡಿಬಂದುದನ್ನು ಕಾಣಬಹುದಾಗಿದೆ.

'ನಾಡು' ಎಂಬ ಪರಿಕಲ್ಪನೆ ಕಾವ್ಯಗಳಲ್ಲಿ ಮೂಡಿಬಂದ ಬಗೆಯಲ್ಲಿ ವೈವಿಧ್ಯತೆ ಇದೆ. ಶ್ರೀವಿಜಯನಿಗೆ ಭೌಗೋಳಿಕವಾಗಿ ವಿಸ್ತಾರವಾಗಿದ್ದ ಕನ್ನಡ ನಾಡು ಕಣ್ಣ ಮುಂದಿತ್ತು. ಪಂಪ ತನ್ನ ಕೃತಿಯಲ್ಲಿ ಬನವಾಸಿಯನ್ನು ವರ್ಣಿಸುತ್ತ ನಾಡಿನ ಅಭಿಮಾನವನ್ನು ಪ್ರಕಟಿಸಿದ್ದಾನೆ. ಆಧುನಿಕ ಕನ್ನಡ ಕವಿಗಳ ಕಣ್ಣಿಗೂ ಈ ನಾಡು ವಿಶಿಷ್ಟವಾಗಿಯೇ ಕಂಡಿದೆ. ಅದು ಚೆಲುವಿನ ನಾಡು, ಚಿನ್ನದ ನಾಡು, ಒಲುಮೆಯ ನಾಡಾಗಿ ಕಾಣಿಸಿ, ಕನ್ನಡ ಮಾತೆಯು ಭಾರತಾಂಬೆಯ ಹಿರಿಯ ಮಗಳಾಗಿ, ಕನ್ನಡದ ಹೊಲ ಮಣ್ಣು ನವನಿಧಿ ಹೊನ್ನಾಗಿ, ಕನ್ನಡದ ಹೂ ಗಿಡ ತನ್ನೊಡಲಿಗೆ ಆಭರಣವಾಗಿಯೂ ಕಾಣಿಸಿದೆ. ಹೀಗೆ ನಾಡಿನ ಬಗೆಗೆ ಮೋಹವುಳ್ಳ ಕವಿಗಳು ಈ

ಅಭಿಮಾನವನ್ನು ಪ್ರಕಟಿಸುತ್ತಲೇ ಬಂದಿದ್ದಾರೆ. ಹೀಗಾಗಿ ನಾಡು-ನುಡಿ ಎನ್ನುವುದನ್ನು ಒಂದು ಪರಿಕಲ್ಪನೆಯಾಗಿ ಪರಿಭಾವಿಸಿ ಅದು ವಿಭಿನ್ನ ಕಾಲಘಟ್ಟಗಳಲ್ಲಿ ವೈವಿಧ್ಯಮಯವಾಗಿ ಮೂಡಿಬಂದಿರುವುದನ್ನು ಪರಿಶೀಲಿಸುವುದು ಅಗತ್ಯವೆನಿಸುತ್ತದೆ.

ಕನ್ನಡ ಕಾವ್ಯಗಳಲ್ಲಿ ನಾಡು-ನುಡಿಯ ಪ್ರತಿನಿಧೀಕರಣ ಎಂಬ ಈ ಅಧ್ಯಯನವು 'ಕವಿರಾಜಮಾರ್ಗ'ದಿಂದ ತೊಡಗಿ ಅಧುನಿಕ ಕಾಲಘಟ್ಟದವರೆಗಿನ ಕಾವ್ಯಗಳನ್ನು ಮುಖ್ಯ ಭೂಮಿಕೆಯಲ್ಲಿಟ್ಟು ವಿಶ್ಲೇಷಣೆ ಮಾಡುವ ಪ್ರಯತ್ನವಾಗಿದೆ. ನಾಡು-ನುಡಿಗೆ ಅನಾಹುತವಾಗುವ, ಭಾಷೆ-ಸಂಸ್ಕೃತಿಯ ಐಕ್ಯತೆಗೆ ಧಕ್ಕೆಯುಂಟಾಗುವ ಸಂದರ್ಭಗಳಲ್ಲಿ ಕವಿಗಳು ಸಾಹಿತ್ಯ ಸೃಷ್ಟಿಯ ಮೂಲಕ ಭಾಷೆಗೂ ನಾಡಿಗೂ ಜೀವ ತುಂಬುವ ಪ್ರಯತ್ನ ಮಾಡಿದ್ದಾರೆ. ಪಶ್ಚಿಮದ ಸಂಸ್ಕೃತಿಯಿಂದಾಗಿ ಆಂಗ್ಲ ಭಾಷೆ ಇಲ್ಲಿನ ಜನಮನದಲ್ಲಿ ಬೇರೂರಿತ್ತು. ಅದು ಎಷ್ಟು ಗಾಢವಾಗಿತ್ತೆಂದರೆ ಕನ್ನಡದಲ್ಲಿ ಮಾತನಾಡುವುದೂ ಕೀಳರಿಮೆಯ ಸಂಗತಿಯಾಗಿತ್ತು. ಈ ಭಾಷಿಕ ಮತ್ತು ಸಾಂಸ್ಕೃತಿಕ ಪಲ್ಲಟದ ಸಂದರ್ಭದಲ್ಲಿ ಕನ್ನಡದ ಅಸ್ಮಿತೆಯನ್ನು ಉಳಿಸಿಕೊಳ್ಳುವುದು ಸವಾಲಾಗಿತ್ತು. ಈ ಸಮಸ್ಯೆ ಕನ್ನಡವನ್ನು ಬಿಟ್ಟು ಬೇರೆ ಭಾಷಿಕರನ್ನು ಕಾಡಿಲ್ಲ. ಹಾಗಾಗಿ ಶ್ರೀಮಂತ ಭಾಷೆಯಾಗಿದ್ದ ಕನ್ನಡ ಭಾಷಿಕ ಮತ್ತು ಸಾಂಸ್ಕೃತಿಕ ಅನನ್ಯತೆಗೆ ಎದುರಾಗುವ ಆತಂಕಗಳು ಕನ್ನಡದ ಸಂದರ್ಭದಲ್ಲಿ ವಿಶಿಷ್ಟ ನೆಲೆ ಪಡೆಯುತ್ತವೆ.

ಆಧುನಿಕಪೂರ್ವ ಸಾಹಿತ್ಯ ಸಂದರ್ಭವನ್ನು ಗಮನಿಸಿದರೆ, ಆ ಕವಿಗಳಿಗೆ ನಾಡು-ನುಡಿಯು ವರ್ಣನೆಯ, ಅಭಿಮಾನದ ಸಂಗತಿಯಾಗಿತ್ತೇ ವಿನಃ ಭಾಷಿಕ ಸಮಸ್ಯೆಗಳು ಅವರನ್ನು ಕಾಡಿರಲಿಲ್ಲ. ನಂತರದ ಕವಿಗಳಿಗೆ ಭಾಷೆಯನ್ನು ಉಳಿಸುವ ತುರ್ತು ಕಾಣಿಸಿಕೊಂಡಾಗ ಈ ಆಲೋಚನೆ ಅವರ ಕಾವ್ಯಗಳಲ್ಲಿಯೂ ಅನಾವರಣಗೊಳ್ಳತೊಡಗಿತು. 'ಕಬ್ಬಿಗರಕಾವ'ದಲ್ಲಿ ಸಂಸ್ಕೃತದ ಪದಗಳನ್ನು ಬೆರೆಸದೆ ಕನ್ನಡದಲ್ಲಿಯೇ ಕೃತಿ ರಚಿಸಿದ್ದೇನೆಂಬ ಹಿರಿಮೆ ಆಂಡಯ್ಯನದು. ಸಂಸ್ಕೃತದ ಗಾಢವಾದ ಪ್ರಭಾವದಿಂದ ನಿಧಾನವಾಗಿ ಹೊರಬರಲು ಪ್ರಯತ್ನಿಸಿದ ಸಂದರ್ಭ ಇದು. ನಯಸೇನನು ಕನ್ನಡ - ಸಂಸ್ಕೃತವನ್ನು ಸಂಕರಗೊಳಿಸುವ ಕ್ರಮಕ್ಕೆ ವಿರೋಧ ವ್ಯಕ್ತಪಡಿಸಿದ್ದನ್ನು ಕಾಣಬಹುದು. ಹಳೆಯ ಪುರಾಣವನ್ನಿಟ್ಟುಕೊಂಡು ಅದನ್ನು ಸಮಕಾಲೀನ ಸಮಾಜದ ಎದುರಿಟ್ಟು ನೋಡುವ ಮುದ್ದಣನವರೆಗೂ ಇದೇ ಆಲೋಚನೆ ಕಾಣಿಸಿಕೊಂಡಿದೆ. ನಂತರದ ಕಾಲ ಘಟ್ಟದಲ್ಲಿ ಸಂಸ್ಕೃತದ ಪ್ರಭಾವದಿಂದ ಕಳಚಿಕೊಂಡ ಸಾಹಿತ್ಯ ಕಂಡು ಬರುತ್ತದೆ.

'ನಾಡು-ನುಡಿ' ಎಂಬ ಪರಿಕಲ್ಪನೆಯನ್ನು ಆಧುನಿಕ ಪೂರ್ವದ ಮತ್ತು ಆಧುನಿಕ ಕವಿಗಳು ಬಳಸಿಕೊಂಡ ಮತ್ತು ನಿರ್ವಹಿಸಿದ ಬಗೆ ಬೇರೆಯೇ ಆಗಿದೆ. ರಾಷ್ಟ್ರ ಎನ್ನುವ ಐರೋಪ್ಯ

ಕಲ್ಪನೆಯು ಸ್ಥಳೀಯ ಕಲ್ಪನೆಯಾಗಿ ರೂಪುಗೊಂಡ ಬಗೆ ಹೇಗೆ? ಸಂದರ್ಭೋಚಿತವಾಗಿ ಈ ಕಲ್ಪನೆಯ ಬದಲಾದ ಮನೋಧರ್ಮದ ಹಿನ್ನೆಲೆ ಯಾವುದು? ಕನ್ನಡ ಕವಿಗಳು ಕಂಡ ಅರ್ಥದ ಹಿನ್ನೆಲೆಯಲ್ಲಿ ನಾಡು -ನುಡಿಯನ್ನು ಗುರುತಿಸಿಕೊಂಡು ಈ ಪರಿಕಲ್ಪನೆ ಸಾಹಿತ್ಯದೊಳಗೆ ಹೇಗೆ ಮೂಡಿ ಬಂದಿದೆ ಎಂಬ ಪ್ರಶ್ನೆಗಳ ಹಿನ್ನೆಲೆಯಲ್ಲಿ ಅಧ್ಯಯನವನ್ನು ರೂಪಿಸಿಕೊಂಡು ಉತ್ತರದ ಹುಡುಕಾಟದ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಅಧ್ಯಯನದ ವಿಧಾನ**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾವ್ಯಪ್ರಕಾರಕ್ಕೆ ಮಹತ್ವದ ಸ್ಥಾನವಿದೆ. ನಾಡು -ನುಡಿಯ ಪರಿಕಲ್ಪನೆ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡದ್ದು ಕಾವ್ಯಗಳಲ್ಲಾದ ಕಾರಣ ಸ್ವಾಭಾವಿಕವಾಗಿಯೇ ಇಲ್ಲಿ ಕಾವ್ಯಗಳನ್ನು ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಈವರೆಗೆ ಈ ಪರಿಕಲ್ಪನೆಯ ಕುರಿತು ನಡೆದ ಅಧ್ಯಯನಗಳ ಸಮೀಕ್ಷೆ ನಡೆಸಿ ಅಧ್ಯಯನವನ್ನು ರೂಪಿಸಿಕೊಳ್ಳಲಾಗಿದೆ. ನಾಡಿನ ಶ್ರೇಯಸ್ಸಿಗೆ ಧಕ್ಕೆಯೊದಗಿದಾಗ ಕವಿಗಳು ಪ್ರತಿಕ್ರಿಯಿಸುತ್ತಾರೆ. ಕನ್ನಡದ ಸವಾಲುಗಳಿಗೆ, ಆತಂಕಗಳಿಗೆ, ಸಮಸ್ಯೆಗಳಿಗೆ ಕನ್ನಡ ಕವಿಗಳು ಪ್ರತಿಕ್ರಿಯಿಸಿದ ಮತ್ತು ಸ್ಪಂದಿಸಿದ ಬಗೆ ಇಲ್ಲಿ ಮುಖ್ಯವಾಗುತ್ತದೆ.

**ಅಧ್ಯಯನದ ಉದ್ದೇಶ**

ನಾಡು-ನುಡಿಗಳ ಬಗೆಗೆ ಕಾಲಕಾಲಕ್ಕೆ ಬದಲಾದ ಕನ್ನಡ ಕವಿಗಳ ಸಂವೇದನೆಗಳ ಸ್ವರೂಪವನ್ನು ಕಾವ್ಯಗಳ ಅಧ್ಯಯನದ ಮೂಲಕ ಅರಿತುಕೊಳ್ಳುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಈ ಅಧ್ಯಯನ ಹಳಗನ್ನಡ ಕಾವ್ಯಗಳಿಂದ ಆರಂಭಗೊಂಡು ಆಧುನಿಕ ಸಾಹಿತ್ಯ ಸಂದರ್ಭದವರೆಗೂ ವಿಸ್ತಾರಗೊಂಡಿದೆ. ಹಳಗನ್ನಡ ಕವಿಗಳು ನಾಡು - ನುಡಿಯ ಸಂವೇದನೆಯನ್ನು ಸಂದರ್ಭೋಚಿತವಾಗಿ ಬೇರೆ ಬೇರೆ ಸ್ವರೂಪದಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಶ್ರೀವಿಜಯ, ಪಂಪ, ರನ್ನ, ನಯಸೇನ ಮತ್ತು ಆಂಡಯ್ಯ ಮುಂತಾದ ಕವಿಗಳು ಈ ಪರಿಕಲ್ಪನೆಯನ್ನು ವ್ಯಕ್ತಪಡಿಸಿದ ರೀತಿಯಲ್ಲಿ ವೈವಿಧ್ಯತೆ ಇದೆ. ಅದೇ ರೀತಿಯಲ್ಲಿ ಮಧ್ಯಕಾಲೀನ ಸಂದರ್ಭಕ್ಕೆ ಬಂದಾಗ ಸಾಹಿತ್ಯವು ಜನಮುಖಿಯಾಗುವಂತೆ ಕವಿಗಳು ಮಾಡಿದ ಪ್ರಯೋಗಶೀಲತೆಯ ಪ್ರಯತ್ನ ಕಂಡು ಬರುತ್ತದೆ. ವಚನಕಾರರು, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ನಂಜುಂಡ, ಗೋವಿಂದವೈದ್ಯ, ಮುದ್ದಣ ಇವರ ನಾಡು-ನುಡಿಯ ಸಂವೇದನೆಯ ಸ್ವರೂಪವನ್ನು ಆಯಾ ಕವಿಗಳ ಕಾವ್ಯದ ಮೂಲಕ ಅಧ್ಯಯನ ನಡೆಸಲಾಗಿದೆ.

ಕನ್ನಡ-ಕನ್ನಡಿಗ-ಕರ್ನಾಟಕ ಈ ಪರಿಕಲ್ಪನೆಗಳ ಕುರಿತಾದ ಚಿಂತನೆ ಹಾಗೂ ಚಟುವಟಿಕೆಗಳ ಬಗೆಗೆ ಮಹತ್ವದ ಚರ್ಚೆಗಳು ನಡೆದಿವೆ. ಈ ಹಿನ್ನೆಲೆಯಲ್ಲಿ ಕಳೆದ ಶತಮಾನವನ್ನು ಏಕೀಕರಣಪೂರ್ವ ಮತ್ತು ಏಕೀಕರಣೋತ್ತರ ಕರ್ನಾಟಕವೆಂದು ಗುರುತಿಸಿಕೊಳ್ಳಬಹುದಾಗಿದೆ. ಕನ್ನಡ ಮಾತೃಭಾಷೆಯಾಗಿದ್ದು, ಛಿದ್ರಗೊಂಡ ಪ್ರದೇಶಗಳು ಮತ್ತು ಜನ ಒಂದೇ ಆಡಳಿತ ಪರಿಧಿಯೊಳಗೆ ಬರಲು ಹಾತೊರೆದ ಘಟ್ಟ ಮೊದಲನೆಯದಾದರೆ, ಎರಡನೆಯದು ಏಕೀಕರಣದ ಘಟ್ಟ. ಈ ಸಂದರ್ಭದಲ್ಲಿ ಕನ್ನಡದ ಅನನ್ಯತೆಯನ್ನು ಉಳಿಸಿಕೊಳ್ಳುವಲ್ಲಿ ನಡೆಸಿದ ಪ್ರಯತ್ನ ಅಮೋಘವಾದುದು. ಈ ಸಂದರ್ಭದ ಸೃಜನಶೀಲ ಸಾಹಿತ್ಯ ಸೃಷ್ಟಿಯು ಅನನ್ಯವಾದುದು. ಕನ್ನಡ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಮಾಡಿದ ಸತತ ಪ್ರಯತ್ನ ಮತ್ತು ಈ ಕುರಿತು ಕವಿಗಳ ಪ್ರತಿಕ್ರಿಯೆ ಕಾವ್ಯಗಳಲ್ಲಿ ದಾಖಲಾಗಿವೆ. ಹೀಗೆ ಕಾವ್ಯಗಳು ಅನಾವರಣಗೊಳಿಸಿದ ನಾಡು-ನುಡಿಯ ಗ್ರಹೀತಗಳನ್ನು ಗುರುತಿಸುವುದು ಮತ್ತು ನಿರ್ದಿಷ್ಟ ಕಾವ್ಯಗಳು ಗುರುತಿಸಿಕೊಡುವ ಭಾಷಾ ಸಂಘರ್ಷವನ್ನು ಕುರಿತು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಆರನೆಯ ಅಧ್ಯಾಯ ಸಮರೋಪ: ಸ್ವಾಭಿಮಾನದ ಹೃದಯ ನಿವೇದನೆಯ ಅಕ್ಷರ ರೂಪ ಎಂಬ ಈ ಅಧ್ಯಾಯದಲ್ಲಿ ಅಧ್ಯಯನದ ಫಲಿತವನ್ನು ಚರ್ಚಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ**

ಶ್ರೀವಿಜಯನಿಂದ ಮೊದಲ್ಗೊಂಡು ಆಧುನಿಕ ಸಂದರ್ಭದವರೆಗಿನ ಆಯ್ದ ಪ್ರಾತಿನಿಧಿಕ ಕಾವ್ಯಗಳಲ್ಲಿ ಕವಿಗಳು ಅನಾವರಣಗೊಳಿಸಿರುವ ನಾಡು-ನುಡಿಯ ಚಿಂತನೆ, ಸ್ವರೂಪ ಹಾಗೂ ಅದಕ್ಕೆ ಹಿನ್ನೆಲೆಯಾದ ಸಾಂಸ್ಕೃತಿಕ ಒತ್ತಡಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡ ನಾಡು-ನುಡಿಯ ಬೆಳವಣಿಗೆಯಲ್ಲಿ ಕನ್ನಡ ಕಾವ್ಯಗಳ ಕೊಡುಗೆ ಹಾಗೂ ಮಹತ್ವವನ್ನು ಗುರುತಿಸುವ ದೃಷ್ಟಿಯಿಂದ ಪ್ರಾಸ್ತಾವಿಕ ಮತ್ತು ಸಮಾರೋಪ ಅಧ್ಯಾಯಗಳನ್ನು ಹೊರತುಪಡಿಸಿ ಈ ಅಧ್ಯಯನವನ್ನು ಐದು ಅಧ್ಯಾಯಗಳಾಗಿ ಮಾಡಲಾಗಿದೆ. ಸಂಶೋಧನೆಯ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ, ಅನ್ಯಭಾಷೆಗಳಲ್ಲಿ ನಾಡು-ನುಡಿ, ಪೂರ್ವಾಧ್ಯಯನಗಳ ಸಮೀಕ್ಷೆ, ನಾಡು-ನುಡಿಯ ಸಾಮಾನ್ಯ ಸ್ವರೂಪ ಹಾಗೂ ಸಾಹಿತ್ಯ ಮತ್ತು ನೆಲದ ಸಂಬಂಧ ಎಂಬ ಚರ್ಚೆಗಳನ್ನು ಪ್ರಸ್ತಾವನೆಯಲ್ಲಿ ಮಾಡಲಾಗಿದೆ.

ಮೊದಲ ಅಧ್ಯಾಯ 'ಕಾವ್ಯಗಳಲ್ಲಿ ಸಮನ್ವಯದ ದಾರಿ'. ಪ್ರಾಚೀನ ಕನ್ನಡ ಕವಿಗಳು ನಾಡು-ನುಡಿಯನ್ನು ಪ್ರತಿನಿಧೀಕರಿಸಿದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯ 'ಕಾವ್ಯಗಳಲ್ಲಿ ಪ್ರಯೋಗಗಳ ಮಾದರಿ'. ಮಧ್ಯಕಾಲೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ

ನಾಡಿನೊಳಗಡೆ ನುಡಿಬಳಕೆಯ ಬಗೆಗೆ ಕವಿಗಳು ಪ್ರಯೋಗಶೀಲತೆಯನ್ನು ಮೆರೆದ ಕುರಿತಾದ ಚರ್ಚೆ ಈ ಅಧ್ಯಾಯದಲ್ಲಿದೆ. 'ಕಾವ್ಯಗಳಲ್ಲಿ ಐಕ್ಯತೆಯ ಕೂಗು' ಎನ್ನುವುದು ಮೂರನೆಯ ಅಧ್ಯಾಯ. ಹರಿದು ಹಂಚಿಹೋಗಿದ್ದ, ನಿರ್ದಿಷ್ಟ ಸೀಮೆಗಳಿಲ್ಲದ ಕನ್ನಡ ನುಡಿಯನ್ನು ಉಳಿಸಲು ಏಕೀಕರಣದ ಆಶಯವನ್ನು ಮುಂದಿಟ್ಟು ನಾಡಿನ ಪ್ರೇಮವನ್ನು ಪ್ರಕಟಿಸಿದ ಬಗೆಗೆ ಚಿಂತನೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಧ್ಯಾಯ ನಾಲ್ಕು 'ತಲ್ಲಣಗಳ ಅಭಿವ್ಯಕ್ತಿ'. ನಾಡಿನ ಆತಂಕದ ದಿನಗಳು ಕಾವ್ಯಗಳಲ್ಲಿ ಕಾಣಿಸಿಕೊಂಡ ಬಗೆಯ ಕುರಿತಾದ ಚರ್ಚೆ ಈ ಅಧ್ಯಾಯದ ಉದ್ದೇಶವಾಗಿದೆ. 'ಕೊಡವ ಮತ್ತು ತುಳು ಅಸ್ಮಿತೆಗಳ ಅನಾವರಣ' ಐದನೆಯ ಅಧ್ಯಾಯವಾಗಿದ್ದು, ಕನ್ನಡಾಂತರ್ಗತವಾದ ಈ ಎರಡು ಭಾಷೆಗಳು ತಮ್ಮ ಅಸ್ಮಿತೆಯನ್ನು ಜೀವಂತವಾಗಿಸಲು ಪ್ರಯತ್ನಿಸಿದ ಬಗೆಯನ್ನು ಇಲ್ಲಿ ವಿವರಿಸಲಾಗಿದೆ.

**ಅನ್ಯಭಾಷೆಗಳಲ್ಲಿ ನಾಡು-ನುಡಿ**

ಕನ್ನಡ ಕವಿಗಳು ನಾಡಿನ ಹಿರಿಮೆಯಲ್ಲಿ ವಿಶ್ವದ ಹಿರಿಮೆಯನ್ನು, ಬಾಂಧವ್ಯವನ್ನು ಕಾಣುವ ಹಂಬಲವನ್ನು ಹೊಂದಿದ್ದರು. ಬೇಂದ್ರೆಯವರ ಕವನದ ಸಾಲು ಇದಕ್ಕೆ ಸಾಕ್ಷಿ.

ತಮಿಳರಣ್ಣಾ, ತೆಲುಗ ತಮ್ಮಾ,ಕೇರಳದ ಹಿರಿಯ ಸೋದರಾ
ಆರದಿರಲೈ ಆದರಾ
ಮಹಾರಾಷ್ಟ್ರನಿರು ನೀನುತ್ತರಾ
ನೆರೆಹೊರಿಕೆಯಾಗಲಿ ಹತ್ತಿರಾ
ಪಕ್ಕಕಿರಲಿ ಕೊಂಕಣಾ
ಕೊಡಗು ತುಳುವರ ತೆಂಕಣಾ
ಹಿಂದಿಯವನೂ ಮಂದಿಯವನೇ
ಅವನು ಎಲ್ಲರ ಬಂಧುವೂ (ನೀವಾರಲಾ)

ಕನ್ನಡವೂ, ಭಾರತವೂ ಜಗವೆಲ್ಲವೂ ಒಂದೇ ಎಂಬ ನಿಲುವಿನೊಂದಿಗೆ ತಾನಿರುವ ನಾಡಿನ ಮತ್ತು ನುಡಿಯ ಬಗೆಗೆ ಅಭಿಮಾನ ಹೊಂದಿರುವುದು ಅಗತ್ಯ ಎಂಬುದನ್ನು ಕವಿಗಳು ಸಾರಿದ್ದಾರೆ.ತಮಿಳ್ ಸೆಲ್ವಿ ಅವರು ಅಭಿಪ್ರಾಯಪಡುವಂತೆ, ಸಂಗಂ ಕಾವ್ಯದ ಪ್ರಸಿದ್ಧ ಹೇಳಿಕೆಯಾದ 'ಯಾದುಂ ಊರೇ ಯಾವರುಂ ಕೇಳೀರ್'(ಎಲ್ಲವೂ ನಮ್ಮೂರೇ ಎಲ್ಲರೂ ನಮ್ಮವರೇ) ಎನ್ನುವುದೂ ಕೂಡಾ ಕವಿಗಳ ವಿಶಾಲ ಮನಸ್ಸನ್ನು ಗುರುತಿಸುತ್ತದೆ. (೨೦೧೫ ಪು.೧೩) ಗತವೈಭವವನ್ನು ಜ್ಞಾಪಿಸುವುದರ ಮೂಲಕ ತಮ್ಮ ನಾಡು ಶ್ರೇಷ್ಠವಾಗಿತ್ತೆಂದು ಹೇಳುತ್ತಾ

ನಾಡ ಜನರನ್ನು ಕರ್ತವ್ಯಪರರಾಗುವಂತೆ ಮಾಡುವುದನ್ನು ಎಲ್ಲಾ ಭಾಷೆಯ ಸಾಹಿತ್ಯದೊಳಗೂ ಕಾಣಬಹುದು.

ಹಂಪೆಯ ಕುರಿತಾಗಿ ಕನ್ನಡದಲ್ಲಿ ಅನೇಕ ಕವನಗಳು ರಚನೆಯಾಗಿವೆ. ತೆಲುಗಿನಲ್ಲಿಯೂ ಇದು ಕಾವ್ಯವಸ್ತುವಾಗಿದೆ. 'ಶಿಲಲು ದ್ರವಿಂಚಿ ಏಡ್ಚಿನವಿ, ಜೀರ್ಣಮುಲೈನವಿ ತುಂಗಭದ್ರ ಲೋ ಗುಡಿ ಗೋಪುರಮುಲು ಕಲಿಸಿನವಿ' (ಶಿಲೆಗಳು ದ್ರವಿಸಿದವು, ಗುಡಿಗೋಪುರಗಳು ಜೀರ್ಣಸ್ಥಿತಿಗೆ ಬಂದು ಎಲ್ಲ ತುಂಗಭದ್ರೆಯಲಿ ಸೇರಿದವು) (ರಾಷ್ಟ್ರೀಯತೆ ಮತ್ತು ಕಾವ್ಯ, ೨೦೧೨ ಪು.೯೪) ಎನ್ನುತ್ತಾ, ಹಂಪೆಯ ಸ್ಥಿತಿಗಾಗಿ ಮರುಗುವ ಕವಿಹೃದಯ ಕಾಣಿಸಿಕೊಳ್ಳುತ್ತದೆ. ಮಲಯಾಳ ಕವಿ ವಳ್ಳತ್ತೋಳ್ 'ಮಾತೃವಂದನಂ' ಎಂಬ ಕವನದ ಮೂಲಕ ಕೇರಳದ ಬಗೆಗಿನ ಪ್ರೇಮವನ್ನು ಗುರುತಿಸಿದ್ದಾರೆ. ನಾಡಿನ ಪ್ರಾಕೃತಿಕ ಸೌಂದರ್ಯಕ್ಕೆ ತಲೆಬಾಗಿ ಮಾತೃಭಾಷೆಯಾದ ಮಲಯಾಳಂ ಕುರಿತಾಗಿ,

ಮಾತೃವಾಕ್ಕೊನ್ನಾಕಣಂ ನಮುಕ್ಕು ಸಾಕ್ಷಾಲ್ ವೇದಂ
ಮಾತೃಸುಶ್ರೂಷಾಯತ್ನ ಮಾತಣಂಮಹಾಯಜ್ಞಂ (ಮಾತೃವಂದನಂ)

ಎನ್ನುತ್ತಾರೆ. 'ಮಾತೃವಾಣಿ ನಮಗೆ ಸಾಕ್ಷಾತ್ ವೇದವಾಗಿರಲಿ. ಮಾತೃಸೇವಾಯತ್ನ ನಮಗೆ ಯಜ್ಞವಾಗಿರಲಿ' ಎಂಬ ಆಶಯವನ್ನು ಈ ಮೂಲಕ ಕವಿ ವ್ಯಕ್ತಪಡಿಸಿದ್ದಾರೆ. ಇದೇ ರೀತಿ ಎಲ್ಲಾ ಭಾಷೆಯ ಸಾಹಿತ್ಯವೂ ನಾಡು-ನುಡಿಯ ಪ್ರೇಮವನ್ನು ಅನಾವರಣಗೊಳಿಸಿದೆ. ಅನ್ಯಭಾಷೆಗಳಲ್ಲಿ ನಾಡುನುಡಿಯು ವಿಸ್ತಾರವಾದ ಅಧ್ಯಯನಕ್ಕೆ ವಸ್ತುವಾಗಬಹುದು. ಈಗಾಗಲೇ ಈ ಅಧ್ಯಯನದ ವಿಸ್ತಾರ ಹೆಚ್ಚಿರುವುದರಿಂದ ಇದನ್ನು ಇಲ್ಲಿ ಪ್ರತ್ಯೇಕ ಅಧ್ಯಾಯವಾಗಿ ರೂಪಿಸಿಕೊಂಡಿಲ್ಲ.

**ಪೂರ್ವಾಧ್ಯಯನಗಳ ಸಮೀಕ್ಷೆ**

ಕನ್ನಡದ ಎಲ್ಲಾ ಕವಿಗಳು ನಾಡನ್ನು ಪ್ರೀತಿಸಿದವರು. ನುಡಿಯ ಜೊತೆಗೆ ಗಾಢವಾಗಿ ಸ್ಪಂದಿಸಿದವರು. ಶ್ರೀ ವಿಜಯನಿಗೆ ಕರ್ನಾಟಕವು ವಿಶಿಷ್ಟ ದೇಶವಾಗಿ ಕಂಡರೆ, ಪಂಪನಿಗೆ ಬನವಾಸಿಯು ಉಸಿರಾಗಿತ್ತು. 'ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು' ಎನ್ನುತ್ತಾ ನಾಡ ಪ್ರೇಮವನ್ನು ಗುರುತಿಸಿಕೊಂಡವನು ಆಂಡಯ್ಯ. ಕರ್ನಾಟಕವನ್ನು ವಿಶಿಷ್ಟವಾಗಿ ಬಣ್ಣಿಸಿದವನು ಗೋವಿಂದ ವೈದ್ಯ. ನಂಜುಂಡ ಕವಿಯು ನಾಡನ್ನು ಬಾಯಿ ತುಂಬಾ ಹೊಗಳಿದ್ದಾನೆ. ಹರಿಹರನಿಗೆ ಹಂಪೆ ಎಂದರೆ ಪ್ರೇಮ. ಜನ ಸಾಮಾನ್ಯರ ಭಾಷೆಯನ್ನು ಬಳಸಿ ದೇವ ಭಾಷೆಯ ಮಟ್ಟಕ್ಕೇರಿಸಿದವರು ವಚನಕಾರರು. ಮಹಲಿಂಗರಂಗನದು ಅನನ್ಯ ಭಾಷಾ ಪ್ರೇಮ. ಇಂತಹ ನುಣುಪು ನುಡಿಯ, ಮಧುರವಾದ ಕನ್ನಡದ ಬಗೆಗೆ ಅನೇಕ ಅಧ್ಯಯನಗಳು ನಡೆದಿವೆ.

ಇತ್ತೀಚಿನ ಅಧ್ಯಯನ ಪ್ರವೃತ್ತಿಗಳನ್ನು ಗಮನದಲ್ಲಿಟ್ಟುಕೊಂಡು ಯಾವುದೇ ಅಧ್ಯಯನಕ್ಕೆ ಮಹತ್ವದ ಹಾಗೂ ಹೊಸತಾದ ಅಲೋಚನಾ ವಿನ್ಯಾಸವನ್ನು ಒದಗಿಸಿಕೊಡುವುದು ಸಂಶೋಧಕರ ಜವಾಬ್ದಾರಿಯಾಗುತ್ತದೆ. ಸಾಂಪ್ರದಾಯಿಕ ಚಿಂತನೆಗಳು ವಿಕಾಸ ಹೊಂದುತ್ತಲೇ ಇವೆ. ಇವು ಜಾಗತೀಕರಣದ ಈ ಸಂದರ್ಭದಲ್ಲಿ ಸಕಾಲಿಕಗೊಳ್ಳುವುದು ಅನಿವಾರ್ಯವಾಗಿದೆ. ದೇಶೀಯ ಜ್ಞಾನ ಪರಂಪರೆಯನ್ನು ಮರುಶೋಧಿಸುವ ಕೆಲಸದ ಜೊತೆಗೆ ಕನ್ನಡದ ಬೇರನ್ನು ಗಟ್ಟಿಗೊಳಿಸುವ ಕೆಲಸವೂ ಆಗಬೇಕಾಗಿದೆ.

ಕನ್ನಡದ ಬಗೆಗೆ ಈ ವರೆಗೆ ನಡೆದ ಅಧ್ಯಯನಗಳಲ್ಲಿ 'ಕನ್ನಡ' 'ಕರ್ನಾಟಕ' ಪದಗಳ ವ್ಯುತ್ಪತ್ತಿ ಮುಖ್ಯವಾಗಿದೆ. ಕನ್ನಡ ಎದುರಿಸಿದ ಸವಾಲುಗಳು, ಆತಂಕಗಳು, ಏಕೀಕರಣಕ್ಕೆ ಸಮುದಾಯವನ್ನು ಸಿದ್ಧಗೊಳಿಸಿದ ಬಗೆ ಎಲ್ಲವೂ ಕನ್ನಡದ ಅಧ್ಯಯನಗಳಲ್ಲಿ ಪ್ರಸ್ತುತಗೊಂಡಿವೆ.

ಕನ್ನಡ ಭಾಷೆಯನ್ನಾಡುವ ಜನರು ವಾಸ ಮಾಡುತ್ತಿರುವ ಪ್ರದೇಶವನ್ನು 'ಕನ್ನಡನಾಡು' ಎಂಬುದಾಗಿ ಗುರುತಿಸುವ ಪ್ರಯತ್ನವಾಗಿದೆ. ಈ ನಾಡಿಗೆ ಉಜ್ವಲವಾದ ಸಾಹಿತ್ಯ ಪರಂಪರೆಯಿದೆ, ಇತಿಹಾಸವಿದೆ. 'ಕನ್ನಡ, ಕರ್ನಾಟಕ' ಎಂಬ ಪದಗಳು ಪ್ರಾಚೀನ ಕಾಲದಲ್ಲಿಯೇ ಈ ನಾಡಿಗೆ ಬಳಕೆಯಾಗಿರುವುದನ್ನು ಸಾಹಿತ್ಯ ಗ್ರಂಥಗಳೂ, ಶಾಸನಗಳೂ ತಿಳಿಸುತ್ತವೆ. ಇವು ದೇಶವನ್ನು, ಭಾಷೆಯನ್ನು ಸಮಾನವಾಗಿ ಸೂಚಿಸುವ ಪದಗಳಾಗಿವೆ.

ಕನ್ನಡ ನಾಡು-ನುಡಿ ಕಾವ್ಯಗಳಲ್ಲಿ ಪ್ರಕಟಗೊಂಡ ಬಗೆಯನ್ನು ಕುರಿತಾದ ಸಮಗ್ರ ಅಧ್ಯಯನ ಈವರೆಗೆ ನಡೆದಿಲ್ಲವೆಂದೇ ಹೇಳಬಹುದು. 'ನವೋದಯ ಪ್ರಜ್ಞೆ ಮತ್ತು ನಾಡು-ನುಡಿ' ಮತ್ತು 'ಪುತಿನ, ಬೇಂದ್ರೆ, ಕುವೆಂಪು ಕಾವ್ಯಗಳಲ್ಲಿ ನಾಡು-ನುಡಿ' ಎಂಬ ಎರಡು ಎಂ.ಫಿಲ್ ಅಪ್ರಕಟಿತ ಪ್ರಬಂಧಗಳು ಹೊರಬಂದಿವೆ. ಆಧುನಿಕ ಪೂರ್ವದಿಂದ ಇದುವರೆಗಿನ ಕಾವ್ಯಗಳಲ್ಲಿ ನಾಡು-ನುಡಿಯೆಂಬ ಪರಿಕಲ್ಪನೆ ಹೇಗೆ ವೈವಿಧ್ಯಮಯವಾಗಿ ಮೂಡಿ ಬಂದಿದೆಯೆಂಬ ಅಧ್ಯಯನ ನಡೆಯಬೇಕಾಗಿದೆ. ವಸಾಹತುಶಾಹಿಯ ಪ್ರತಿಭಟನೆಯಾಗಿ ಐರೋಪ್ಯ ಕೇಂದ್ರಿತ ಕಲ್ಪನೆ ಭಾರತದಲ್ಲಿ ಮೂಡಿ ಬಂದ ಬಗೆ ಮತ್ತು ಇದಕ್ಕೆ ಕನ್ನಡ ಕವಿಗಳು ಪ್ರತಿಕ್ರಿಯಿಸಿದ ರೀತಿಯ ಕುರಿತು ಚರ್ಚೆ ನಡೆದಿದೆ.

ಕರ್ನಾಟಕದ ಕುಲಪುರೋಹಿತರಾದ ಆಲೂರು ವೆಂಕಟರಾಯರು ಕನ್ನಡಿಗರನ್ನು ಜಾಗೃತಗೊಳಿಸುವ ಸದಾಶಯ ಹೊಂದಿದವರು. 'ಕರ್ನಾಟಕ ಗತವೈಭವ'ದಲ್ಲಿ ಆ ಹೊತ್ತಿಗಾಗಲೇ ಕನ್ನಡಿಗರು ಮರೆತಿದ್ದ ವೈಭವದ ಕರ್ನಾಟಕವನ್ನು ಪರಿಚಯಿಸಿ ಇತಿಹಾಸದ ಪ್ರಾಮುಖ್ಯತೆಯನ್ನು

ಹೇಳುತ್ತ ಕನ್ನಡಿಗರಿಗೆ ಕರೆಕೊಟ್ಟವರು. ೧೯೧೭ರಲ್ಲಿ ಪ್ರಕಟಗೊಂಡ ಈ ಕೃತಿಯು ಯುಗಪ್ರವರ್ತಕ ಕೃತಿಯಾಯಿತು. ಮಿಕ್ಕ ರಾಷ್ಟ್ರ ಬಂಧುಗಳಲ್ಲಿದ್ದ ಪೂರ್ವಸಿದ್ಧತೆಯ ತಿಳುವಳಿಕೆ, ಅವರ ಉನ್ನತಿಯ ಕ್ರಮ, ಕನ್ನಡಿಗರು ಸದ್ದಿಲ್ಲದೆ ಮಲಗಿದ ಸ್ಥಿತಿಯ ಬಗೆಗೆ ಅನೇಕ ವಿಚಾರಗಳನ್ನು ಚರ್ಚಿಸಿದೆ. ಆಲೂರರ ಪ್ರಕಾರ ಕರ್ನಾಟಕ ಮಾತ್ರ ಕನ್ನಡ ಭಾಷೆಯನ್ನಾಡುವ ಪ್ರದೇಶವಾಗಿತ್ತು. ಮುಂದೆ ಬರಬರುತ್ತ ಕರ್ನಾಟಕವೆಂಬ ಭಾಗವೇ ಹೆಚ್ಚು ಪ್ರಬಲವಾದುದರಿಂದ ಅದೇ ಹೆಸರು ಕನ್ನಡ ದೇಶಕ್ಕೆಲ್ಲ ರೂಢವಾಯಿತು ಮತ್ತು ಇತಿಹಾಸ ದೃಷ್ಟಿಯಿಂದ ನೋಡಿದರೆ ಕನ್ನಡ ದೇಶಕ್ಕೆಲ್ಲ ಕರ್ನಾಟಕವೆಂಬ ಹೆಸರೇ ಒಪ್ಪುತ್ತದೆ. ಏಕೆಂದರೆ, ಕನ್ನಡ ಭಾಷೆಗೆ ಕರ್ನಾಟಕ ಅಥವಾ 'ಕರ್ಣಾಟಕ'ಎಂಬ ಹೆಸರಿನಿಂದ ಬಹು ಪುರಾತನದಿಂದಲೂ ಗುರುತಿಸಲಾಗಿದೆ. ಚಾಲುಕ್ಯರ ದಂಡಿಗೆ 'ಕರ್ನಾಟಕಬಲ'ವೆಂಬ ಹೆಸರಿರುವುದಾಗಿ ಶಿಲಾಲಿಪಿಯಿಂದ ತಿಳಿದು ಬರುತ್ತದೆಂಬುದನ್ನು ಆಲೂರರು ಗುರುತಿಸಿದ್ದಾರೆ. ನಾಡಿನ ವಿಸ್ತಾರವನ್ನು ಕುರಿತು ಚರ್ಚಿಸುತ್ತ 'ಕರ್ನಾಟಕವು ಮೃತರಾಷ್ಟ್ರವಲ್ಲ, ಜೀವಂತರಾಷ್ಟ್ರ, ಪ್ರತಿಭಾಸಂಪನ್ನವಾದ ರಾಷ್ಟ್ರ' ಎನ್ನುತ್ತಾರೆ. ಕನ್ನಡದ ಜನತೆ ಎಚ್ಚೆತ್ತುಕೊಳ್ಳುವ ನೆಲೆಯಿಂದ ಆ ಕಾಲಕ್ಕೆ ಆಲೂರರ ಅಲೋಚನೆಗಳು ಪ್ರಸ್ತುತವೆನಿಸಿದ್ದವು.

ಟಿ.ವಿ. ವೆಂಕಟಾಚಲಶಾಸ್ತ್ರಿ ಅವರ 'ನಮ್ಮ ಕರ್ನಾಟಕ' ಕೃತಿಯು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಆಕರ ಗ್ರಂಥ. ಈ ಕೃತಿಯ 'ಕನ್ನಡ ಕರ್ನಾಟಕ: ಶಬ್ದಗಳ ಪ್ರಾಚೀನತೆ ಮತ್ತು ಪ್ರಯೋಗಗಳು' ಎಂಬ ಲೇಖನವು ಈ ಎರಡು ಶಬ್ಧಗಳ ವ್ಯುತ್ಪತ್ತಿ ಮತ್ತು ಪ್ರಾಚೀನತೆಯ ಕುರಿತಾಗಿ ಚರ್ಚಿಸಿದೆ. ಕಾವ್ಯಗಳಲ್ಲಿ ಕನ್ನಡ ಶಬ್ದದ ಬಳಕೆಯಾದ ಬಗೆಯನ್ನು ಗುರುತಿಸುತ್ತಾ, ಬರಬರುತ್ತಾ 'ಕನ್ನಡ' ಪದದ ವ್ಯಾಪ್ತಿ ಬೆಳೆಯುತ್ತ ಹೋಯಿತು. ಹೀಗೆ ಬೆಳೆದ ಈ ಶಬ್ದವನ್ನು ಈಗ ಸಾಮಾನ್ಯವಾಗಿ ಭಾಷಾ ಸೂಚಕವಾಗಿಯೇ ನಾಡಿನ ಜನ ಬಳಸುತ್ತಾರೆ. 'ಕನ್ನಡಿಗ' ಎನ್ನುವುದು ಕುಲನಾಮವನ್ನು ಗುರುತಿಸುವ ನೆಲೆಯಿಂದ ಚಾವುಂಡರಾಯನ 'ಲೋಕೋಪಕಾರ'ದಲ್ಲಿ ಬಳಕೆಯಾಗಿದೆ. ಅಲ್ಲದೆ ಸಂಗೀತಶಾಸ್ತ್ರದ ಪರಿಧಿಯಲ್ಲಿಯೂ ಇದರ ಬಳಕೆಯಾಗಿದೆ ಎಂಬುದನ್ನು ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು ಸಾಧಾರವಾಗಿ ವಿವರಿಸಿದ್ದಾರೆ. ಬೇರೆ ಬೇರೆ ಕವಿಗಳ ನಿದರ್ಶನದೊಂದಿಗೆ ಪ್ರಸ್ತುತ ಚರ್ಚೆಯನ್ನು ಮುಂದುವರಿಸಿ ರಾಜ್ಯ ಕರ್ನಾಟಕ, ರಾಜ್ಯದ ಭಾಷೆ 'ಕನ್ನಡ' ಎಂಬ ಬಳಕೆಯ ವಿಚಾರವನ್ನು ಮುಂದಿಡುತ್ತಾರೆ. ಕರ್ನಾಟಕದ ಭೌಗೋಳಿಕ ವ್ಯಾಪ್ತಿ, ಮೇಲ್ಮೈಲಕ್ಷಣ, ಜನಾಂಗಿಕ ಹಿನ್ನೆಲೆ, ಪರಂಪರೆ, ದೊರೆಗಳ ಆಳ್ವಿಕೆಯ ವಿಚಾರಗಳ ಕುರಿತು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

'ಕನ್ನಡ ಭಾಷೆಯ ಚರಿತ್ರೆ' ಕೃತಿಯಲ್ಲಿ ಟಿ.ವಿ. ವಸಂತಕುಮಾರರ 'ಕನ್ನಡದ ಪ್ರಾಚೀನತೆ, ಉತ್ಪತ್ತಿ, ಸಂಸ್ಕೃತ ಸಂಬಂಧ, ಉಪ ಭಾಷೆಗಳು' ಎಂಬ ಲೇಖನದಲ್ಲಿ ಕನ್ನಡವನ್ನು ಪ್ರದೇಶವಾಚಿ ಪದವಾಗಿ ಗುರುತಿಸಿ ಇಲ್ಲಿ ಬದುಕಿದ ಜನಾಂಗವನ್ನು ಕನ್ನಡಿಗರೆಂದೂ, ಬಳಸುತ್ತಿದ್ದ ಭಾಷೆಯನ್ನು ಕನ್ನಡವೆಂದೂ ಚರ್ಚಿಸಲಾಗಿದೆ. ನಾಡು-ನುಡಿಯ ಪ್ರಾಚೀನತೆಯ ಕುರಿತಾದ ಚರ್ಚೆಯು ಇಲ್ಲಿಯ ಲೇಖನಗಳ ಮುಖ್ಯ ನೆಲೆಯಾಗಿದೆ. ಕನ್ನಡ ಪದದ ವ್ಯುತ್ಪತ್ತಿಯ ಕುರಿತಾದ ವಾದಗಳನ್ನು ಗುರುತಿಸುತ್ತಾ, ಕರ್ಣಾಟ ಅಥವಾ ಕರ್ಣಾಟಕ 'ರಾಮಾಯಣ' ಮಹಾಭಾರತ' ಕಾಲದಿಂದಲೂ ಇತ್ತು ಎಂಬುದನ್ನು ಸಾಧಾರಣವಾಗಿ ಗುರುತಿಸಿದ್ದಾರೆ. ಮಹಾಭಾರತದ 'ಸಭಾಪರ್ವ' 'ಭೀಷ್ಮ ಪರ್ವ'ದಲ್ಲಿ ಈ ಪದಗಳ ಉಲ್ಲೇಖ ನಾಡಿನ ಹೆಸರಾಗಿಯೇ ಬಳಕೆಯಾದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ 'ಕನ್ನಡ' ಶಬ್ದದ ವ್ಯುತ್ಪತ್ತಿಯ ಎರಡು ವಾದಗಳನ್ನು ಗಮನಿಸಲಾಗಿದೆ. ವಿದ್ವಾಂಸರ ವಾದಗಳನ್ನು ಕ್ರೋಡೀಕರಿಸಿ ಬಹುಜನರಿಂದ ಒಪ್ಪಿತವಾದ ದೇಸೀಮೂಲವನ್ನು ಗುರುತಿಸಿದ್ದಾರೆ.

ಏಕೀಕರಣೋತ್ತರ ಐವತ್ತು ವರ್ಷಗಳ ಕನ್ನಡ ಜಗತ್ತು ಮತ್ತು ಭಾಷೆಯ ನೆಲೆಯಲ್ಲಾದ ಬದಲಾವಣೆಗಳನ್ನು ಕುರಿತು ಕೆ.ವಿ.ನಾರಾಯಣ ಅವರ 'ಕನ್ನಡ ಜಗತ್ತು ಅರ್ಧಶತಮಾನ' ಕೃತಿಯು ಚರ್ಚಿಸುತ್ತದೆ. ಭಾಷೆ ಎದುರಿಸಿದ ಅಪಾಯಗಳ, ಆತಂಕಗಳ ಹಿಂದಿರುವ ಕಾರಣಗಳನ್ನು ಇದು ಶೋಧಿಸುತ್ತದೆ. ಇದೊಂದು ಚಿಂತನಾ ಪ್ರಧಾನ ಕೃತಿಯಾಗಿದ್ದು ಇಲ್ಲಿ ವಿವರಣೆಗಿಂತ ವಿಶ್ಲೇಷಣೆಗೆ ಮಹತ್ವ ನೀಡಲಾಗಿದೆ. ಏಕೀಕರಣ ಸಂದರ್ಭದ ಕನ್ನಡದ ಸ್ವರೂಪ, ಭಾಷಾನೀತಿ, ಕನ್ನಡ ರಚನೆಯಲ್ಲಾಗಿರುವ ಪಲ್ಲಟಗಳು, ಕನ್ನಡ ಚಳುವಳಿಗಳು, ಕನ್ನಡದ ಗುರುತುಗಳು ಮೊದಲಾದ ಕನ್ನಡಪರ ವಿಚಾರಗಳನ್ನು ವಿಸ್ತೃತವಾಗಿ ವಿಶ್ಲೇಷಿಸಲಾಗಿದೆ. ಭಾಷೆಗೆ ಸಂಬಂಧಿಸಿದ ಯಾವ ಸಂಗತಿಯೂ ಈಗ ಭಾಷೆಗೆ ಮಾತ್ರ ಸಂಬಂಧಿಸಿದ್ದಾಗಿ ಉಳಿದಿಲ್ಲ. ಸಮಾಜದ ವಿವಿಧ ವಲಯದ ಹತ್ತಾರು ಒತ್ತಡಗಳು ಭಾಷೆಯ ಸ್ಥಿತಿಗತಿಗಳನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡಿವೆ. ಕನ್ನಡಕ್ಕೆ ಅಪಾಯ ಒದಗಿ ಬಂದಿದೆಯೆನ್ನುವುದು ದಿನದಿನದ ಸಂಗತಿಯಿಂದ ತಿಳಿಯುವಂತದ್ದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಶಂಗಂ ತಮಿಳಿಗಂ ಮತ್ತು ಕನ್ನಡ ನಾಡು-ನುಡಿ' ಕೃತಿಯಲ್ಲಿ ಷ. ಷಟ್ಟರ್ ಪ್ರಾಚೀನ ತಮಿಳು ಪರಂಪರೆಯನ್ನು ತೆರೆದಿಟ್ಟಿದ್ದಾರೆ. ಕವಿರಾಜಮಾರ್ಗಕಾರನು ಕನ್ನಡ ಪರಂಪರೆಯೊಂದಿಗೆ ಹೊಂದಿದ ಸಂಬಂಧವನ್ನು ಕುರಿತು ಪ್ರಶ್ನಿಸಿದ್ದಾರೆ. 'ಕವಿರಾಜ ಮಾರ್ಗ'ದ ಕರ್ತೃ, ಕಾಲ, ದೇಶದ ಬಗೆಗೆ ಸಾಕಷ್ಟು ಚರ್ಚೆಯಾಗಿದೆ. ಷಟ್ಟರ್ ಪ್ರಸ್ತಾಪಿಸುವ ವಿಚಾರಗಳನ್ನು ಗಮನಿಸಿದರೆ

ಇತಿಹಾಸಕಾರನೊಬ್ಬನ ವಿಶಿಷ್ಟ ಪ್ರತಿಭೆ ಹೇಗೆ ನೂತನ ಸಂಶೋಧನೆಗಳನ್ನು ಮಾಡಬಲ್ಲುದೆಂಬುದನ್ನು ಗಮನಿಸಬಹುದು. ಇಲ್ಲಿ ಆರಂಭದ ಕರ್ನಾಟಕದ ಇತಿಹಾಸದ ಪರಿಚಯವಾಗುತ್ತದೆ. 'ವಡುಗ'ರನ್ನು ಪರಿಚಯಿಸುತ್ತ ಅವರ ನೆಲೆ- ನಿಲುವುಗಳನ್ನು ವಿಶ್ಲೇಷಿಸುತ್ತಾ ಕನ್ನಡಿಗರು ತಮ್ಮನ್ನು ತಾವು ಅರ್ಥಮಾಡಿಕೊಳ್ಳಲು ಶಂಗಂ ಸಾಹಿತ್ಯವನ್ನು ಪ್ರಸ್ತುತಗೊಳಿಸಿಕೊಳ್ಳಬೇಕಾದ ಅವಶ್ಯಕತೆಯನ್ನು ಮನವರಿಕೆ ಮಾಡುತ್ತಾರೆ. ಭಾರತೀಯತೆಯ ಬಗ್ಗೆ, ಕನ್ನಡದ ಬಗ್ಗೆ, ತಮಿಳು-ಕನ್ನಡ ಬಾಂಧವ್ಯದ ಬಗ್ಗೆ, ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಹೊಸ ರೀತಿಯ ಚಿಂತನೆ ಮತ್ತು ವಿಶ್ಲೇಷಣೆಗಳನ್ನು ಪ್ರೇರೇಪಿಸುವ ಇವರ ಕೃತಿ ಹೊಸ ಆಲೋಚನೆಗಳಿಗೆ ಎಡೆಮಾಡಿ ಕೊಡುತ್ತದೆ.

ಎಸ್.ಎಲ್. ಶೇಷಗಿರಿ ರಾವ್ ಅವರ 'ಕನ್ನಡ-ಕನ್ನಡಿಗ-ಕರ್ನಾಟಕ' ಕೃತಿಯು ಕನ್ನಡ ಪರ ಗೀತೆಗಳನ್ನು ಒಂದೆಡೆ ಸೇರಿಸುವ ಪ್ರಯತ್ನವನ್ನು ಮಾಡಿದೆ. ಅಲ್ಲದೆ ಕರ್ನಾಟಕದ ಬಗೆಗಿನ ಅನೇಕ ಮಾಹಿತಿಗಳ ಕುರಿತು ಚರ್ಚಿಸುತ್ತದೆ. ಕರ್ನಾಟಕದ ಸಂಕ್ಷಿಪ್ತ ಇತಿಹಾಸವನ್ನೊಳಗೊಂಡು ಕನ್ನಡವನ್ನು ದೈನಂದಿನ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಬಗೆ ಮತ್ತು ಕನ್ನಡ ಉತ್ಸವಗಳನ್ನು ಅರ್ಥಪೂರ್ಣವಾಗಿ ಆಚರಿಸುವ ಬಗೆಗೆ ಸಲಹೆಗಳನ್ನೂ ನೀಡುತ್ತದೆ. ಕರ್ನಾಟಕ ಏಕೀಕರಣ ಚಳುವಳಿಯು ನಡೆದು ಬಂದ ಹೆಜ್ಜೆ ಗುರುತುಗಳನ್ನು ಬಿಡಿಯಾದ ಲೇಖನಗಳ ಮೂಲಕ ದಾಖಲಿಸುವ ಪ್ರಯತ್ನ ಕೃಷ್ಣ ಕೊಲ್ಹಾರ ಕುಲಕರ್ಣಿ ಅವರ 'ಅಖಂಡ ಕರ್ನಾಟಕದ ಹೆಜ್ಜೆಗಳು' ಕೃತಿಯಲ್ಲಿದೆ. ಇಲ್ಲಿರುವ 'ಕಳೆದು ಹೋದ ಕನ್ನಡ', 'ಕನ್ನಡಕ್ಕಾಗಿ ಹುಡುಕಾಟ', 'ಕನ್ನಡಕ್ಕೆ ಜೀವ ತುಂಬಿದವರು' ಮುಂತಾದ ಲೇಖನಗಳು ನಾಡು-ನುಡಿಯ ಬಗೆಗೆ ಚಿಂತನೆ ನಡೆಸುತ್ತವೆ. ಇತಿಹಾಸದ ಬೇರೆ ಬೇರೆ ಕಾಲಘಟ್ಟದಲ್ಲಿ ರಾಜಕೀಯ ಕಾರಣಗಳಿಂದಾಗಿ ನಾಡು ಬೇರೆ ಬೇರೆ ಆಡಳಿತದಲ್ಲಿ ಹಂಚಿಹೋದುದು ವಾಸ್ತವ. ಆಗ ಅಸ್ಮಿತೆಯ ಹುಡುಕಾಟ ಅನಿವಾರ್ಯವಾದಾಗ ಕಾಣಿಸಿಕೊಂಡದ್ದು ಏಕೀಕರಣ ಚಳುವಳಿ. ಇದರ ಬಗೆಗಿನ ಚರ್ಚೆ ಪ್ರಸ್ತುತ ಲೇಖನದಲ್ಲಿದೆ.

ಕನ್ನಡ ನಾಡು-ನುಡಿಯ ಸೇವೆಗಾಗಿ ಪ್ರಬುದ್ಧ ಕರ್ನಾಟಕ ನೀಡಿರುವ ಕೊಡುಗೆಯನ್ನು ನಾನಾ ಮಜಲುಗಳಲ್ಲಿ ಸಮರ್ಪಕವಾಗಿ ಅಧ್ಯಯನಕ್ಕೆ ಒಳಪಡಿಸಿದ ಕೃತಿಯೆಂದರೆ ಶೇಖರ ಎನ್ ಅವರ 'ಪ್ರಬುದ್ಧ ಕರ್ನಾಟಕ ಮತ್ತು ನಾಡು-ನುಡಿ'. ಪತ್ರಿಕೆಯೊಂದು ಸಾಧಿಸಬಹುದಾದ ಸಾಧನೆಯ ವ್ಯಾಪ್ತಿ, ಎತ್ತರ, ಮಹತ್ತನ್ನು ವಿವರಿಸುವಲ್ಲಿ ಈ ಅಧ್ಯಯನ ಯಶಸ್ಸನ್ನು ಕಂಡಿದೆ.

ಮಾತ್ರವಲ್ಲ ಕನ್ನಡತನವನ್ನು ಗಟ್ಟಿಗೊಳಿಸುವ ಮಹತ್ತರ ಕಾರ್ಯವನ್ನು ಈ ಪತ್ರಿಕೆ ಮಾಡಿದ ಬಗೆಯನ್ನೂ ಕೃತಿಯಲ್ಲಿ ಚರ್ಚಿಸಲಾಗಿದೆ.

ಕನ್ನಡವನ್ನು ಕೇಂದ್ರವಾಗಿಸಿಕೊಂಡು ಬರಹಗಾರರು ಮಾಡಿದ ಭಾಷಣಗಳ ಲಿಖಿತ ರೂಪವೇ ನ.ರವಿಕುಮಾರ್ ಅವರ 'ನಮಗೆ ಬೇಕಾದ ಕನ್ನಡ' ಬಿ.ಎಂ.ಶ್ರೀ, ಕುವೆಂಪು, ಅನಂತಮೂರ್ತಿ, ರಾಜೇಂದ್ರ ಚೆನ್ನಿ ಮುಂತಾದವರ ಭಾಷಣಗಳು, ಸಾಂಸ್ಕೃತಿಕವಾಗಿ ಚಾರಿತ್ರಿಕ ಮಹತ್ವವುಳ್ಳ ಆಕರಗಳಾಗಿವೆ. 'ಕನ್ನಡಮ್ಮ: ಹೆಣ್ಣು ಸಂಕಥನದ ನಾಡು-ನುಡಿಯ ರೂಪಕ ಪ್ರತೀಕಗಳು' ಎಂಬುದು ಸಿ.ಆರ್. ಗೋವಿಂದರಾಜು ಇವರ ಕೃತಿ. ಇದು ಕನ್ನಡ ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡಿದ್ದು, ಕನ್ನಡ ನಾಡು -ನುಡಿಯ ರೂಪಕ ಪ್ರತೀಕಗಳನ್ನು ಶೋಧಿಸಿ ಅನಾವರಣಗೊಳಿಸುವ ಕೆಲಸವನ್ನು ಇಲ್ಲಿ ಮಾಡಲಾಗಿದೆ. 'ಕನ್ನಡಮ್ಮ' ಶಾಂತ ಕವಿಗಳಲ್ಲಿ 'ಕ್ರಾಂತಿಕಾಳಿ'ಯಾಗಿ ಮೂಡಿ ಬಂದ ಬಗೆಯನ್ನು ಗುರುತಿಸಲಾಗಿದೆ. ಕೃತಿಯ ಕೊನೆಯಲ್ಲಿ ನಾಡು-ನುಡಿಯ ಕುರಿತು ಬರೆದಿರುವ ಅನೇಕ ಕವಿಗಳ ಕವನಗಳ ಪಟ್ಟಿಯನ್ನು ನೀಡಲಾಗಿದೆ.

ಬಿ.ಎಂ. ಶ್ರೀಯವರು ಕನ್ನಡ ನಾಡು-ನುಡಿಯ ಹೆಮ್ಮೆಯನ್ನು ಸಾರಿರುವ ಕವಿತೆಗಳನ್ನು 'ಕನ್ನಡದ ಬಾವುಟ' ಕೃತಿಯಲ್ಲಿ ಪ್ರಕಟಿಸಿದ್ದಾರೆ. ನಾಲ್ಕು ತೆನೆಗಳಾಗಿ ವಿಭಾಗಿಸಿಕೊಂಡು ಶಾಸನಗಳ ಪೂರ್ವ ಸಾಹಿತ್ಯ, ನಾಡ ಪದಗಳು ಮತ್ತು ಇಂದಿನ ಹೊಸ ಕವಿತೆ ಎಂಬುದಾಗಿ ವರ್ಗೀಕರಣ ಮಾಡಿದ್ದಾರೆ. ಕನ್ನಡ ಬರವಣಿಗೆಯಲ್ಲಿ ಬದಲಾವಣೆಗೆ ಪ್ರಯತ್ನಿಸಿದ ಬಗೆಯು ಇಲ್ಲಿದೆ. ದೀರ್ಘ ಚಿಹ್ನೆಯ ಬಳಕೆಯಲ್ಲಿ ಒತ್ತಕ್ಷರಗಳ ಸಂದರ್ಭದಲ್ಲಿ ಈ ವ್ಯತ್ಯಾಸಗಳನ್ನು ತಮ್ಮದೇ ಕವಿತೆ 'ಕನ್ನಡದ ಬಾವುಟ'ದಲ್ಲಿ ಪ್ರಾಯೋಗಿಕವಾಗಿ ಗುರುತಿಸಿದ್ದಾರೆ.

ರಾಜಶೇಖರ ಮಠಪತಿ ಅವರ 'ಕನ್ನಡಕ್ಕೊಂದು ಕೈಪಿಡಿ' ಕೃತಿಯಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಲೇಖನಗಳಿವೆ. 'ಕನ್ನಡ ಅನ್ಯದೊಂದಿಗೆ ಅನುಸಂಧಾನ', 'ಕನ್ನಡ ಬರೀ ಭಾಷೆಯಲ್ಲ', 'ಕನ್ನಡ ಕರ್ನಾಟಕ ನಿಮಗೆಷ್ಟು ಗೊತ್ತು' ಮೊದಲಾದ ಲೇಖನಗಳು ಕನ್ನಡದ ಬಗೆಗೆ ಹೊಸ ಬೆಳಕು ಚೆಲ್ಲುತ್ತವೆ. ಭಾಷೆಗಳ ಮೇಲಾಗುತ್ತಿರುವ ಜಾಗತಿಕ ಪರಿಣಾಮ, ಅದರಿಂದಾಗಿ ಎದುರಿಸಬೇಕಾದ ಸವಾಲುಗಳನ್ನು ಚಿಂತಿಸಿದ್ದಾರೆ. ಕನ್ನಡ ಭಾಷೆ ತನ್ನ ಇತಿಹಾಸದುದ್ದಕ್ಕೂ ಅನ್ಯ ಭಾಷೆಗಳ ಜೊತೆಯಲ್ಲಿ ಅನುಸಂಧಾನ ಮಾಡಿಕೊಳ್ಳುತ್ತಲೇ ಬಂದಿದೆ. ಕನ್ನಡ ಸಂಸ್ಕೃತದ ಜೊತೆಗಿನ ಅನುಸಂಧಾನವನ್ನು ಕುರಿತು ನಡೆದಿರುವಷ್ಟು ಅಧ್ಯಯನ ಇತರ ಭಾಷೆಗಳ ನೆಲೆಯಿಂದ ನಡೆದಿಲ್ಲ. ಇಂತಹ ಅಧ್ಯಯನ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ

ತರಬಹುದೆಂಬ ಅಭಿಪ್ರಾಯ ಇಲ್ಲಿದೆ. ಕುವೆಂಪು ಅವರ ವಿಚಾರ ಕ್ರಾಂತಿಗೆ ಆಹ್ವಾನದಲ್ಲಿ 'ಕರ್ನಾಟಕ ಇಟ್ಟ ಹೆಸರು ಕೊಟ್ಟ ಮಂತ್ರ' ಎಂಬ ಲೇಖನದಲ್ಲಿ ಕನ್ನಡದ ಬಗೆಗಿನ ಚರ್ಚೆ ಇದೆ. ಕರ್ನಾಟಕ ಎಂಬ ಹೆಸರಾದ ನಂತರ ನಾಡಿನಲ್ಲಿ ಕನ್ನಡವೇ ಸಾರ್ವಭೌಮ ಭಾಷೆಯಾಗಿರಬೇಕು. ತ್ರಿಭಾಷಾ ಸೂತ್ರದ ಅಗತ್ಯ ನಮಗಿಲ್ಲ. ದ್ವಿಭಾಷೆ ಎಂಬುದು ನಮಗೆ ಕ್ಷೇಮಕರವಾದ ಲಾಭದಾಯಕವಾದ ಸೂತ್ರವೆಂಬುದನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

ಬರಗೂರರ 'ಕನ್ನಡಾಭಿಮಾನ' ಎಂಬ ಲೇಖನವೂ ಈ ದೃಷ್ಟಿಯಿಂದ ಗಮನಾರ್ಹವಾದುದು. ಎಲ್ಲ ಕಾಲಘಟ್ಟದಲ್ಲಿಯೂ ಭಾಷಾಭಿಮಾನವೆನ್ನುವುದು ಒಂದೇ ಮಾದರಿಯಲ್ಲಿರುವುದಿಲ್ಲ. ಅಂದಂದಿನ ಚಲನಶೀಲತೆಗನುಗುಣವಾಗಿ ಚಿಂತನೆಯ ಸ್ವರೂಪ ನಿರ್ಧಾರವಾಗುವುದಿಲ್ಲವೇ? ಭಾಷಾಭಿಮಾನ ತನ್ನ ಮೂಲ ನೆಲೆಗಳನ್ನು ಬಿಟ್ಟುಕೊಡದೆ ಬದಲಾಗುತ್ತಿರುವ ಸನ್ನಿವೇಶಕ್ಕನುಗುಣವಾಗಿ ಹೊಸ ಸವಾಲುಗಳಿಗೆ ಉತ್ತರ ಹುಡುಕುವ ಗಟ್ಟಿತನವನ್ನು ಪಡೆಯಬೇಕಲ್ಲವೇ? ಹೀಗೆ ಅನೇಕ ಪ್ರಶ್ನೆಗಳನ್ನು ಹಾಕಿಕೊಳ್ಳುವುದು ಅಗತ್ಯವೆನ್ನುವ ಅಭಿಪ್ರಾಯಗಳ ಕುರಿತಂತೆ ಚಿಂತನೆಗೆ ಹಚ್ಚುತ್ತದೆ. ಕನ್ನಡಾಭಿಮಾನವನ್ನು ಕುರಿತು ಚರ್ಚಿಸುತ್ತಾ ಜನರ ಬದುಕಿನ ಭಾಗವಾದ ಭಾಷೆಯನ್ನು, ಭಾಷೆಯ ಮೂಲ ದ್ರವ್ಯವಾಗಿ ಬದುಕನ್ನು ಪರಿಭಾವಿಸಿ ಬೆಳೆಯುವ ಚಿಂತನೆಯು ಕನ್ನಡ ಮತ್ತು ಕನ್ನಡಿಗರನ್ನು ಒಟ್ಟಾಗಿ ಗ್ರಹಿಸುವ ಗಟ್ಟಿತನವನ್ನು ತಂದುಕೊಡುತ್ತದೆ ಎಂಬ ಅಭಿಪ್ರಾಯವನ್ನು ಮುಂದಿಟ್ಟಿದ್ದಾರೆ. ವಿಶ್ವನಾಥ ಅವರ 'ಪರಿಶೀಲನಾ' ಕೃತಿಯು ಪಂಪನು ಕನ್ನಡ ಜನರ ಸಾಂಸ್ಕೃತಿಕ ಸಂಪತ್ತನ್ನೂ, ಸ್ವಾಭಿಮಾನ ಹಾಗೂ ಶ್ರೇಷ್ಠತೆಯನ್ನು ವಿಶಿಷ್ಟವಾಗಿ ವರ್ಣಿಸಿದ ಬಗೆಯನ್ನು ಚರ್ಚಿಸುತ್ತ ಈತನ ಕೃತಿ ಕನ್ನಡ ನೆಲ, ಜಲ, ಭಾಷೆಯ ಅಭಿವ್ಯಕ್ತಿಯೇ ಆಗಿದೆಯೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

ಕಾ.ವೆಂ. ಶ್ರೀನಿವಾಸಮೂರ್ತಿಯವರ 'ಕನ್ನಡಪರ ಚಿಂತನೆ ಮತ್ತು ಪರಂಪರೆ' ಕೃತಿಯು ಬೇರೆ ಬೇರೆ ಕಾಲಘಟ್ಟದ ಕನ್ನಡ ಕಾವ್ಯಗಳನ್ನು ಮುಖ್ಯ ಭೂಮಿಕೆಯಲ್ಲಿಟ್ಟುಕೊಂಡು ನಾಡು-ನುಡಿಯ ಬಗೆಗಿನ ಚಿಂತನೆಯ ಸ್ವರೂಪವನ್ನು ಕುರಿತು ಚರ್ಚಿಸಿದೆ. ನುಡಿ ಮತ್ತು ನಾಡು ಎನ್ನುವುದನ್ನು ಕೇವಲ ಅಭಿಮಾನದ ನೆಲೆಯಿಂದ ಗ್ರಹಿಸದೆ ರಾಜಪ್ರಭುತ್ವ, ಪರಕೀಯಪ್ರಭುತ್ವ, ಪ್ರಜಾಪ್ರಭುತ್ವ ಎಂಬ ನೆಲೆಯಿಂದ ಚರ್ಚಿಸುತ್ತಾ ಹೊಸ ಆಲೋಚನೆಗಳನ್ನು ಈ ಕೃತಿ ಮುಂದಿಡುತ್ತದೆ.

ಮೇಲಿನ ವಿಚಾರಗಳನ್ನು ಗಮನಿಸುವಾಗ, ಕಾವ್ಯಗಳಲ್ಲಿ ನಾಡು-ನುಡಿಯ ಕಲ್ಪನೆ ಮೂಡಿ ಬಂದ ಬಗೆಗಿನ ಸಮಗ್ರ ಅಧ್ಯಯನ ನಡೆದಿಲ್ಲವೆಂದು ಪರಿಭಾವಿಸಿಬಹುದು. ಅಲ್ಲದೆ ಪ್ರಸ್ತುತ ಈ

ಅಧ್ಯಯನವು ಈವರೆಗೆ ನಡೆದ ಅಧ್ಯಯನಗಳಿಂದ ಭಿನ್ನವಾಗಿರುತ್ತದೆ. ಯಾಕೆಂದರೆ ರಾಷ್ಟ್ರವೆಂಬ ಪರಿಕಲ್ಪನೆ ಸ್ಥಳೀಯ ಕಲ್ಪನೆಯಾಗಿ ರೂಪುಗೊಂಡ ಬಗೆ ಹೇಗೆ ಮತ್ತು ಕಾಲದಿಂದ ಕಾಲಕ್ಕೆ ಈ ಪರಿಕಲ್ಪನೆಯ ಕುರಿತು ಬದಲಾದ ಮನೋಧರ್ಮದ ಹಿನ್ನೆಲೆ ಯಾವುದು? ಎಂಬುದರ ಚರ್ಚೆ ಇಲ್ಲಿ ಮುಖ್ಯವಾಗುತ್ತದೆ. ನಾಡು ಮತ್ತು ನುಡಿ ಪರಸ್ಪರ ಒಂದನ್ನೊಂದು ಅವಲಂಬಿಸಿದ್ದು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾದದ್ದರಿಂದ ಅಧ್ಯಯನದ ದೃಷ್ಟಿಯಿಂದ ಅವುಗಳನ್ನು ಬೇರೆಯಾಗಿಯೇ ಪರಿಗ್ರಹಿಸಬೇಕಾಗಿದೆ.

**ನಾಡು–ನುಡಿ ಪರಿಕಲ್ಪನೆಯ ಸಾಮಾನ್ಯ ಸ್ವರೂಪ**

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಸಂದರ್ಭವನ್ನು ಗಮನಿಸಿದಾಗ, ಕವಿಗಳು ನಾಡು–ನುಡಿಯ ಅಭಿಮಾನವನ್ನು ಗುರುತಿಸಿದ ಬಗೆ ವಿಶಿಷ್ಟವಾದುದು. ತಾಯಿ ಮತ್ತು ತಾಯ್ನಾಡು ಸ್ವರ್ಗಕ್ಕಿಂತಲೂ ಶ್ರೇಷ್ಠವಾದುದೆಂಬ ಮಾತು ಬರಿಯ ಭಾವುಕತೆಯ ಮಾತಲ್ಲ. 'ತಾಯ್ನಾಡು' ಎನ್ನುವುದು ಹುಟ್ಟಿದೊಡನೆ ಅಂಟಿಕೊಂಡು ಬಂದ ನಂಟು. ತಾಯ್ನುಡಿಗಿಂತ ಮಿಗಿಲಾದ ಭಾಷೆಯೂ ಇಲ್ಲ; ತಾಯ್ನಾಡಿಗಿಂತ ಶ್ರೇಷ್ಠವಾದ ನೆಲವಿಲ್ಲ. ನೋವಿನಲ್ಲಿ ಬರುವ ಉದ್ಗಾರವೂ ಅವರವರ ತಾಯ್ನುಡಿಯಲ್ಲಿಯೇ ಇರುತ್ತದೆ. ಬಾಲ್ಯದಲ್ಲಿ ಮನೆಯಂಗಳದಲ್ಲಿ ಆಡಿ–ಪಾಡಿದ ನುಡಿಯೂ ಇದೇ ಆಗಿರುತ್ತದೆ.

ನಾಡು–ನುಡಿಯ ಸಾಮಾನ್ಯ ಸ್ವರೂಪದ ಕುರಿತು ಇಲ್ಲಿ ಚರ್ಚಿಸಲಾಗಿದೆ. ತಾವು ಬೆಳೆದ ಪರಿಸರ, ಅಲ್ಲಿಯ ಮಣ್ಣು ಮಾನವರ ಕಣ್ಣಿನಲ್ಲಿ ದೈವತ್ವವನ್ನು ಪಡೆದುಕೊಳ್ಳುತ್ತದೆ. ಕನ್ನಡ ಸಾಹಿತ್ಯವನ್ನು ಅರ್ಥೈಸಿಕೊಳ್ಳುವಾಗ 'ನಾಡು' ಎನ್ನುವುದು ಅಲ್ಲಿ ಜಡವಾಗಿ ಕಾಣದೆ ಅದೊಂದು ಚೈತನ್ಯವಾಗಿ ಕಂಡಿದೆ. ಈ ಚೈತನ್ಯದ ಸರಕಾಗಿರುವ ನಾಡನ್ನು ಕನ್ನಡ ಕವಿಗಳು ಸಂದರ್ಭೋಚಿತವಾಗಿ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. 'ನಾಡು' ಎನ್ನುವುದು ತನ್ನ ವಾಸದ ಸ್ಥಾನವೆಂಬ ಅಭಿಮಾನಕ್ಕೆ ಒಳಗಾಗುವುದು ಸಹಜ. ನಾಡು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ನೆಲೆ–ಬೆಲೆಯೊಂದಿಗೆ ಘನವಾಗಿರಬೇಕಾದರೆ ನಡೆ–ನುಡಿ ಎಂಬ ಪರಿಕಲ್ಪನೆಗಳು ಒಮ್ಮುಖವಾಗಿರಬೇಕಾಗುತ್ತದೆ.

ವೈಭವ, ಸುವರ್ಣಯುಗ, ಶ್ರೇಷ್ಠತೆ, ಅಭಿಮಾನ, ಅನಿವಾರ್ಯತೆ ಮೊದಲಾದ ಚೌಕಟ್ಟಿನೊಂದಿಗೆ ನಾಡಿನ ಕುರಿತಾದ ಚಿಂತನೆಯು ನಿರ್ಮಾಣಗೊಂಡದ್ದನ್ನು ಕಾಣಬಹುದು. ಈ ಹಿನ್ನೆಲೆಯೊಂದಿಗೆ 'ನಾಡು' ಎಂಬ ಪದದ ಬದಲಾದ ಹಾಗೂ ವಿಸ್ತಾರಗೊಂಡ ಅರ್ಥದ ಕುರಿತು ಇಲ್ಲಿ ಚರ್ಚಿಸಲಾಗಿದೆ. ಇದರ ಪಾರಂಪರಿಕ ಅರ್ಥ ಕಾಲದಿಂದ ಕಾಲಕ್ಕೆ ವಿಕಾಸಗೊಂಡಿದೆ.

'ನಾಡು' ಮತ್ತು 'ನುಡಿ' ಎಂಬ ಪದಗಳನ್ನು ವ್ಯಾಖ್ಯಾನಿಸಿಕೊಳ್ಳುವಾಗ ಬದುಕು ಕ್ರಿಯಾಶೀಲವಾಗಿ, ಅನನ್ಯವಾಗಿ ಕಾಣಿಸಿಕೊಳ್ಳುವ ಎಲ್ಲ ಸಂಗತಿಗಳು ನಾಡಿನ ಭಾಗವೇ ಆಗಿವೆ ಎಂಬುದನ್ನು ಅರ್ಥೈಸಿಕೊಳ್ಳಬೇಕಾಗಿದೆ. ಗಿರಿ, ನದಿ, ಕೆರೆ, ಕೋಟೆ–ಕೊತ್ತಳ, ಅರಮನೆ, ಗುಡಿಗೋಪುರ, ಹಳ್ಳ –ಕೊಳ್ಳ, ಕಾಡು, ಪ್ರಾಣಿ–ಪಕ್ಷಿ, ನಿಸರ್ಗ, ಸಂಸ್ಕೃತಿ ಎಲ್ಲವೂ ಸೇರಿದ ಒಂದು ವಿಶಿಷ್ಟ ಪ್ರಪಂಚವೇ ನಾಡು. ಇದರ ಜೊತೆಗೆ ಪ್ರಾಕೃತಿಕ ಸಂಪತ್ತು, ಆಚಾರ–ವಿಚಾರ, ನಂಬಿಕೆ, ಸಂಪ್ರದಾಯ ಇವೆಲ್ಲ ನಾಡಿನ ಹಿರಿಮೆಯ ಭಾಗಗಳೇ ಆಗಿವೆ. ವೈವಾಹಿಕ ಸಂಬಂಧಗಳಲ್ಲಿ, ಕನ್ಯಾದಾನ ಮಾಡಿ ಹೆಣ್ಣನ್ನು ಕಳುಹಿಸಿಕೊಡುವ ಸಂದರ್ಭದಲ್ಲಿ ಕಾಣುವಂತಹ ಜನರ ನಡವಳಿಕೆಗಳು ಕೂಡಾ ನಾಡಿನ ಬದುಕಿನ ಭಾಗಗಳೇ ಆಗಿವೆ. ಕವಿಗಳು ಬಳಸಿದ ಗಾದೆಮಾತುಗಳು, ದೇಸಿನುಡಿಗಳು, ಕಾವ್ಯಭಾಷೆ, ನಿರ್ದಿಷ್ಟ ಪ್ರಾದೇಶಿಕ ನುಡಿಗಳು ಮುಂತಾದುವು ನುಡಿ ಪ್ರೇಮಕ್ಕೆ ಸಾಕ್ಷಿಯಾಗುತ್ತವೆ. ಮಾತು, ಬರಹ, ಭಾಷೆಯೇ ನುಡಿ. ಒಟ್ಟಿನಲ್ಲಿ ಇವೆರಡೂ ವ್ಯಾಖ್ಯಾನಕ್ಕೆ ಒಳಪಡಬಹುದಾದ ಪರಿಕಲ್ಪನೆಗಳು.

'ನಾಡು' ಎಂಬ ಪದದ ಬಗೆಗೆ ಚರ್ಚೆಗಳು ನಡೆದಿವೆ. ಇದು ದೇಸಿ ಪದ ಎಂಬ ಚರ್ಚೆಯೂ ಇದೆ. ಕೆ.ಎಮ್. ರಾಘವ ನಂಬಿಯಾರ್‌ರವರ ಪ್ರಕಾರ, ಬೇರೆ ಬೇರೆ ಭಾಷೆಗಳಲ್ಲಿ ಈ ಪದದ ಅರ್ಥವನ್ನು ಗ್ರಹಿಸುವುದಾದರೆ, ಸಂಸ್ಕೃತದಲ್ಲಿ 'ನಟಗತ್', 'ನಟವೃತ್ತೌ' ಎಂಬ ಪದಗಳಿವೆ. 'ನಟ' ಎಂಬ ಧಾತುವಿಗೆ 'ಚಲಿಸು' ಎಂಬರ್ಥವಿದೆ. ತಮಿಳಿನಲ್ಲಿ 'ನಟ' ಎಂದು ಬರೆದರೆ 'ನಡ' ಎಂದು ಓದುವುದು ರೂಢಿ. ನಡೆಯಿಂದಲೇ 'ನಾಡು' ಎಂದರೆ 'ನಡೆದಾಡುವ ಪ್ರದೇಶ'. ತಮಿಳಿನಲ್ಲಿ ನಾಡಿಗೆ 'ನಟವೈ' ಎನ್ನುತ್ತಾರೆ'. (೨೦೧೨ ಪು.೩೫)

ಮಲಯಾಳಂ ಭಾಷೆಯಲ್ಲಿ 'ನಾಟ್ಟ್' ಎಂಬ ಪದ 'ನಾಡು' ಎಂಬರ್ಥವನ್ನು ನೀಡುತ್ತದೆ. ಕೊಡವ ಭಾಷೆಯಲ್ಲಿ 'ಸೀಮೆ' ಎಂಬರ್ಥವಿದೆ. ಊರು, ಪ್ರಾಂತ್ಯ, ದೇಶ, ಸೀಮೆ, ಮೊದಲಾದ ಅರ್ಥಗಳಲ್ಲಿ ಈ ಪದ ಬಳಕೆಗೊಂಡದ್ದನ್ನು ಕಾಣಬಹುದು. ಒಟ್ಟಿನಲ್ಲಿ ಜನವಸತಿಯ ಪ್ರದೇಶವನ್ನು 'ನಾಡು' ಎಂದು ಕರೆಯಬಹುದು. ನಿತ್ಯಾನಂದ ಶೆಟ್ಟಿಯವರ ಅಭಿಪ್ರಾಯದಂತೆ, "ಸಮಾನ ಸಾಂಸ್ಕೃತಿಕ ಗುಣಲಕ್ಷಣಗಳನ್ನು ಗಮನಿಸಿ ಆ ಗುಣಲಕ್ಷಣಗಳನ್ನು ಹೊಂದಿರುವ ಭೌಗೋಳಿಕ ವಲಯವನ್ನು ಸಾಮಾನ್ಯವಾಗಿ 'ನಾಡು' ಎಂದು ಕರೆಯಲಾಗುತ್ತದೆ. ಕನ್ನಡ ಭಾಷೆಯ ಸಾತತ್ಯದಲ್ಲಿ ಇಂತಹ ನೂರಾರು ನಾಡುಗಳಿವೆ. ಉದಾ: ಬನವಾಸಿ ನಾಡು, ಬೆಳುವೊಲ ನಾಡು, ಕೆಳದಿ ನಾಡು, ತುಳುನಾಡು, ಮಲೆನಾಡು ಇತ್ಯಾದಿ. ಇವುಗಳಲ್ಲಿ ಒಂದೋ ಒಂದು ನಿರ್ದಿಷ್ಟ ಹಿನ್ನೆಲೆಯ ಅಥವಾ ನಿಸರ್ಗದತ್ತ ಪ್ರಾಕೃತಿಕ ಮೇರೆಗಳನ್ನೊಳಗೊಂಡ ಅಥವಾ ಪ್ರಭುತ್ವವೊಂದರ

ನಿರ್ದಿಷ್ಟ ಗಡಿರೇಖೆಗಳಿಗೆ ಸಂಬಂಧಪಟ್ಟದ್ದೇ ಆಗಿದೆ. ನಿಜವಾಗಿಯೂ ಇದು ನಾಡು ರೂಪುಗೊಂಡ ಬಗೆ" (೨೦೦೯ ಪು.೯೫) ಎಂಬ ಮಾತು ಗಮನಾರ್ಹವಾದುದು. ಆಧುನಿಕ ಸಂದರ್ಭವನ್ನು ಗಮನಿಸಿದರೆ ಪರಂಪರೆಯಲ್ಲಿದ್ದ ನಾಡಿನ ಕಲ್ಪನೆ ವಿಕಾಸಗೊಳ್ಳುತ್ತಾ ಬಂದುದನ್ನು ನೋಡಬಹುದು.

ನಾಡು-ನುಡಿಯ ಚಿಂತನೆಗೆ ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ವಿಶೇಷ ಮಹತ್ವವಿದೆ. 'ಕನ್ನಡ' ಎಂಬ ಪದವನ್ನು 'ನಾಡು' ಮತ್ತು 'ನುಡಿ' ಎಂಬರ್ಥದಲ್ಲಿ ಮೊದಲಿಗೆ ಬಳಸಿದವನು ಶ್ರೀವಿಜಯ. ಈತ ನಾಡನ್ನು ಅದರ ಭೌಗೋಳಿಕ ಸ್ವರೂಪದೊಂದಿಗೆ ಗುರುತಿಸಿದ್ದಾನೆ. ಹೀಗೆ ನಾಡನ್ನು ನೋಡುವ ಕ್ರಮ ಆಧುನಿಕರವರೆಗೂ ಮುಂದುವರಿದಿದೆ. ಈ ಭೂಗೋಳದ ಪರಿಧಿಯೊಳಗೆ ಸಾಮಾನ್ಯವಾಗಿ ಎರಡು ನದಿಗಳ ಗ್ರಹಿಕೆಯಿರುತ್ತದೆ. ನದಿಗಳ ಮೂಲಕ ನಾಡನ್ನು ಅಥವಾ ನಾಡವರನ್ನು ಗುರುತಿಸುವುದು ಪರಂಪರೆಯ ಕ್ರಮ ಎನ್ನಬಹುದೇನೋ? ನದಿಗಳನ್ನು ಬಿಟ್ಟು ನಾಡಿನ ಗ್ರಹಿಕೆಯನ್ನು ಮಾಡುವುದು ಕಷ್ಟ ಸಾಧ್ಯವೆನಿಸುತ್ತದೆ. 'ಕಾವೇರಿಯಿಂದ ಗೋದಾವರಿಯವರೆಗಿನ ನಾಡು ಕನ್ನಡನಾಡು' ಎನ್ನುವಾಗ ಮಾರ್ಗಕಾರನಿಗೆ ಇದೇ ಪ್ರಜ್ಞೆಯಿತ್ತೆಂಬುದನ್ನು ಮನಗಾಣಬಹುದು. 'ನಾಡು' ಎಂಬುದನ್ನು ಭಾವನಾತ್ಮಕವಾಗಿ ಬೆಸೆದುಕೊಂಡು ಅದರಲ್ಲಿ ಮಾತೃತ್ವದ ನೆಲೆಯನ್ನು ಗುರುತಿಸಲಾಗಿದೆ.

ಕನ್ನಡಕಾವ್ಯ ಪರಂಪರೆಯೊಳಗೆ 'ನಾಡು' ಎನ್ನುವುದು ಒಂದು ಪರಿಕಲ್ಪನೆಯಾಗಿ ಬಳಕೆಯಾಗಿರಲಿಲ್ಲ. ಆದರೆ, ವರ್ಣನೆಯಲ್ಲಿ, ರಾಜತ್ವವನ್ನು ಗುರುತಿಸುವಲ್ಲಿ, ಅಭಿಮಾನವನ್ನು ಅನಾವರಣಗೊಳಿಸುವಲ್ಲಿ ನಾಡಿನ ಗ್ರಹಿಕೆಯಿದೆ. ಮಾರ್ಗಕಾರನ ನಂತರ ಮುಖ್ಯವಾಗಿ ಪಂಪ, ನಯಸೇನ, ಆಂಡಯ್ಯ, ವಚನಕಾರರು, ಹರಿಹರ ಇವರೆಲ್ಲರ ನಾಡು-ನುಡಿಯ ಕುರಿತ ನಿಲುವುಗಳನ್ನು ಕಾವ್ಯಗಳನ್ನು ಆಧರಿಸಿ ವಿವರಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ವಚನ ಸಾಹಿತ್ಯದ ಕಾಲಘಟ್ಟದಲ್ಲಿ ಬಿಜ್ಜಳನ ರಾಜಧಾನಿ ಕಲ್ಯಾಣದಲ್ಲಿ ನಾಡಿನ ಅನೇಕ ಕಡೆಗಳಿಂದ ಬಂದ ಶಿವಶರಣರು ಒಂದುಗೂಡಿದ್ದು ಐತಿಹಾಸಿಕ ಸತ್ಯ. ಬಾಗೇವಾಡಿಯಿಂದ ಬಸವಣ್ಣ, ಉಡುತಡಿಯಿಂದ ಅಕ್ಕಮಹಾದೇವಿ, ಬಳ್ಳಿಗಾವೆಯಿಂದ ಅಲ್ಲಮ, ಇವರೆಲ್ಲರ ಸಮಾಗಮ ಕಲ್ಯಾಣದಲ್ಲಿ. ವಚನಗಾರರು ಕನ್ನಡ ಅಥವಾ 'ಕನ್ನಡನಾಡು' ಎನ್ನುವುದನ್ನು ಅಧಿಕೃತವಾಗಿ ಎಲ್ಲಿಯೂ ಬಳಸದೇ ಇದ್ದರೂ ಕಾಯಕದ ಭಾಷೆಯನ್ನು ಕಾವ್ಯದ ಭಾಷೆಯಾಗಿ ಮಾಡಿದ ಹಿರಿಮೆ ಇವರದು. ತಮ್ಮ ಮಾತು ಶ್ರೀಸಾಮಾನ್ಯನನ್ನು ತಲುಪಬೇಕೆಂಬ ಉದ್ದೇಶದಿಂದ

ಸಂಸ್ಕೃತದ ಬದಲು ಕನ್ನಡವನ್ನು ಬಳಸಿ ಕನ್ನಡದ ಅಸ್ಮಿತೆಯನ್ನು ಗುರುತಿಸಿ ಕೊಟ್ಟರು. ಅಕ್ಕಮಹಾದೇವಿ ಹೆಣ್ಣುತನದ ಪರಿಭಾಷೆಯನ್ನು ಬಳಸಿಕೊಂಡು ಹಕ್ಕಿ, ಹೂ, ಮರಗಿಡಗಳಿಗೆಲ್ಲ ನುಡಿಯ ಮೂಲಕ ಜೀವಂತಿಕೆಯನ್ನು ತುಂಬಿದ್ದಾಳೆ. ದೇವರ ದಾಸಿಮಯ್ಯ ನೇಕಾರಿಕೆಯ ಭಾಷೆಯನ್ನು ಕಾವ್ಯದ ಭಾಷೆಯನ್ನಾಗಿ ಮಾಡಿದನು. ವಚನಗಳು ರಚನೆಗೊಂಡದ್ದು ಕನ್ನಡ ಪರಂಪರೆಯ ಒಂದು ಸಂಧಿಕಾಲದಲ್ಲಿ. ಪಂಡಿತರಿಗಷ್ಟೇ ಸೀಮಿತವಾಗಿದ್ದ ಕಾವ್ಯಪ್ರಪಂಚ ನಡುಗನ್ನಡ ಕಾಲಘಟ್ಟದಲ್ಲಿ ಶ್ರೀಸಾಮಾನ್ಯರಿಗೂ ಪರಿಚಯವಾಯಿತು. ಅದುವರೆಗೆ ಸಂಸ್ಕೃತ ಭಾಷೆ ಮಾಡಿದ್ದ ಕಾವ್ಯರಚನೆಯ ಕೆಲಸವನ್ನು ಮಣ್ಣಿನ ಭಾಷೆಯಾದ ಕನ್ನಡವು ಪರಿಣಾಮಕಾರಿಯಾಗಿ ಮಾಡಿತು.

ವಚನಕಾರರು ಕನ್ನಡದ ಬೆಳವಣಿಗೆಯ ದೃಷ್ಟಿಯಿಂದ ಸಂಸ್ಕೃತವನ್ನು ಬಳಸಿಕೊಂಡರು ಎನ್ನುವಲ್ಲಿ ಸಂದೇಹವಿಲ್ಲ. ಕೆಲವೊಮ್ಮೆ ಸಂಸ್ಕೃತದ ಮಾತುಗಳನ್ನು ಯಥಾವತ್ತಾಗಿ ಬಳಸಿಕೊಂಡದ್ದೂ ಇದೆ. "ಎಡದ ಕೈಯಲ್ಲಿ ಹಾಲ ಬಟ್ಟಲು ಬಲದ ಕೈಯಲ್ಲಿ ಓಜುಗಟ್ಟಿಗೆ" ಎಂದು ಆರಂಭವಾಗುವ ಬಸವಣ್ಣನ ವಚನದಲ್ಲಿ "ದಂಡಕ್ಷೀರ ದ್ವಯಂಹಸ್ತಂ/ಜಂಗಮಂ ಭಕ್ತಿಮಂದಿರಂ, ತದ್ಭಕ್ತ್ಯಾಲಿಂಗಸಂತುಷ್ಟಿ ಅಪಹಾಸ್ಯಂ ಯಮದಂಡನಂ" ಇದನ್ನು ಉದಾಹರಣೆಯಾಗಿ ಗಮನಿಸಬಹುದು. ಅಲ್ಲಮನ ಬೆಡಗಿನ ವಚನಗಳಲ್ಲಿ ಜನಪದ ಒಗಟಿನ ನುಡಿ ಕಾವ್ಯದ ನುಡಿಯಾಯಿತು. ಹೀಗೆ ಕಾಯಕದ ಭಾಷೆ, ಒಗಟಿನ ಭಾಷೆ, ಜನರ ಭಾಷೆ ಇವೆಲ್ಲ ಕಾವ್ಯದ ಭಾಷೆಯಾಗಿ ಮೈದಾಳಿದ್ದು ವಚನ ಯುಗದ ವೈಶಿಷ್ಟ್ಯ.

ವಚನ ಸಾಹಿತ್ಯದಲ್ಲಿ ನಾಡಿನ ಕಲ್ಪನೆ ಆ ವರೆಗಿನ ಕಲ್ಪನೆಗಿಂತ ಭಿನ್ನವಾದುದು. ಇವರ ಪ್ರಕಾರ 'ನಾಡು' ಯಾವುದೋ ನಿರ್ದಿಷ್ಟ ಗಡಿರೇಖೆಗಳನ್ನೊಳಗೊಂಡ ಭೂವಲಯವಲ್ಲ. ರಾಜಕೀಯದ ನೆಲೆಯಲ್ಲ. ಇವರು ವಚನಗಳಲ್ಲಿ ಬಳಸಿದ ಅಂಕಿತಗಳು ಒಂದು ಸ್ಥಳವನ್ನೋ ಅಥವಾ ಇನ್ನು ಕೆಲವೊಮ್ಮೆ ದೈವತ್ವವನ್ನೋ ಸಂಕೇತಿಸುವಂತಿದೆ. ಉದಾಹರಣೆಗೆ ಬಸವಣ್ಣನ ಕೂಡಲಸಂಗಮ, ಕಲ್ಲಯ್ಯನ ಹಾವಿನಹಾಳ, ಮಾಚಯ್ಯನ ಗೊಬ್ಬೂರು ಇತ್ಯಾದಿ. ಇವೆಲ್ಲ ಕರ್ನಾಟಕದ ಭಾಗವೇ ಆಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ತಮ್ಮ ವಚನಗಳ ಮೂಲಕ ಪ್ರಾದೇಶಿಕತೆಯ ಅಸ್ಮಿತೆ ಮತ್ತು ಅನನ್ಯತೆಯನ್ನು ಗುರುತಿಸಿಕೊಂಡಿದ್ದಾರೆನ್ನಬಹುದು.

ವಚನಕಾರರ ಮುಖ್ಯ ನಾಡು 'ಕಲ್ಯಾಣ'. ಇದನ್ನು ಅವರು ನೋಡುವ ಮತ್ತು ಅಭಿವ್ಯಕ್ತಿಸುವ ರೀತಿ ವಿಶಿಷ್ಟವಾದುದು. ಸೀಮಿತ ಪ್ರಾದೇಶಿಕ ವಲಯವನ್ನು ಮೀರಿದ ವಿಶಾಲ ನಾಡು ಇವರಲ್ಲಿ ಕಾಣಸಿಗುತ್ತದೆ. ಬಸವಣ್ಣನಿಗೆ ಕೂಡಲಸಂಗಮವೂ, ಕಲ್ಲಯ್ಯನಿಗೆ

ಹಾವಿನಹಾಳವೂ ನಾಡುಗಳಾಗುತ್ತವೆ. ಇಂತಹ ವಿಶಾಲ ನಾಡನ್ನು ವಚನಗಳ ಮೂಲಕ ಕಟ್ಟಿದವರು ವಚನಕಾರರು. ದಾಸಸಾಹಿತ್ಯದಲ್ಲಿಯೂ ನೇರವಾಗಿ ನಾಡಿನ ಗ್ರಹಿಕೆಗಳಿಲ್ಲ. ಇವರಿಗೂ ವಚನಕಾರರಂತೆ ಅಂಕಿತಗಳಿವೆ. ಕಾಗಿನೆಲೆ ಆದಿಕೇಶವ, ಪುರಂದರ ವಿಠಲ ಎಂಬಲ್ಲಿ ಇವುಗಳ ಹಿನ್ನೆಲೆಯಾಗಿ ಒಂದು ಊರಿದೆ. ದಾಸವರೇಣ್ಯರು ಜೀವನದುದ್ದಕ್ಕೂ ಪರ್ಯಟನಗೈದವರು. ಹಾಗಾಗಿ ತತ್ವಪದಕಾರರಿಂದ, ಕೀರ್ತನಕಾರರಿಂದ ಕನ್ನಡನಾಡನ್ನು ವಿಸ್ತರಿಸುವ ಕೆಲಸ ನಡೆಯಿತು. ಇವರೆಲ್ಲ ತಮ್ಮ ತಿರುಗಾಟದ ಮೂಲಕ ಕರ್ನಾಟಕದ ಸಾಂಸ್ಕೃತಿಕ ಭೂಗೋಳವನ್ನು ವಿಸ್ತರಿಸಿದರು. ಇವರು ಒಂದು ಸೀಮಿತ ನೆಲೆಯಲ್ಲಿ ನಿಂತು ಕೃತಿ ರಚನೆ ಮಾಡಿದವರಲ್ಲ. ಯಾವುದೇ ಒಂದು ನಿರ್ದಿಷ್ಟ ಪ್ರದೇಶಕ್ಕೆ ಅಂಟಿಕೊಂಡವರೂ ಅಲ್ಲ. ಸುತ್ತಲಿನ ಪ್ರದೇಶಗಳನ್ನು ಸುತ್ತಾಡುವುದರ ಮೂಲಕ ವಿಶಿಷ್ಟ ಅನುಭವವನ್ನು ತಮ್ಮದಾಗಿಸಿಕೊಂಡು ಅವುಗಳಿಗೆ ಪ್ರತಿಕ್ರಿಯೆ ನೀಡಿದವರು. ಶಿಶುನಾಳ ಶರೀಫ, ಕಡಕೋಳ ಮಡಿವಾಳಪ್ಪ ಇವರನ್ನೆಲ್ಲ ಈ ಹಿನ್ನೆಲೆಯಿಂದ ಗಮನಿಸಬಹುದಾಗಿದೆ. ಇಡೀ ನಾಡನ್ನು ಕೀರ್ತನೆ, ವಚನಗಳು, ತತ್ವಪದಗಳ ಮೂಲಕ ಗ್ರಹಿಸಿದ್ದನ್ನು ಕಾಣಬಹುದು.

ನಡುಗನ್ನಡ ಕಾಲಘಟ್ಟದಲ್ಲಿ ನಾಡನ್ನು ಪರಿಕಲ್ಪಿಸಿದ ಬಗೆ ಇದಕ್ಕಿಂತ ವಿಭಿನ್ನವಾದುದು. ಹಂಪೆಯು ಹರಿಹರನ ಕಾರ್ಯಕ್ಷೇತ್ರ. ಈತ ಎಲ್ಲಿಯೂ ನಾಡಿನ ಬಗೆಗೆ ಅಭಿಮಾನದ ಮಾತನ್ನು ಆಡದಿದ್ದರೂ 'ಗಿರಿಜಾಕಲ್ಯಾಣ'ದಲ್ಲಿ ಹೇಮಕೂಟ ಮತ್ತು ಹಿಮಾಚಲದ ವರ್ಣನೆಯ ಮೂಲಕ ನಾಡಿನ ಅಭಿಮಾನವನ್ನು ವ್ಯಕ್ತಪಡಿಸುತ್ತಾನೆ. ಮಾತ್ರವಲ್ಲದೆ ಇವನ ರಗಳೆಗಳನ್ನು ನೋಡಿದಾಗ ಅಲ್ಲಿ ಬರುವ ಹೂಗಳ ಕಲ್ಪನೆಯೂ ನಾಡಿನ ಭಾಗವೇ ಆಗುತ್ತದೆ. ನಿಸರ್ಗ ಮತ್ತು ಮನುಷ್ಯನ ಸಂಬಂಧವನ್ನು ಇಂತಹ ವರ್ಣನೆಗಳು ಗುರುತಿಸಿಕೊಡುತ್ತವೆ. ಅಲ್ಲದೆ ರಗಳೆಯ ನಾಯಕರು ಶರಣರೇ ಆಗಿದ್ದಾರೆ. ಹರಿಹರನ ನುಡಿಯ ಕುರಿತಾದ ಸಂವೇದನೆ ವಿಭಿನ್ನವಾದುದು. 'ರಗಳೆ' ಕನ್ನಡ ಸಾಹಿತ್ಯದ ಅಪೂರ್ವ ಮಟ್ಟು. ಹರಿಹರನಂತಹ ಶಕ್ತ ಕವಿ ಚಂಪೂ ಮೋಹದಿಂದ ಬಿಡುಗಡೆ ಹೊಂದಿ ನಾಡಿನ ಜನತೆಗೆ ಹತ್ತಿರವಾದ ರಗಳೆ ಛಂದೋರೂಪದಲ್ಲಿ ಕಾವ್ಯ ರಚಿಸಿದ. ಕಥನಕಾವ್ಯಕ್ಕೆ ಹೊಂದಿಕೊಳ್ಳುವ ಅದರ ಗುಣಲಕ್ಷಣಗಳನ್ನು ತನ್ನ ಕವಿಮನೋಧರ್ಮದಿಂದ ಕಂಡುಕೊಂಡು ಅದರಲ್ಲೇ ಕಾವ್ಯ ರಚನೆ ಮಾಡಿದ ಹಿರಿಮೆ ಈತನದು. ಕನ್ನಡ ಕಾವ್ಯ ಪರಂಪರೆಯಲ್ಲಿ ಇದೊಂದು ಮೈಲುಗಲ್ಲು. ಇಲ್ಲಿ ಸಾಂಸ್ಕೃತಿಕ ನೆಲೆಗಟ್ಟಿನ ನಾಡಾಗಿ ಹಂಪೆ ಮೂಡಿ ಬಂದಿದೆ. ಈ ಎಲ್ಲಾ ವಿವರಗಳ ಮಧ್ಯೆ ದೇವಾಲಯಗಳೂ ಅಲ್ಲಿರುವ ಕೆರೆಕಟ್ಟೆಗಳೂ, ಕೊಳಗಳೂ, ದಾಖಲಾಗುತ್ತವೆ. ಇದು ಹರಿಹರ ಕಾವ್ಯದ ಮೂಲಕ ಗ್ರಹಿಸಿದ ನಾಡು ಎನ್ನಬಹುದು.

ನಂತರ ಕಾಣಿಸಿಕೊಂಡ ನಂಜುಂಡ ಕವಿಯೂ ಚಾರಿತ್ರಿಕ ವಸ್ತುವನ್ನು ಸ್ವೀಕರಿಸಿ ಅದಕ್ಕೆ ಪೌರಾಣಿಕ ಸ್ಪರ್ಶವನ್ನು ನೀಡಿ ಕುಮ್ಮಟದುರ್ಗ ಮತ್ತು ಹೊಸಮಲೆಯಲ್ಲಿ ಪಾತ್ರಗಳನ್ನು ಕಂಡರಿಸಿದ ಬಗೆ ಅವನ ನಾಡು -ನುಡಿಯ ಪ್ರಜ್ಞೆ ಹಾಗೂ ಅಭಿಮಾನವನ್ನು ಪ್ರಚುರಪಡಿಸುತ್ತದೆ. ಕುಮಾರರಾಮನನ್ನು ಕೇಂದ್ರ ಪಾತ್ರವಾಗಿ ಮಾಡಿಕೊಂಡು ರಚಿಸಿದ 'ರಾಮನಾಥಚರಿತೆ' ಅದರಲ್ಲಿ ಮೂಡಿರುವ ಕರ್ನಾಟಕತ್ವದ ನೆಲೆಗಳು ಈ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗಿವೆ. ಮುಂದೆ ಲಲಿತವಾದ ಕನ್ನಡವನ್ನು ಬಳಸಿ ಕಾವ್ಯರಚನೆ ಮಾಡಿದವನು ಮಹಲಿಂಗರಂಗ. ಉಳಿದವರಿಗೆ ಈತ ಮಾದರಿಯಾಗಿದ್ದಾನೆ. ಇದೇ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಮುದ್ದಣನ ಕನ್ನಡಾಭಿಮಾನದ ಸ್ವರೂಪವೂ ಗಮನಿಸುವಂತಿದೆ. 'ಹೊಸಗನ್ನಡ ಅರುಣೋದಯದ ಮುಂಗೋಳಿ' ಎಂದು ಖ್ಯಾತನಾದ ಇವನು ಯಕ್ಷಗಾನ ಕೃತಿಗಳ ರಚನೆಯ ಮೂಲಕ ಕರಾವಳಿಯ ಸಂಸ್ಕೃತಿ ಮತ್ತು ಪ್ರಾದೇಶಿಕತೆಗೆ ತನ್ನನ್ನು ತೆರೆದುಕೊಂಡವನು. ಕತೆಯನ್ನು ಹೊಸ ಸ್ವರೂಪದಲ್ಲಿ ಕಟ್ಟಿಕೊಡುವಾಗ ಅದಕ್ಕೆ ವಿಶಿಷ್ಟ ವಿನ್ಯಾಸದ ಭಾಷಾಬಳಕೆಯನ್ನೂ ಮಾಡಿದ್ದಾನೆ. ಈ ಪ್ರಕ್ರಿಯೆಯಲ್ಲಿ ಪ್ರಾದೇಶಿಕ ಸಂವೇದನೆಯು ಬೆರೆತು ಹೋಗುತ್ತದೆ. 'ಪಕ್ಕಿದೇರ' ಅಲರಿಚ' 'ಲಚ್ಚುಮಣ' ಮುಂತಾದ ಪದಗಳು ಇವನ ವಿಶಿಷ್ಟ ಭಾಷಾವಿನ್ಯಾಸಕ್ಕೆ ಸಾಕ್ಷಿ. 'ರಾಮಾಶ್ವಮೇಧದ' ಆರಂಭವೇ ಅಪೂರ್ವವಾದುದು. ಇವನ ಕಾಲಕ್ಕಾಗುವಾಗ ಕನ್ನಡವು ಸಂಸ್ಕೃತದ ಗಾಢವಾದ ಪ್ರಭಾವದಿಂದ ನಿಧಾನವಾಗಿ ಕಳಚಿಕೊಂಡ ನೆಲೆಯನ್ನು ಗಮನಿಸಬಹುದು. ಈತ ಹೇಳುವ 'ತಿರುಳ್ಗನ್ನಡ' ಬಹುಶ ತುಳು, ಹವ್ಯಕಕನ್ನಡ, ಸಂಸ್ಕೃತ ಮೊದಲಾದ ಭಾಷೆಗಳ ಉತ್ತಮ ಮೇಳೈಕೆಯಾಗಿದೆ. ಈ ಎಲ್ಲಾ ವಿಚಾರಗಳ ಬಗೆಗೆ ಚರ್ಚಿಸುವಾಗ ಮುದ್ದಣನು ತುಳು ನಾಡಿನ ಜೊತೆ ಅಂತರ್ಗತವಾಗಿರುವ ಕನ್ನಡನಾಡನ್ನು ಪ್ರತಿನಿಧೀಕರಿಸುತ್ತಾನೆ. ಹಾಗಾಗಿ ವಚನಗಾರರು, ನಂತರ ಬಂದ ಹರಿಹರ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ, ನಂಜುಂಡ, ಮಹಲಿಂಗರಂಗ ಹಾಗೂ ಮುದ್ದಣ ಇವರೆಲ್ಲ ಕಾವ್ಯದ ಮೂಲಕ ನಾಡನ್ನು ಪ್ರತಿನಿಧೀಕರಿಸಿದ ನೆಲೆಯನ್ನು ಅರ್ಥೈಸಿಕೊಳ್ಳಲಾಗಿದೆ. ನಂತರ ಸಂಸ್ಕೃತದ ಸ್ಥಾನವನ್ನು ಇಂಗ್ಲೀಷ್ ಆಕ್ರಮಿಸಿದಾಗ ಉಂಟಾದ ಬದಲಾವಣೆಗಳು ಮತ್ತು ಆ ಸಂದರ್ಭದ ನಾಡುನುಡಿಯ ಸ್ವರೂಪವನ್ನು ಚರ್ಚಿಸಲಾಗಿದೆ.

ವಸಾಹತುಶಾಹಿಯ ಸಂದರ್ಭಕ್ಕೆ ಬಂದಾಗ ಕರ್ನಾಟಕತ್ವವನ್ನು ಕುರಿತು ಚರ್ಚಿಸಿ ಕನ್ನಡಿಗರ ಅಸ್ತಿತ್ವವನ್ನು ಗುರುತಿಸಿಕೊಳ್ಳುವಲ್ಲಿ, ಪರಂಪರೆಯನ್ನು ತಿಳಿಸುವಲ್ಲಿ ಮಹತ್ವಪೂರ್ಣವಾಗಿ ಗುರುತಿಸಿಕೊಂಡವರು ಆಲೂರು ವೆಂಕಟರಾಯರು. ಅಲ್ಲದೆ ದೇಶೀ ಸಂಶೋಧಕರೂ ಈ ನೆಲೆಯಲ್ಲಿ ಸಹಕರಿಸಿದ್ದಾರೆ. ಇವರೆಲ್ಲಾ ಕನ್ನಡನುಡಿಯ ಪ್ರಾಚೀನತೆಯ ಬಗ್ಗೆ ಸಂಶೋಧನೆಗೆ ತೊಡಗಿ ವಿವಿಧ ಅಲೋಚನೆಗಳನ್ನು ಮಂಡಿಸುತ್ತಾರೆ. ವಿಜಯನಗರ ಪತನಾನಂತರ ಕನ್ನಡಿಗರು

ಚದುರಿ ಹೋದರೂ ಭಾಷೆಗೆ ಈಗಿರುವ ಅತಂತ್ರ ಸ್ಥಿತಿ ಬಂದಿರಲಿಲ್ಲ. ಮುಂಬಯಿ ಕರ್ನಾಟಕದ ಜನತೆ ಭಾಷಿಕವಾಗಿ ಹಲವು ಸಮಸ್ಯೆಗಳನ್ನೆದುರಿಸಬೇಕಾಯಿತು. ಪೇಶ್ವೆಯರ ಅಧೀನಕ್ಕೊಳಗಾದಾಗ ಮರಾಠಿಯ ಪ್ರಾಬಲ್ಯ ಹೆಚ್ಚಾಯಿತು. ಇದೇ ಸಂದರ್ಭದಲ್ಲಿ ಮರಾಠಿ ಮತ್ತು ಇಂಗ್ಲೀಷಿನ ವಿರುದ್ಧ ಶಾಂತಕವಿಗಳು ದನಿಯೆತ್ತಿದರು. ನಾಡು-ನುಡಿ ಎನ್ನುವ ಆಧುನಿಕ ವಿಚಾರಗಳನ್ನು, ತತ್ವಗಳನ್ನು, ಚಿಂತನೆಗಳನ್ನು ಜನಪರಗೊಳಿಸುವುದಕ್ಕಾಗಿ 'ಕನ್ನಡದ ದಾಸಯ್ಯ'ನಾಗಿ ಕಾಣಿಸಿಕೊಂಡರು. ಇವರಲ್ಲಿ ನಾಡು-ನುಡಿಯ ಕಲ್ಪನೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ನಂತರದ ಕವಿಗಳಲ್ಲಿ ಈ ಚಿಂತನಾಕ್ರಮ ಒಂದಲ್ಲ ಒಂದು ಬಗೆಯಲ್ಲಿ ಕಾಣಿಸಿಕೊಂಡಿದೆ.

ಮೈಸೂರು ಕರ್ನಾಟಕದಲ್ಲಿ ಕನ್ನಡ ಅವಜ್ಞೆಯ ನೆಲೆಗೆ ತಲುಪಲಿಲ್ಲ. ಹಾಗಾಗಿ ಇಲ್ಲಿನ ವಸಾಹತುಶಾಹಿ ವಿರೋಧಿ ನೆಲೆ ಮಂದಗತಿಯ ಸ್ವರೂಪದಲ್ಲಿತ್ತು. ಮದರಾಸು ಪ್ರೆಸಿಡೆನ್ಸಿಗೆ ಕರ್ನಾಟಕದ ವ್ಯಾಪ್ತಿಯೊಳಗಿನ ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳು ಸೇರಿಹೋದವು. ಬಳ್ಳಾರಿಯಲ್ಲಿ ತೆಲುಗಿನ ಪ್ರಾಬಲ್ಯವಿದ್ದರೆ ದಕ್ಷಿಣ ಕನ್ನಡದಲ್ಲಿ ತುಳುವಿನ ಪ್ರಾಬಲ್ಯವಿತ್ತು. ತಮಿಳು ಪ್ರದೇಶವಾದ ಮದರಾಸನ್ನು ಪ್ರತಿಯೊಂದಕ್ಕೂ ಆಶ್ರಯಿಸುವುದು ಕಷ್ಟಸಾಧ್ಯ. ಹಾಗಾಗಿ ಇಲ್ಲಿಯ ಜನತೆ ಆಕ್ರೋಶಕ್ಕೊಳಗಾಗಿ ಕರ್ನಾಟಕತ್ವದ ಬಗೆಗೆ ಆಲೋಚಿಸತೊಡಗಿದರು. ಇದರ ಪರಿಣಾಮವಾಗಿ ಕನ್ನಡದ ಆಸ್ಮಿತೆಯನ್ನು ಕಂಡುಕೊಳ್ಳುವ ನೆಲೆ ಗೋಚರಿಸಿತು. ಪಂಜೆಯವರು, ಗೋವಿಂದ ಪೈ, ಮುಳಿಯತಿಮ್ಮಪ್ಪಯ್ಯ, ಸೇಡಿಯಾಪು ಕೃಷ್ಣಭಟ್ಟರಂತಹ ವಿದ್ವಾಂಸರು ಸಾಹಿತ್ಯರಚನೆಯ ಕೆಲಸದಲ್ಲಿ ನಿರಂತರ ತಮ್ಮನ್ನು ತೊಡಗಿಸಿಕೊಂಡರು. ಇದರಿಂದಾಗಿ ಅತ್ಯಂತ ಪರಿಣಾಮಕಾರಿಯಾದ ಬರವಣಿಗೆಗಳು ಈ ಕಾಲಘಟ್ಟದಲ್ಲಿ ಮೂಡಿಬಂದುವು. ಕೊಡಗೂ ಸಹ ವಸಾಹತುಶಾಹಿಯ ಹಿಡಿತಕ್ಕೊಳಗಾದ ಪ್ರದೇಶವಾಗಿತ್ತು. ವಸಾಹತಿನಿಂದ ಮುಕ್ತಿ ಬಯಸುವುದು ಸಹಜ ಮತ್ತು ಅನಿವಾರ್ಯವಾಗಿತ್ತು. ಆಗ ನಾಡು-ನುಡಿಯ ಚಿಂತನೆ, ತನ್ಮೂಲಕ ಕನ್ನಡ ಅಸ್ಮಿತೆಯನ್ನು ಕಾಪಾಡುವ ನಿಟ್ಟಿನಿಂದ ಸಂಘಟಿತ ಹೋರಾಟ ಮಾಡಬೇಕಾಯಿತು. ಹಾಗಾಗಿ ರಾಷ್ಟ್ರೀಯತೆಯನ್ನು ರೂಪಿಸುವ ಉದ್ದೇಶವುಳ್ಳ ಕಾವ್ಯಗಳ ರಚನೆಯಾಯಿತು.

ಪ್ರಾಚೀನ ಕಾಲದಿಂದ ತೊಡಗಿ ಆಧುನಿಕದವರೆಗೂ ಕಾವ್ಯಗಳು ಬೇರೆ ಬೇರೆ ಪರಿಕರಗಳ ಮೂಲಕ ನಾಡನ್ನು ಕಟ್ಟಿಕೊಟ್ಟಿವೆ. ಒಬ್ಬೊಬ್ಬ ಕವಿಯ ಮೂಲಕ ಒಂದೊಂದು ಊರು ದಾಖಲಾಗುತ್ತದೆ. ಕುಮಾರವ್ಯಾಸನೆಂದರೆ ಗದಗ, ಹರಿಹರನೆಂದರೆ ಹಂಪೆ, ರನ್ನನೆಂದರೆ ಮುಧೋಳ, ಶ್ರವಣಬೆಳಗೊಳ ಚಾವುಂಡರಾಯನ ಮೂಲಕ ಕನ್ನಡದ ಸಾಂಸ್ಕೃತಿಕ ಕೇಂದ್ರವಾಗಿ

ದಾಖಲಾಗುತ್ತದೆ. ಇವೆಲ್ಲಾ ಈ ನಾಡನ್ನು ವ್ಯಾಪಕಗೊಳಿಸುವ ವಿಚಾರಗಳು. ಕೇವಲ ವರ್ಣನೆಗಳ ಮೂಲಕ ಮಾತ್ರವಲ್ಲ, ವಿಭಿನ್ನ ಆಯಾಮಗಳ ಮೂಲಕ ಕವಿಗಳು ನಾಡನ್ನು ಕಟ್ಟಿಕೊಟ್ಟಿದ್ದಾರೆ.

**ಹೊರನಾಡು ಮತ್ತು ಗಡಿನಾಡು**

'ಹೊರನಾಡು' ಮತ್ತು 'ಗಡಿನಾಡು' ಎನ್ನುವುದು ಕನ್ನಡದಲ್ಲಿ ವಿಶಿಷ್ಟವಾದ ಪದಗಳು. ಕರ್ನಾಟಕದ ಜನ ವಿದ್ಯಾವಂತರು ಜೊತೆಗೆ ಚಲನಶೀಲರು. ಈ ಎರಡು ಪದಗಳನ್ನು ವ್ಯಾಖ್ಯಾನಿಸಿಕೊಳ್ಳುವುದಾದರೆ, ಸಂಬಂಧವನ್ನು ರಾಜಕೀಯ ಪರಿಸ್ಥಿತಿಯಿಂದ ಕಳೆದುಕೊಂಡು ನೆರೆಯ ನಾಡಿನಲ್ಲಿ ಅನಿವಾರ್ಯವಾಗಿ ನೆಲೆಸಬೇಕಾದ ವ್ಯಕ್ತಿ ಗಡಿನಾಡ ಕನ್ನಡಿಗ. ಕಾಸರಗೋಡು, ಸೊಲ್ಲಾಪುರ ಇತ್ಯಾದಿ ಪ್ರದೇಶಗಳು. ತನ್ನ ಮೂಲ ಭಾಷಿಕ ನೆಲೆಯನ್ನು ಸ್ವಇಚ್ಛೆಯಿಂದ ತ್ಯಜಿಸಿ ಇನ್ನೊಂದು ಪ್ರಾಂತ್ಯಕ್ಕೆ ವಲಸೆ ಹೋಗಿ ತನ್ನ ಬದುಕನ್ನು ಕಟ್ಟಿಕೊಂಡ ಕನ್ನಡಿಗರು ಹೊರನಾಡ ಕನ್ನಡಿಗರು. ಈ ರೀತಿಯಾಗಿ ತಾಯಿ ಬೇರನ್ನು ಶಾಶ್ವತವಾಗಿ ಕಳೆದುಕೊಂಡು ಇನ್ನೊಂದು ಪ್ರದೇಶದಲ್ಲಿ ಬದುಕುವುದಕ್ಕೆ ಅನೇಕ ಕಾರಣಗಳಿರಬಹುದು. ನಿರುದ್ಯೋಗ, ಹದಗೆಟ್ಟ ಆರ್ಥಿಕ ಪರಿಸ್ಥಿತಿ, ಸಾಹಸ ಮನೋವೃತ್ತಿಯಿಂದಾಗಿ ತಕ್ಕ ಪರಿಸರವನ್ನು ವ್ಯಕ್ತಿ ಹುಡುಕಿ ಹೊರಡುವುದು ಸಹಜ. ಗಡಿನಾಡಿಗರು ಪರಿಸ್ಥಿತಿಯ ಕೂಸುಗಳು, ಹೊರನಾಡಿಗರು ಸ್ವಇಚ್ಛೆಯ ಸರದಾರರು. ಎಲ್ಲ ಗಡಿನಾಡಿಗರನ್ನೂ ಹೊರನಾಡಿಗರೆನ್ನಬಹುದು; ಆದರೆ ಹೊರನಾಡಿಗರೆಲ್ಲ ಗಡಿನಾಡಿಗರಲ್ಲ. ಗಡಿನಾಡಿಗರು ತಮ್ಮ ಪರಿಧಿಯಲ್ಲಿ ನೆಲೆನಿಂತು ಹೊಸ ಸ್ಥಿತಿಗಳಿಗೆ ಸ್ಪಂದಿಸುತ್ತಾ ತನ್ನತನವನ್ನೂ ಸಂಸ್ಕೃತಿಯ ಬೇರನ್ನೂ ರಕ್ಷಿಸುವವರು.

ಹೊರನಾಡಿಗರು ಸ್ವಭಾಷಾಭಿಮಾನಿಗಳಾಗಿದ್ದಲ್ಲಿ ತಾವಿದ್ದ ಸ್ಥಳದಲ್ಲಿಯೇ ಸಂಘಗಳನ್ನು ಕಟ್ಟಿಕೊಂಡು ಬದುಕುತ್ತಾರೆ ಅಥವಾ ತಾವು ಬದುಕನ್ನು ಕಟ್ಟಿಕೊಳ್ಳಬೇಕಾದ ಮಣ್ಣಿಗೆ ಹೊಂದಿಕೊಳ್ಳುತ್ತಾರೆ. ಮೋಹನ ಕುಂಟಾರ್ ಅವರು ಹೇಳುವಂತೆ, 'ಹೊರನಾಡ ಕನ್ನಡಿಗರಲ್ಲಿ ಕರ್ನಾಟಕದ ಕುರಿತು ಅಖಂಡವಾದ ಕಲ್ಪನೆಯಿರುತ್ತದೆ. ಅನ್ಯಬಾಷೆಯ ಸಂಸ್ಕೃತಿಯ ನಡುವೆ ತಾವು ಪ್ರತ್ಯೇಕ ಎಂಬುದನ್ನು ಮನಸ್ಸಿನಲ್ಲಿ ದೃಢಮಾಡಿಕೊಂಡು ಕನ್ನಡದ ಬಗೆಗೆ ಪ್ರೀತಿಯನ್ನು ತಳೆಯುತ್ತಾರೆ. ಇವರ ಕನ್ನಡದ ಪ್ರೀತಿ ಯಾವುದೇ ಪ್ರದೇಶಕ್ಕೆ ಸೀಮಿತವಾಗದೆ ಇಡೀ ಕರ್ನಾಟಕದಲ್ಲಿ ವ್ಯಾಪಿಸಿರುತ್ತದೆ.' (೨೦೧೭ ಪು.೪)

ಗಡಿನಾಡು ಎನ್ನುವುದು ಒಂದು ವಿಶಿಷ್ಟವಲಯ. ಯಾವುದೇ ನಾಡನ್ನು ಭೌಗೋಳಿಕವಾಗಿ ಹೇಳುವಾಗ ಒಂದು ನಿರ್ದಿಷ್ಟ ರಾಜ್ಯದ ಕಟ್ಟಕಡೆಯ ಪ್ರದೇಶವನ್ನು 'ಗಡಿನಾಡು' ಎನ್ನಬಹುದು. ಸಾಮಾನ್ಯವಾಗಿ ಇದು ದ್ವಿಭಾಷಿಕ ಪ್ರದೇಶವಾಗಿರುತ್ತದೆ. ಮೋಹನ ಕುಂಟಾರ್ ಅವರು

ಹೇಳುವಂತೆ, ಗಡಿನಾಡಿನ ಜನರು ಬದುಕುವುದು ಎರಡೇ ಭಾಷೆಗಳಲ್ಲಿ ಅಲ್ಲ. ಅದನ್ನು ಮೀರಿದ ಒಂದು ನಿರ್ದಿಷ್ಟ ಪ್ರಾದೇಶಿಕ ಸಂಸ್ಕೃತಿಯಲ್ಲಿ. ಇದು ಸಂಮಿಶ್ರ ಸಂಸ್ಕೃತಿಯೇ ಇರಬಹುದು.ಇದಕ್ಕೆ ಗಡಿಗಳಿಲ್ಲ. ಭಾಷಿಕ ಸಂಸ್ಥಾನದ ಹಂಗೂ ಇಲ್ಲ. (೨೦೦೭ ಪು.೬೯) ಎಂಬುದನ್ನು ಗಮನಿಸಬಹುದು

ಈ ಪ್ರದೇಶ ಅದರ ಮುಂದಿನ ನಾಡಿಗೂ ಗಡಿಯಾಗಿರಬಹುದು. ಇಲ್ಲಿಯೂ ಜನರ ಜೀವನ ಸ್ಥಿತಿ ಕೆಲವೊಮ್ಮೆ ಶೋಚನೀಯವಾಗಿರುತ್ತದೆ. ಗಡಿವಿವಾದಗಳ ನೆಲೆಯಲ್ಲಿ ನಿರಂತರ ಸಂಕಟವನ್ನು ಅನುಭವಿಸಬೇಕಾಗುತ್ತದೆ. ಈ ನೆಲ ನಮ್ಮದು ಎಂಬ ಭಾವನೆ ಬಲಗೊಳ್ಳಬೇಕಾದರೆ ಹಸನಾದ ಬದುಕು ಅವರಿಗೆ ಮುಖ್ಯವಾಗುತ್ತದೆ. ಇಲ್ಲವಾದಲ್ಲಿ ಅನಾಥಪ್ರಜ್ಞೆ ಗತಿಯಾಗುತ್ತದೆ. ಕಾಸರಗೋಡು, ತಾಳವಾಡಿ, ಪಿರ್ಕಾ, ಆದೋನಿ ಮುಂತಾದ ಪ್ರದೇಶಗಳನ್ನು ಈ ನೆಲೆಯಿಂದ ಉದಾಹರಿಸಬಹುದಾಗಿದೆ.

ತಮಿಳು ಕೃತಿ 'ತಿರುಕ್ಕುರಳ್' ನಲ್ಲಿ ನಾಡಿನ ಬಗೆಗೆ ವ್ಯಾಖ್ಯಾನವಿದೆ. ಕೊರೆಯಲ್ಲದ ಕೃಷಿ ಸಂಪತ್ತು. ಯೋಗ್ಯರಾದ ಅರಿತವರು ಮತ್ತು ಕೇಡಿಲ್ಲದ ಸಂಪತ್ತುಳ್ಳ ವಣಿಜರೂ ಕೂಡಿಕೊಂಡಿರುವುದೇ ನಾಡು. ಹೇರಳವಾದ ಸಂಪತ್ತಿನಿಂದ ಹೊರದೇಶದವನೂ ಬಯಸುವ ರೀತಿಯಲ್ಲಿ ಕೇಡಿಲ್ಲದೆ ಮಿಗಿಲಾಗಿ ಬೆಳೆಯುವುದೇ ನಾಡು ಎನಿಸಿಕೊಳ್ಳುವುದು.

ನೆರೆನಾಡಿನ ಅರಸರು ಧಾಳಿಯಿಡುವುದರಿಂದ ಒಮ್ಮೆಲೇ ತಮ್ಮ ಮೇಲೆ ಬರುವ ಹೊರೆಯನ್ನು ಸಹಿಸಿಕೊಂಡು ತಮ್ಮ ಅರಸರಿಗೆ ತೆರಿಗೆಯನ್ನು ಪೂರ್ತಿಯಾಗಿ ಸಲ್ಲಿಸಿಕೊಂಡು ಬರುವುದೇ ನಾಡು. (ಪಾ.ಶ. ಶ್ರೀನಿವಾಸ, ಪು.೨೨೩) ಈ ಎಲ್ಲಾ ಗುಣಗಳಿದ್ದೂ ಆ ನಾಡಿನಲ್ಲಿ ಒಳ್ಳೆಯ ಪ್ರಭುತ್ವವಿಲ್ಲದ್ದಿದರೆ ಅದು ವ್ಯರ್ಥ. ಈ ಮಾತನ್ನು ಗಮನಿಸುವಾಗ ನಾಡು ಎನ್ನುವುದು ಅಭಿವೃದ್ಧಿಯನ್ನೂ, ಬದುಕನ್ನೂ ಏಕಕಾಲಕ್ಕೆ ಗುರುತಿಸುತ್ತದೆ. ಒಟ್ಟಿನಲ್ಲಿ ಔಚಿತ್ಯಪೂರ್ಣವಾದ ಜೀವನಕ್ರಮವನ್ನು ನಾಡು ಎಂಬುದಾಗಿ ವ್ಯಾಖ್ಯಾನಿಸಿದ ಬಗೆಯನ್ನು ಕಾಣಬಹುದು. ಕನ್ನಡದ ಕಲ್ಪನೆ ಇದಕ್ಕಿಂತ ಭಿನ್ನವಾಗಿದೆ.

ನಾಡು-ನುಡಿಯ ಸಾಮಾನ್ಯ ಸ್ವರೂಪವನ್ನು ಗುರುತಿಸಿದಾಗ ನಾಡಿಗಿಂತ ನುಡಿ ಬೇರೆಯಲ್ಲ. ಇದನ್ನು ಜೋಡು ಪದವಾಗಿಯೇ ಕಾಣಬೇಕಾಗಿದೆಯೆಂಬುದನ್ನು ಅರ್ಥೈಸಿಕೊಳ್ಳಬಹುದಾಗಿದೆ. ನುಡಿ ಎನ್ನುವುದು ನಾಡಿನ ಎಲ್ಲ ಜನರ ಅಭಿವ್ಯಕ್ತಿ. ಆಧುನಿಕ ಅರ್ಥದಲ್ಲಿ ನಾಡು ಎನ್ನುವುದು ಊರು ಎಂಬರ್ಥದಲ್ಲೂ ಬಳಕೆಯಾಗುತ್ತದೆ. ಊರು

ಎನ್ನುವುದು ಅತ್ಯಂತ ಸ್ಥಳೀಯವಾದುದು. ಈ ಎಲ್ಲಾ ಆಲೋಚನೆಗಳೊಂದಿಗೆ ಕಾವ್ಯಗಳು ನಾಡು-ನುಡಿಯನ್ನು ಪ್ರತಿನಿಧೀಕರಿಸಿದ ಬಗೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಸಾಹಿತ್ಯ ಮತ್ತು ನೆಲದ ಸಂಬಂಧ**

ಸಾಹಿತ್ಯ ಮತ್ತು ನೆಲದ ಸಂಬಂಧವನ್ನು ಚರ್ಚಿಸುವ ಸಂದರ್ಭದಲ್ಲಿ ಕನ್ನಡ ಪ್ರಜ್ಞೆ ಸಾಹಿತ್ಯವನ್ನು ಹೇಗೆ ನೆಲದ ಉತ್ಪನ್ನವಾಗಿ, ಸರಕಾಗಿ ಗ್ರಹಿಸಿದೆ ಎಂಬ ಅಂಶವನ್ನು ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ನೆಲದ ಸಂಬಂಧವನ್ನು ಸಾಹಿತ್ಯದೊಂದಿಗೆ ವಿವರಿಸಿಕೊಳ್ಳುವಾಗ ಅದರಲ್ಲಿಯೇ ಅಂತರ್ಗತವಾಗಿರುವ, ಆದರೆ ಇಂದು ಆಧುನಿಕ ಪರಿಭಾಷೆಯಲ್ಲಿ ಗುರುತಿಸಲಾಗಿರುವ ದೇಸೀಯತೆ, ಪ್ರಾದೇಶಿಕತೆ, ಸ್ಥಳೀಯಪ್ರಜ್ಞೆ, ಮಣ್ಣಿನವಾಸನೆ, ನೆಲಮೂಲದ ಪ್ರಜ್ಞೆ ಮುಂತಾದ ಅಂಶಗಳನ್ನು ಅದರ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ.

ಇತ್ತೀಚಿನ ಸಂಶೋಧನೆಗಳಲ್ಲಿ ಪರಿಕಲ್ಪನೆಗಳಿಗೆ ಮಹತ್ವದ ಸ್ಥಾನವನ್ನು ಕಲ್ಪಿಸಲಾಗಿದೆ. ಪ್ರಕೃತಿ, ಪರಿಸರ, ಸಮಾಜ, ಸಂಸ್ಕೃತಿಯನ್ನು ಅರ್ಥೈಸಿಕೊಳ್ಳಲು ಪರಿಭಾಷೆಗಳನ್ನು ಸೃಷ್ಟಿಸಿಕೊಂಡು ಮುಂದೆ ಸಾಗುತ್ತಿದ್ದೇವೆ. ಬದುಕಿನ ವಿಭಿನ್ನ ಅನುಭವಗಳನ್ನು ಗ್ರಹಿಸುವ ಮತ್ತು ವಿವರಿಸಿಕೊಡುವ ಸಂದರ್ಭದಲ್ಲಿ ಈ ಪರಿಭಾಷೆಗಳು ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತವೆ. ಒಟ್ಟಾರೆಯಾಗಿ ಜ್ಞಾನ ಸಂವಹನದ ದಾರಿಯಲ್ಲಿ ಇವು ಕೈದೀವಿಗೆಗಳಾಗಿ ಕೆಲಸ ಮಾಡುತ್ತವೆ. ಪರಿಭಾಷೆಯ ಮೊದಲ ಆದ್ಯತೆ ವರ್ಗೀಕರಣ. ಚಂದ್ರಪೂಜಾರಿ ಅವರ ಅಭಿಪ್ರಾಯದಂತೆ 'ಒಂದು ನಿಲುವಿನೊಂದಿಗೆ ಇನ್ನಿತರ ನಿಲುವುಗಳನ್ನು ಒರೆಗೆ ಹಚ್ಚುವ, ಏಕವ್ಯಕ್ತಿಯ ಆಲೋಚನೆ ಅನುಭವಗಳಿಂದ ಹಲವರ ಅನುಭವ ಆಲೋಚನೆಗಳತ್ತ ಸಾಗುವ ಒಂದು ಸಂಶೋಧನಾ ಪ್ರಕ್ರಿಯೆಯ ಭಾಗವಾಗಿ ಪರಿಭಾಷೆ ರೂಪುಗೊಳ್ಳುತ್ತಾ ಸಾಗುತ್ತದೆ. ಸಂಶೋಧನಾ ಸಮುದಾಯದ ಒಂದು ಭಾಷೆಯಾಗಿಯೇ ಪರಿಭಾಷೆಯನ್ನು ಗ್ರಹಿಸಿಕೊಳ್ಳಬಹುದು." (೨೦೧೪ ಪು.೮)

ಯಾವುದೇ ವ್ಯಕ್ತಿಯ ಮೇಲೆ ಪ್ರಮುಖವಾಗಿ ಪ್ರಭಾವ ಬೀರುವ ಅಥವಾ ನಿಗ್ರಹಿಸುವ ಅಂಶಗಳೆಂದರೆ ಪರಿಸರ, ಸಮಾಜ, ಮನಸ್ಸು, ಸಾಹಿತಿಯ ಮೂಲ ಬಂಡವಾಳದಲ್ಲಿ ಇದು ಸಹಜವಾಗಿ ಪ್ರಭಾವ ಬೀರುತ್ತದೆ. ಕಾಲಗರ್ಭದಿಂದ ಕವಿ, ಕವಿ ಗರ್ಭದಿಂದ ಕೃತಿಯೊಂದು ಹುಟ್ಟಿಬರುತ್ತದೆಂಬ ಮಾತು ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿದೆ. ಆದ್ದರಿಂದ ಸಾಹಿತ್ಯದೊಂದಿಗೆ ನೆಲದ ಸಂಬಂಧವನ್ನು ವಿವರಿಸುವಾಗ ವಿವಿಧ ಪರಿಭಾಷೆಗಳಲ್ಲಿ ಗುರುತಿಸಲ್ಪಟ್ಟಿರುವ ದೇಸೀಯತೆ, ಪ್ರಾದೇಶಿಕತೆ, ಸ್ಥಳೀಯಪ್ರಜ್ಞೆ ಮುಂತಾದ ಅಂಶಗಳನ್ನು ಬಿಡಿಬಿಡಿಯಾಗಿ ಚರ್ಚಿಸಬಹುದಾಗಿದೆ.

ನೆಲದ ಸಂಬಂಧವನ್ನು ಸಾಹಿತ್ಯ ಸಂದರ್ಭದಲ್ಲಿಟ್ಟು ನೋಡುವಾಗ ಸಾಹಿತ್ಯದ ಕುರಿತಾದ ಈ ಅಂಶವನ್ನು ಗಮನಿಸಬೇಕು. 'ಸಾಹಿತ್ಯ' ಎಂಬ ಪರಿಕಲ್ಪನೆ ಕೂಡಾ ನಿರಂತರವಾಗಿ ಬದಲಾಗುತ್ತ ಬಂದಿರುವುದನ್ನು ಕಾಣಬಹುದು. ಅಡುಗೆ ಸಾಹಿತ್ಯ, ಸೃಜನಶೀಲ ಸಾಹಿತ್ಯ, ಸೃಜನೇತರ ಸಾಹಿತ್ಯ ಹೀಗೆ ಭಿನ್ನ ನೆಲೆಗಳಲ್ಲಿ ಸಾಹಿತ್ಯವನ್ನು ಗಮನಿಸಬಹುದು. ರಹಮತ್ ತರೀಕೆರೆಯವರು ಅಭಿಪ್ರಾಯಪಟ್ಟಂತೆ, 'ಜೀವಂತವೂ, ಉಪಯುಕ್ತವೂ ಆದ ಎಲ್ಲಾ ಭಾಷಿಕ ಅಭಿವ್ಯಕ್ತಿಯನ್ನು ಸಾಹಿತ್ಯ ಎನ್ನಬಹುದು. ಇದು ಬರಹ ಇಲ್ಲವೇ ಮೌಖಿಕ ರೂಪದಲ್ಲಿರಬಹುದು. ಜೀವಂತಿಕೆಯ, ವಿಶಿಷ್ಟ ಸಾಮರ್ಥ್ಯವುಳ್ಳ ವ್ಯಕ್ತಿಗಳು ಮತ್ತು ತಮ್ಮ ಅನುಭವ, ಚಿಂತನೆ, ಭಾವನೆ, ಕಲ್ಪನಾಶಕ್ತಿಗಳನ್ನು ಬಳಸಿ ಕಟ್ಟುವ ಕಾರಣದಿಂದ ಸೃಜನಶೀಲ ಮತ್ತು ಸೃಜನೇತರ ವಿಭಜನೆಗಳು ಇರುವುದಿಲ್ಲ. ಹಾಗಾಗಿ ಸಾಹಿತ್ಯ ಮಿಮಾಂಸೆಯೆಂದರೆ ಸಾಹಿತ್ಯಲೋಕದ ಎಲ್ಲಾ ಚಟುವಟಿಕೆಗಳ ಕಥನವಾಗಿದೆ. (೨೦೦೫ ಪು.೧೧)

ಮಾನವೀಯತೆಯಿರುವ ಪ್ರತಿ ಮನುಷ್ಯರು ಸುತ್ತಲಿನ ಪರಿಸರದ ನೋವು ನಲಿವುಗಳಿಗೆ ತೀವ್ರವಾಗಿ ಸ್ಪಂದಿಸುತ್ತಾರೆ. ಪ್ರಜ್ಞಾವಂತ ಕವಿಗಳೂ ಕೂಡಾ ಸುತ್ತಲ ಆಗು ಹೋಗುಗಳಿಗೆ ಸ್ಪಂದಿಸಿ ಅದನ್ನು ಸಾಹಿತ್ಯದ ಮೂಲಕ ದಾಖಲಿಸುವ ಪ್ರಯತ್ನ ಮಾಡುತ್ತಾರೆ. ಇದರಿಂದ ಕವಿಯ ಆಲೋಚನೆಗಳು ವೈಯಕ್ತಿಕ ಜಗತ್ತಿಗಷ್ಟೇ ಸೀಮಿತವಾಗಿರದೆ ಸಮಾಜದ ಒಳಿತಿನೆಡೆಗೆ ಹೆಜ್ಜೆ ಹಾಕುತ್ತದೆ. ಆ ಪರಿಸರದ ದಾಖಲೆಯೇ ಪ್ರಾದೇಶಿಕತೆಯ ಪ್ರಜ್ಞೆ. ಈ ಹಿನ್ನೆಲೆಯಿಂದ 'ಪ್ರಾದೇಶಿಕತೆ' ಎನ್ನುವುದು ವಿಶಿಷ್ಟವಾದ ಅರ್ಥವುಳ್ಳದ್ದು. ಹಾಗಾಗಿ ಯಾವುದೇ ಸಾಹಿತ್ಯ ಕೃತಿ ಒಂದು ನಿರ್ದಿಷ್ಟ ಪ್ರದೇಶವನ್ನು ತನ್ನ ಕೃತಿಯ ಕ್ಷೇತ್ರವನ್ನಾಗಿ ಆಯ್ಕೆ ಮಾಡುತ್ತದೆ. ಮಾತು ಅಲ್ಲಿನ ಜನರ ಜೀವನ ವಿಧಾನಕ್ಕೆ ಹೆಚ್ಚು ಒತ್ತುಕೊಡುತ್ತದೆ. ಈ ನಿರ್ದಿಷ್ಟ ಪ್ರದೇಶ ಆಯಾ ಬರಹಗಾರರ ಹುಟ್ಟೂರೇ ಆಗಿರುತ್ತದೆ. ಇದು ಅವರ ಪಾಲಿಗೆ ಒಂದು ವಿಶಿಷ್ಟ ಸ್ಥಳೀಯ ಜಗತ್ತು. ಅವರವರ ಭಾವಕೋಶಗಳು, ಅನುಭವಗಳು ರೂಪುಗೊಳ್ಳುವುದು ಆ ಊರಿನ ಬಾಲ್ಯದ ಜಗತ್ತಿನಲ್ಲಿ. ಹಾಗಾಗಿ ನಾವು ವಾಸಿಸುವ ಜಾಗವೇ ನೆಲ. 'ನೆಲ' ಎಂದ ಕೂಡಲೇ ತನ್ನದು, ಸ್ವಂತದ್ದು ಎಂಬ ಪ್ರಜ್ಞೆ ಪ್ರಕಟವಾಗುತ್ತದೆ. 'ನಾಡು' ಎನ್ನುವಂತದ್ದು ಸಮುದಾಯವೊಂದು ಭಾವನಾತ್ಮಕವಾಗಿ ಕಟ್ಟಿಕೊಂಡದ್ದು. ಹಾಗೆಯೇ 'ಸಮಾಜ' ಎನ್ನುವುದು ಹಲವು ವ್ಯಕ್ತಿಗಳ, ಹಲವು ಮೌಲ್ಯಗಳ ಅಮೂಲ್ಯ ಸಂಕೇತ. ಪ್ರತಿಯೊಬ್ಬ ಲೇಖಕನೂ ಸಮಾಜದ ಅಂಗವಾಗಿಯೇ ಬೆಳೆಯುತ್ತಾನೆ. ಹಾಗಾಗಿ ತಮ್ಮ ಕಾಲದ ಜೀವನವನ್ನು ಪ್ರಭಾವಿಸುವ ಎಲ್ಲ ಸಂಗತಿಗಳ ಬಗೆಗೂ ಬರಹಗಾರರು ಮುಖಾಮುಖಿಯಾಗುತ್ತಾರೆ. ಇದರಿಂದಾಗಿ ನಾಡು-ನುಡಿ, ಭೂಮಿತಾಯಿ, ಪ್ರಕೃತಿ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮುಂತಾದ ಎಲ್ಲಾ ವಿಚಾರಗಳೂ ಕೃತಿಯ ವಸ್ತುಗಳಾಗುತ್ತವೆ.

ನೆಲದ ಪ್ರಜ್ಞೆ ಪ್ರತಿಯೊಬ್ಬ ಕವಿಯ ರಚನೆಯಲ್ಲಿಯೂ ಕಾಣುವ ಮುಖ್ಯ ಅಂಶ. ಇದನ್ನೇ 'ಸ್ಥಳೀಯತೆ', 'ದೇಸಿ ಪ್ರಜ್ಞೆ', 'ಪ್ರಾದೇಶಿಕತೆ' ಮುಂತಾದ ಪರಿಭಾಷೆಗಳ ಮೂಲಕ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಓ ಎಲ್. ನಾಗಭೂಷಣಸ್ವಾಮಿ ಅವರ ಅಭಿಪ್ರಾಯದಂತೆ, 'ಯಾವುದೇ ಒಂದು ಪ್ರದೇಶದ ಜನಜೀವನದ ವೈಶಿಷ್ಟ್ಯಗಳನ್ನು ಭಾಷೆ, ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ, ಹಬ್ಬ-ಹರಿದಿನಗಳು ಇತ್ಯಾದಿಗಳನ್ನು ಕೃತಿಯೊಂದರಲ್ಲಿ ಸಾಕಷ್ಟು ವಿವರವಾಗಿ ಅಳವಡಿಸಿಕೊಂಡಾಗ ಅಂತಹ ಕೃತಿಯಲ್ಲಿ ಪ್ರಾದೇಶಿಕತೆಯಿದೆ ಎಂದು ಗುರುತಿಸಬಹುದಾಗಿದೆ. ಕುವೆಂಪುರವರ ಕೃತಿಗಳಲ್ಲಿ ಮಲೆನಾಡಿನ, ಚಿತ್ತಾಲರ ಕಾದಂಬರಿ ಉತ್ತರಕನ್ನಡದ, ಕಾರಂತರ ಕಾದಂಬರಿಗಳು ಕರಾವಳಿ ತೀರದ ಪ್ರಾದೇಶಿಕ ವೈಶಿಷ್ಯವನ್ನು ಗುರುತಿಸಿವೆ. ಇದು ನಿರ್ದಿಷ್ಟ ಪ್ರದೇಶವೊಂದರ ಪ್ರಾಮಾಣಿಕ ವಿವರಣೆಯಾಗಿದೆ'. (೧೯೮೩ ಪು.೧೮೬) ಮೇಲಿನ ಈ ಸಂಗತಿಗಳನ್ನು ಪ್ರಾದೇಶಿಕತೆಯ ಗುಣಲಕ್ಷಣಗಳೆಂಬುದಾಗಿ ಅರ್ಥೈಸಿಕೊಳ್ಳಬಹುದು.

'ಸ್ಥಳ' ಎಂಬುದನ್ನೆ ವಿಶಿಷ್ಟವಾದ ಮತ್ತು ವಿಶಾಲವಾದ ಅರ್ಥದಲ್ಲಿ 'ಪ್ರಾದೇಶಿಕತೆ' ಎನ್ನಬಹುದು. ಇದು ವಿಮರ್ಶೆಯ ಪರಿಭಾಷೆ. ಪ್ರಾದೇಶಿಕ ಸಂವೇದನೆಯನ್ನು ಸಾಹಿತ್ಯ ಕೃತಿಯಲ್ಲಿ ಕಟ್ಟಿಕೊಡುವುದರ ಮೂಲಕ ಬರಹಗಾರರು ಗಟ್ಟಿಯಾಗುತ್ತಾರೆ. ಇದು ಎಲ್ಲಾ ಭಾಷೆಯ ಸಾಹಿತ್ಯದೊಳಗೂ ಕಂಡು ಬರುವ ಸಂಗತಿ. ಪರಂಪರೆಯ ಕವಿಗಳನ್ನು ಗಮನಿಸಿದರೆ, ಪಂಪ ಬನವಾಸಿಯನ್ನು ಗುರುತಿಸುವುದರ ಮೂಲಕ ಪ್ರಾದೇಶಿಕ ನೆಲೆಯ ಅನನ್ಯತೆಯನ್ನು ತನ್ನ ಕೃತಿಯಲ್ಲಿ ಅನಾವರಣಗೊಳಿಸಿದ್ದಾನೆ. ಹರಿಹರನಿಗೆ ಹಂಪೆ ಕಾವ್ಯದ ನೆಲೆಗಟ್ಟು, ಮುದ್ದಣ ಕರಾವಳಿ ಕರ್ನಾಟಕವನ್ನು ಕೃತಿಯಲ್ಲಿ ಪರಿಚಯಿಸುತ್ತಾನೆ. ಸಾಧನಕೇರಿಯ ಮೂಲಕ ಬೇಂದ್ರೆ ಪ್ರಕಟಗೊಂಡರೆ, ತುಳು ನಾಡಿನ ಮೂಲಕ ಕಯ್ಯಾರರ ಚಹರೆಯಿದೆ. ಇವರೆಲ್ಲರ ಪ್ರಯತ್ನದ ಮೂಲಕ ಸಾಹಿತ್ಯ ವಿಶ್ವಾತ್ಮಕ ನೆಲೆಗೆ ಏರಿದರೂ ಅದರ ಬೇರು ಮಾತ್ರ ಆಯಾ ಕವಿಗಳ ಪ್ರದೇಶದಲ್ಲಿ ಇರುವಂತದ್ದು ಮುಖ್ಯ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಎಲ್ಲ ಪ್ರದೇಶಗಳ ಬಗೆಗೂ ಕಾವ್ಯ ಹುಟ್ಟಿದೆಯೆಂದರೆ ಉತ್ಪ್ರೇಕ್ಷೆಯಲ್ಲ. ಪ್ರತಿಯೊಂದು ಪ್ರದೇಶವೂ ಭಿನ್ನ ಹಾಗೂ ಅನನ್ಯ. ಸಹಜವಾಗಿ 'ಪ್ರದೇಶ' ಎಂದು ಕರೆಯುವಾಗ ಅದಕ್ಕೊಂದು ಭೌಗೋಳಿಕ ಎಲ್ಲೆಯನ್ನು ಗುರುತಿಸುತ್ತೇವೆ. ಈ ಎಲ್ಲೆಯೂ ಪ್ರದೇಶದ ಅಸ್ತಿತ್ವ ಮತ್ತು ವ್ಯಾಪ್ತಿಯನ್ನು ನಿರ್ಧರಿಸುತ್ತದೆ. 'ಪ್ರದೇಶ'ವನ್ನು ವ್ಯಾಖ್ಯಾನಿಸಬೇಕಾದರೆ ಯಾವುದಾದರೂ ವಿಶಿಷ್ಟ ಸಂಗತಿಯೊಂದರ ಏಕರೂಪತೆ ಇರಬೇಕು. ಈ ಪರಿಭಾಷೆಗಳೆಲ್ಲ ಆಧುನಿಕ ಸಂದರ್ಭದಲ್ಲಿ ರೂಪು ಪಡೆದವುಗಳು. ವಸಾಹತು ಸಂದರ್ಭದ ನೆಲೆಯಲ್ಲಿ ಈ ಕಲ್ಪನೆಗಳು ಹುಟ್ಟಿಕೊಳ್ಳುವ ಮೂಲಕ ಸ್ಥಳೀಯ ಕಾವ್ಯಗಳಿಗೆ ಜೀವಂತಿಕೆಯ ಅರಿವಾಯಿತು.

'ಒಂದು ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಭೌಗೋಳಿಕ ಪರಿಸರಕ್ಕೆ ವಿಶಿಷ್ಟವಾದ ಜೀವನಕ್ರಮ, ಸಾಮಾಜಿಕ-ಆರ್ಥಿಕ ವ್ಯವಸ್ಥೆ, ನಂಬಿಕೆ, ಆಚರಣೆಗಳು, ಧಾರ್ಮಿಕ ಸಂಗತಿಗಳು, ಭಾಷೆ-ಉಪಭಾಷೆಗಳು ಔಚಿತ್ಯಪೂರ್ಣವಾಗಿ ಹಾಗೂ ವಾಸ್ತವಿಕ ನೆಲೆಯಲ್ಲಿ ಕೃತಿಗಳಲ್ಲಿ ಬಳಕೆಯಾಗುವುದೇ ಪ್ರಾದೇಶಿಕತೆ ಎನ್ನಬಹುದು'. ಇದು ಸತ್ಯನಾರಾಯಣ ಭಟ್ ಅವರ ಅಭಿಪ್ರಾಯ. (೧೯೯೨ ಪು.೧೨) ಇದು ಪ್ರಾದೇಶಿಕತೆ ಎಂಬ ಪರಿಭಾಷೆಯ ಬಗೆಗೆ ಸ್ಪಷ್ಟ ನಿರ್ವಚನ. ಒಟ್ಟಿನಲ್ಲಿ ಪ್ರಾದೇಶಿಕತೆಗೆ ಅದರದೇ ಆದ ಕೆಲವು ಗುಣ ಲಕ್ಷಣಗಳಿವೆಯೆಂಬುದನ್ನು ಈ ಮೂಲಕ ಅರ್ಥೈಸಿಕೊಳ್ಳಬಹುದು. ಅದು ಆಯಾ ಪ್ರದೇಶದ ಭೌಗೋಳಿಕ, ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳಿಂದ ವೇದ್ಯವಾಗುತ್ತದೆ. ಈ ಅಂಶಗಳು ಒಂದು ಪ್ರದೇಶದ ಇದೇ ಸಂಗತಿಗಳಿಂದ ವಿಶಿಷ್ಟವಾಗಿದ್ದಾಗ ಮಾತ್ರ ಗಮನಾರ್ಹವಾಗುತ್ತವೆ. ಪ್ರಾದೇಶಿಕ ಅಂಶಗಳು ಯಾವುದೇ ಒಂದು ಕೃತಿಯಲ್ಲಿ ಹೇಗೆ ಮೂಡಿ ಬರಬೇಕು ಎಂಬುದಕ್ಕೆ ಯಾವುದೇ ಮಾನದಂಡಗಳಿಲ್ಲ. ಕೃತಿಗಳಲ್ಲಿ ಇದು ಅಗತ್ಯವೇ? ಇದರ ಬಳಕೆ ಎಷ್ಟರಮಟ್ಟಿಗಿರಬೇಕೆಂಬುದಕ್ಕೆ ಯಾವ ಲೆಕ್ಕಾಚಾರವೂ ಇಲ್ಲ. 'ಸ್ಥಳೀಯತೆ' ಎನ್ನುವುದು ಕೆಲವೊಮ್ಮೆ ಕೃತಿಗೆ ಮೆರುಗು ನೀಡಬಹುದು. ಹಾಗೆಯೇ ಪ್ರಾದೇಶಿಕತೆಯ ವಿವರಗಳು ಬದುಕಿನ ವಿವರಗಳ ಜೊತೆಗೆ ಮೇಳೈಕೆಯಾದರೆ ಕೃತಿಗೆ ಸಾರ್ಥಕತೆ. ಅಂತೆಯೇ ಈ ಕುರಿತಾದ ಅತಿಯಾದ ವಿವರಣೆಗಳಿದ್ದರೂ ಆ ಕೃತಿಯ ಸಂವಹನಕ್ಕೆ ಧಕ್ಕೆಯಾಗಬಹುದೇನೋ ಅಥವಾ ಆ ಅಂಶಗಳು ಓದುಗನಿಗೆ ತೀರಾ ಅಪರಿಚಿತವಾದುದಾದರೆ ಓದುವ ಕುತೂಹಲವನ್ನು ಕೆರಳಿಸದೆಯೂ ಇರಬಹುದು. ಮನುಷ್ಯನ ವ್ಯಕ್ತಿತ್ವಕ್ಕೆ ಬಾಲ್ಯದ ಪರಿಸರದ ಕೊಡುಗೆ ಅನನ್ಯವಾದುದು. ಆ ಪರಿಸರ ಕೃತಿಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಇಣುಕು ಹಾಕುತ್ತದೆ. ಕುವೆಂಪು ತಮ್ಮ ಹಲವಾರು ಕವಿತೆಗಳಲ್ಲೂ, ಕಾದಂಬರಿಗಳಲ್ಲಿಯೂ ತಾನು ಹುಟ್ಟಿ ಬೆಳದ ಪರಿಸರವನ್ನು ಚಿತ್ರಿಸಿದ್ದಾರೆ. ಕವಿಶೈಲ, ನವಿಲುಕಲ್ಲು, ಸಿಬ್ಬಲುಗುಡ್ಡ, ತುಂಗಾನದಿ ಮೊದಲಾದುವು ಇಂತಹ ಕೆಲವು ಮಾದರಿಗಳು. ಕೃಷಿಕರ ಜೀವನ, ಅದರ ಅಂಗಗಳಾದ ಬೇಟೆ, ಸಾಹಸಗಳ ಪರಿಚಯ ಇವೆಲ್ಲ ಇವರ ರಚನೆಗಳ ಮೂಲದ್ರವ್ಯಗಳಾಗಿವೆ.

ಕುವೆಂಪುರವರ ಕಾಡು ಹೇಗೋ ಕಾರಂತರ ಕಡಲೂ ಹಾಗೆಯೇ. ಇವೆರಡೂ ಮನುಷ್ಯರೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿವೆ. ಹಾಗೆಯೇ ಇವು ಮನುಷ್ಯನಿಗೆ ಭಯ ಹುಟ್ಟಿಸುವುದಿಲ್ಲ. ಆತ್ಮೀಯವಾಗಿದ್ದು ಬದುಕಿಗೆ ಪೂರಕವಾಗಿದೆ. ಬಾಲ್ಯ ಎಲ್ಲವನ್ನೂ ಕುತೂಹಲದ ಕಣ್ಣಿನಿಂದ ಕಾಣುವಂತದ್ದು. ಆ ಕುತೂಹಲವೇ ಅವರ ಮೇಲೆ ಗಾಢವಾದ ಪರಿಣಾಮ ಬೀರಿ

ಕೃತಿ ರಚನೆಗೆ ಕಾರಣವಾಯಿತು. ಅಗತ್ಯಕ್ಕೆ ತಕ್ಕಂತೆ ಸಂದರ್ಭೋಚಿತವಾಗಿ ಇವುಗಳನ್ನು ಬಳಸಿಕೊಂಡವರು ಕಾರಂತರು. ಇವರ ಕ್ರಿಯಾಕ್ಷೇತ್ರ ಕರಾವಳಿ.

ಮನುಷ್ಯರಿಗೆ ತಮ್ಮ ಹುಟ್ಟೂರು ಶ್ರೇಷ್ಠವಾದುದು. ಅದು ತಾಯಿ–ಮಗುವಿನ ಬಂಧದಂತೆ ಗಟ್ಟಿಯಾದದ್ದು. ಬೇಂದ್ರೆಯವರು ಹೇಳಿದಂತೆ 'ಆ ಊರು ಈ ಊರು ಯಾವೂರು ಆದರೂ ತವರೂರು ತಮ ತಮಗೆ ತಾನೆ ಚೆಂದ. ಕಟ್ಟಿ ಕೊಡುವುದಲ್ಲ. ಬಿಚ್ಚಿ ಬಿಡುವುದಲ್ಲ ಹೊಕ್ಕುಳಿನ ಹುರಿಯಂಥ ಭಾವ ಬಂಧ' (ಅಹಿತಾನಲ ಪು.೯೭) ಇದು ತವರೂರಿನ ಅಭಿಮಾನದ ಬಗೆಗೆ ಅರ್ಥಪೂರ್ಣ ಸಾಲುಗಳು. ತಾಯಿ – ಮಗು ಎಂಬ ಬಂಧ ನಿರಂತರವಾದುದು. ಕಳಚಿಕೊಳ್ಳಲಾರದಷ್ಟು ಬಿಗು. ಕವಿಗೆ ತಾನು ಬೆಳೆದ ಹುಟ್ಟೂರಿನ ಬಂಧವೂ ಅಷ್ಟೇ ಬಿಗು. ಅಂತೆಯೇ ಭಾವನಾತ್ಮಕವಾದುದು. ನೆಲ ಅಂದರೆ ಎಲ್ಲರಿಗೂ ವಿಶೇಷ ಪ್ರೀತಿ. ಆಶ್ರಯ ನೀಡಿದ ನೆಲವನ್ನು ಭೂಮಿ, ಪೃಥ್ವಿ, ಮುಂತಾದ ಹೆಸರುಗಳ ಮೂಲಕ ಗುರುತಿಸಲಾಗಿದೆ. ನೆಲವನ್ನು ಹೆಣ್ಣಾಗಿ ಪರಿಭಾವಿಸಿ ನಮ್ಮೆಲ್ಲರ ರಕ್ಷಕಿಯೆಂದು ಭಾವಿಸಲಾಗಿದೆ. ಭೂಮಿಯ ಆರಾಧನೆ ಪ್ರಾಚೀನ ಪರಂಪರೆಯಲ್ಲಿ ಬೆರೆತು ಹೋಗಿತ್ತು. ವ್ಯಕ್ತಿಯೊಬ್ಬ ಸತ್ತಮೇಲೆ ಮತ್ತೆ ಮಣ್ಣಿನ ಮಡಿಲಿನಲ್ಲಿಯೇ ಸೇರಿ ಹೋಗುತ್ತಾನೆ. ನಾವಿರುವ ನೆಲ ನಮ್ಮನ್ನು ಪೊರೆಯುವುದರೊಂದಿಗೆ ವ್ಯತಿರಿಕ್ತವಾಗಿ ವರ್ತಿಸಿದಾಗ ಕೊಲ್ಲುವ ಕೆಲಸವನ್ನು ಮಾಡಬಲ್ಲುದು. ನೆಲ ಮತ್ತು ಮನುಷ್ಯನ ಮಧ್ಯೆ ಆಪ್ಯಾಯಮಾನ ಸಂಬಂಧ. ನಾವು ಬದುಕನ್ನು ಕಟ್ಟಿಕೊಂಡ ನೆಲವನ್ನು ಪವಿತ್ರವಾದ ಕಲ್ಪನೆಯೊಂದಿಗೆ ಆರಾಧಿಸುತ್ತೇವೆ.. ಈ ಮೋಹ ಎಷ್ಟು ಗಾಢವಾದುದೆಂದರೆ ಪಂಪನಂತಹ ಕವಿಗೆ ಬನವಾಸಿಯಲ್ಲಿ ಮನುಷ್ಯನಾಗಿ ಹುಟ್ಟಲು ಅಸಾಧ್ಯವಾದಲ್ಲಿ ಮರಿದುಂಬಿಯಾಗಿ ಆದರೂ ಹುಟ್ಟಬೇಕೆಂಬ ಅಪೇಕ್ಷೆ.

ಸ್ಥಳೀಯಪ್ರಜ್ಞೆ, ದೇಸೀಯತೆ, ಮಣ್ಣಿನವಾಸನೆ, ನೆಲದಪ್ರಜ್ಞೆ, ಪ್ರಾದೇಶಿಕತೆ ಮೊದಲಾದ ಪದಗಳಿಗೆ ಸೂಕ್ಷ್ಮವಾದ ಅರ್ಥ ವ್ಯತ್ಯಾಸವಿದ್ದರೂ ಇವನ್ನೆಲ್ಲ 'ಪ್ರಾದೇಶಿಕತೆ' ಎಂಬ ಪರಿಭಾಷೆಯೊಳಗಡೆ ಗುರುತಿಸಿಕೊಂಡು ಚರ್ಚಿಸಬಹುದಾಗಿದೆ. ಇದು ಒಂದು ಪ್ರದೇಶದ ಸಾಂಸ್ಕೃತಿಕ ವಿಭಿನ್ನತೆಯನ್ನು ಗುರುತಿಸುವ ಸಂಗತಿ. ಪ್ರದೇಶದಿಂದ ಪ್ರದೇಶಕ್ಕೆ ಆಚಾರ–ವಿಚಾರ, ನಂಬಿಕೆ, ಸಂಪ್ರದಾಯ ಇವೆಲ್ಲ ಬದಲಾಗುತ್ತವೆ. ಇದು ಸಾಮೂಹಿಕ ಅಭಿವ್ಯಕ್ತಿಯೇ ಹೊರತು ವೈಯಕ್ತಿಕವಾದುದಲ್ಲ. ಪ್ರತಿಯೊಂದು ಪ್ರದೇಶಕ್ಕೂ ಅದರದೇ ಆದ ವಿಶಿಷ್ಟ ಛಾಪು ಇರುತ್ತದೆ. ಇದು ಆ ಪ್ರದೇಶದ ಅಸ್ಮಿತೆಯನ್ನು ಗುರುತಿಸುವ ಸಂಗತಿಯೂ ಆಗಿರುತ್ತದೆ. ಇಲ್ಲಿ ಭಿನ್ನತೆಯ ಜೊತೆಗೆ ವಿಶಿಷ್ಟ ಭೌಗೋಳಿಕತೆಯೂ ಇರಬೇಕು.

ಸಂಸ್ಕೃತಿ ಮತ್ತು ಭಾಷೆ ಅನ್ಯೋನ್ಯ ಸಂಬಂಧವನ್ನು ಹೊಂದಿದೆ. ಭಾಷೆಯು ಮನುಷ್ಯರನ್ನು ಭಾವನಾತ್ಮಕವಾಗಿ ಒಂದು ಗೂಡಿಸುವ ಸಾಧನ. ಬರಹಗಾರರು ಜನಸಾಮಾನ್ಯರ ವಾಸ್ತವ ಜೀವನ, ಆಡುನುಡಿ, ಆಚರಣೆ, ಸಂಸ್ಕೃತಿ ಇತ್ಯಾದಿಗಳ ಮೂಲಕ ತಮ್ಮ ಸಾಹಿತ್ಯ ಸೃಷ್ಟಿಗೆ ಜೀವತುಂಬಲು ಪ್ರಯತ್ನಿಸಿದಾಗ ಪ್ರಾದೇಶಿಕತೆ ಎದ್ದು ತೋರುತ್ತದೆ. ಹಾಗಾಗಿ ಇದು ಭೌಗೋಳಿಕತೆಯನ್ನು ಮೀರಿ ಜನರ ಜೀವನ ವಿಧಾನ ಎಂಬ ವಿಶಾಲಾರ್ಥವನ್ನು ಪಡೆಯುತ್ತದೆ. ಹೀಗೆ ಆಯಾ ಪ್ರದೇಶದ ಲೇಖಕರು ಅಲ್ಲಿನ ವಿಶಿಷ್ಟ ಸಂಗತಿಗಳಿಗೆ ಸಾಹಿತ್ಯಿಕ ಸಾಕ್ಷಿಗಳಾಗುತ್ತಾರೆ. ನೆಲದ ಸಂಗತಿಗಳನ್ನು ಕೃತಿಗಳ ಮೂಲಕ ದಾಖಲಿಸುವುದರೊಂದಿಗೆ ಸಾಂಸ್ಕೃತಿಕ ರಾಯಭಾರಿಗಳಾಗುತ್ತಾರೆ.

**ಜನಪದರಲ್ಲಿ ನೆಲದ ಪ್ರಜ್ಞೆ**

ಜನಪದ ಮತ್ತು ಶಿಷ್ಟ ಸಾಹಿತ್ಯದಲ್ಲಿ ನೆಲಮೂಲದ ಪ್ರಜ್ಞೆ ಹೇಗೆ ಅನಾವರಣಗೊಂಡಿದೆಯೆಂಬ ಸಂಗತಿಯನ್ನು ಗಮನಿಸಬಹುದು. ಜನಪದ ಜ್ಞಾನವೇ ಜಾನಪದ. ಇದು ಮೌಖಿಕ ಸಾಹಿತ್ಯ. ಇವರು ಅಜ್ಞಾತ ಕವಿಗಳು. ಈ ಸಾಹಿತ್ಯದ ಕುರಿತು ವಿದ್ವಾಂಸರು ಅರ್ಥಪೂರ್ಣವಾದ ವ್ಯಾಖ್ಯೆಗಳನ್ನು ನೀಡಿದ್ದಾರೆ. ಇದನ್ನು ಪಾಶ್ಚಾತ್ಯ ವಿದ್ವಾಂಸರೊಬ್ಬರು 'ಸಂಪ್ರದಾಯಗಳ ವಿಜ್ಞಾನ' ಎಂದಿದ್ದಾರೆ. ಒಟ್ಟಿನಲ್ಲಿ ಇದು ಮೌಖಿಕ ಸಂಪ್ರದಾಯದಲ್ಲಿ ಸಾಗಿಬಂದ ಸಂಗತಿ. ಜಾನಪದದಲ್ಲೆಲ್ಲವೂ ಅಡಗಿದೆ.

ವೈಜ್ಞಾನಿಕ ಸಂಸ್ಕೃತಿಗೆ ಕೃಷಿ ಸಂಸ್ಕೃತಿಯೇ ಮೂಲ. ಹಾಗೆಯೇ ಕೃಷಿಗೆ ಭೂಮಿ ಮೂಲ. ನೆಲದ ಜೊತೆಗೆ ನೆನಪಿಟ್ಟುಕೊಳ್ಳುವುದು ಕೃಷಿ ಸಂಸ್ಕೃತಿಯನ್ನು. 'ನೆಲದ ಮಗ' ಎನ್ನುವುದು ಈ ಸಂಸ್ಕೃತಿಯ ಜೊತೆಗೆ ಭಾವನಾತ್ಮಕ ಸಂಬಂಧ ಇರುವವರನ್ನು. ಈ ಜನಪದರು ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಂಡದ್ದು ಬೇಸಾಯದ ಮೂಲಕ. ಅವರೆಲ್ಲ ಮಣ್ಣಿನ ಮಕ್ಕಳು. ಹಾಗಾಗಿಯೇ,

> ಮಣ್ಣಿಂದ ನಂಬಿನಾ ಮಣ್ಣಿನಿಂದ ಬದುಕೇನು
> ಮಣ್ಣೆನೆಗೆ ಮುಂದೆ ಹೊನ್ನು / ಅಣ್ಣಯ್ಯ
> ಮಣ್ಣೆ ಲೋಕದಲಿ ಬೆಲೆಯದ್ದು

ಮಣ್ಣನ್ನು ನಂಬಿ ಬದುಕನ್ನು ನಡೆಸಿದವರು ಜನಪದರು. ಮಣ್ಣೇ ಭವಿಷ್ಯದಲ್ಲಿ ಅವರಿಗೆ ಹೊನ್ನು. ಹಾಗಾಗಿಯೇ ಅದು ಮೌಲ್ಯವುಳ್ಳದ್ದು. ಗಿಡಮಣ್ಣಿನಲ್ಲಿ ಬೆಳೆಯಬೇಕು. ಮನುಷ್ಯ ಬದುಕು

ಮಣ್ಣಿನಲ್ಲಿ ಅರಳಬೇಕು. ಹಸಿರಿನಿಂದ ಜೀವಸತ್ವ ಮಾತ್ರವಲ್ಲ, ದೇಹಕ್ಕೂ ಮಣ್ಣಿಗೂ ನಿಕಟವಾದ ಸಂಬಂಧವಿದೆ. ಮನುಷ್ಯ ಹುಟ್ಟುವುದು ಮಣ್ಣಲ್ಲೆ; ಕೊನೆಗೆ ಸೇರುವುದು ಮಣ್ಣನ್ನೇ.

ಜನಪದರಿಗೆ ನೆಲವೆಂದರೆ ಅಪಾರ ಪ್ರೀತಿ. ಮಣ್ಣು ಅವರ ಜೀವನದ ಕರ್ಮಭೂಮಿ ಮಾತ್ರವಲ್ಲ ಒಡನಾಡಿ. ತಲೆಮಾರುಗಳಿಂದ ಅವರನ್ನು ಸಾಕಿ ಸಲಹಿದ, ಕಾಪಾಡಿದ ಭೂಮಿಯ ಬಗೆಗೆ ಅವರಿಗೆ ವಿಶೇಷ ಅಕ್ಕರೆ. ಹಾಗಾಗಿ ಭೂಮಿಯ ನೆನಪೇ ಜನಪದರಿಗೆ ಹಿಗ್ಗು. ಪ್ರಕೃತಿಯ ಉಪಾಸನೆ ಅವರ ಬದುಕಾಗಿತ್ತು. ತಾವು ಬೆಳೆಸಿದ ಪೈರು ಪಚ್ಚೆಗಳನ್ನು ಪೂಜಿಸುವ ಇವರ ನೆಲದ ಪ್ರೀತಿ ಮೆಚ್ಚುವಂತದ್ದು.

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ  
ಎಳ್ಳು ಜೀರಿಗೆ ಬೆಳೆಯೋಳ / ಭೂಮಿ ತಾಯಿ  
ಎದ್ದೊಂದು ಗಳಿಗೆ ನೆನೆದೇನ

ಇಂತಹ ಭೂಪ್ರಜ್ಞೆ ಆಧುನಿಕರಿಗೆ ಕೇಳುವುದಕ್ಕೆ ಹಿತಕಾರಿ, ಆಚರಣೆಗೆ ಕಷ್ಟ. ಭೂಮಿಗೆ ಒದೆಯುವವರನ್ನು ಕಾಣುತ್ತೇವೆಯೇ ಹೊರತು ನಾಜೂಕಿನಿಂದ ನಮಸ್ಕರಿಸುವವರು ವಿರಳ. ಜನಪದರಿಗೆ ಮಣ್ಣೆಂದರೆ ಸರ್ವಸ್ವ. ಮನುಷ್ಯ ಅನುಭವಿಸುವ ಸರ್ವಸುಖಗಳು ಅದರಿಂದಲೇ ಲಭ್ಯ. ಭೂಮಿ ಬಂಜೆಯಾಯಿತೆಂದರೆ ಜೀವಕೋಟಿಯ ನಿರ್ನಾಮವೇ ಸರಿ. ತಾಯಿ ನವಮಾಸಗಳ ಕಾಲ ಗರ್ಭದಲ್ಲಿ ಪೋಷಿಸಿದರೆ ಭೂಮಿತಾಯಿ ಉಸಿರಿನ ಕೊನೆಯ ಕ್ಷಣದವರೆಗೂ ಮಡಿಲಲ್ಲಿಟ್ಟು ಪೋಷಿಸುತ್ತಾಳೆ. ಹಾಗಾಗಿ ಅನ್ನದಾತಳೂ ನೆಲದಾಯಿಯೇ.

ಹೊಸಬಂಡಿ ಮೇಲೆ ಹಸುವಿನ ಗೊಬ್ರತಂದೆ  
ಹಸಿರ ಭೂದೇವಿ ಹಾಕ್ತೇನೆ/ನನ ತಾಯವ್ವ  
ಹಸಿದ ಕಂದನ್ನ ಸಲಹವ್ವ

ಎನ್ನುವುದು ಮಣ್ಣಿನ ಮಗನ ವಿನೀತ ಪ್ರಾರ್ಥನೆ. ತನಗೆ ಬದುಕು ಕೊಟ್ಟುದಕ್ಕೆ ತಾನು ಆಕೆಗೆ ಅಗತ್ಯವಾದುದನ್ನು ಕೊಡಬೇಕೆನ್ನುವ ವಿಶಾಲಹೃದಯ ಜನಪದರದು.

'ಪ್ರಾದೇಶಿಕತೆ' ಎನ್ನುವ ಪರಿಭಾಷೆಯಲ್ಲಿ ಭೌಗೋಳಿಕತೆ, ಪ್ರಕೃತಿ, ಸಾಮಾಜಿಕ – ಆರ್ಥಿಕ ಜೀವನ, ಭಾಷೆ –ಉಪಭಾಷೆ, ನಂಬಿಕೆ –ಸಂಪ್ರದಾಯಗಳು ಧಾರ್ಮಿಕ ಸಂಗತಿಗಳು, ಹಬ್ಬ – ಹರಿದಿನ ಇತ್ಯಾದಿ ಸಂಗತಿಗಳು ಸೇರಿ ಹೋಗುತ್ತವೆ. ಪ್ರಾದೇಶಿಕತೆಯನ್ನು ಚಿತ್ರಿಸುವ ಸಾಹಿತ್ಯ ಕೃತಿಯೊಂದು ಸ್ಥಳದ ಕಲ್ಪನೆಯನ್ನು ಒಳಗೊಂಡಿರಬೇಕಾಗುತ್ತದೆ, ಈ ಸ್ಥಳ ಹಳ್ಳಿಯೋ, ನಗರವೋ

ಆಗಿರಬಹುದು. ಬದುಕಿಗೆ ಪೂರಕವಾದ ಎಲ್ಲ ಸಂಗತಿಗಳನ್ನು ಈ ಪರಿಭಾಷೆಯೊಳಗೆ ಗುರುತಿಸಬಹುದು. ಪ್ರಕೃತಿ ಇಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಯಾಕೆಂದರೆ, ಈಗಾಗಲೇ ಹೇಳಿದಂತೆ ಬದುಕಿಗೆ ಪೂರಕವಾದ ನಂಬಿಕೆ , ನಡವಳಿಕೆ, ಆರ್ಥಿಕ ಸ್ಥಿತಿಗತಿ, ಕೃಷಿ ವಿಧಾನ ಇವೆಲ್ಲವೂ ಪ್ರಕೃತಿಯಿಂದ ಪ್ರಭಾವಿತವಾಗಿರುತ್ತದೆ.

**ಶಿಷ್ಟ ಸಾಹಿತ್ಯದಲ್ಲಿ ನೆಲದ ಪ್ರಜ್ಞೆ**

ಶಿಷ್ಟ ಸಾಹಿತ್ಯದ ನೆಲದ ಪ್ರಜ್ಞೆಯನ್ನು ಕುರಿತು ಚರ್ಚಿಸುವಾಗ, ಆಧುನಿಕ ಪೂರ್ವದ ಕವಿಗಳಿಂದ ಈ ಚರ್ಚೆಯನ್ನು ಆರಂಭಿಸಬಹುದು. ಪರಂಪರೆಯಿಂದ ಇವರೆಲ್ಲರೂ ಗುರುತಿಸಿದ ನೆಲದ ಪ್ರಜ್ಞೆ ನಾಡಿನ ಪ್ರಜ್ಞೆಯಾಗಿಯೇ ಮೂಡಿ ಬಂದುದನ್ನು ಕಾಣಬಹುದು. 'ಕವಿರಾಜಮಾರ್ಗ'ದಲ್ಲಿ ಶ್ರೀವಿಜಯನು ಕನ್ನಡನಾಡಿನ ವ್ಯಾಪ್ತಿಯನ್ನು ಗುರುತಿಸಿದ್ದಾನೆ. ಈ ರೀತಿ ಗುರುತಿಸುವಲ್ಲಿ ಕವಿಗೆ ಆ ಭಾಗದ ಸಂಸ್ಕೃತಿ, ಭಾಷೆ, ಆಚಾರ – ವಿಚಾರಗಳ ಅರಿವು ಇದ್ದಿರಬೇಕು. ಈತ ಒಂದು ನಿರ್ದಿಷ್ಟ ವಲಯವನ್ನು ಗುರುತಿಸಿಕೊಂಡು ಅಲ್ಲಿಯ ನಿವಾಸಿಗಳನ್ನು ಅವರ ಸಂಸ್ಕೃತಿ, ಭಾಷೆ, ಗುಣಧರ್ಮಗಳ ಮೂಲಕ ಗುರುತಿಸುವುದು ನೆಲದ ಪ್ರಜ್ಞೆಯೆನಿಸುತ್ತದೆ.

ಈ ಕಾಲಘಟ್ಟದ ಕವಿಗಳು ನಾಡು, ಪರಿಸರ, ಪ್ರಕೃತಿ ಇವುಗಳನ್ನೆಲ್ಲ ಅತ್ಯಂತ ಅಭಿಮಾನದಿಂದ ವರ್ಣಿಸಿದ್ದಾರೆ. ಈ ಕವಿಗಳಿಗೆ 'ನಾಡು' ಎನ್ನುವುದು ಭಾವನಾತ್ಮಕ ಸಂಬಂಧವುಳ್ಳದ್ದು. ಹಾಗಾಗಿ ಇವರೆಲ್ಲರಿಗೆ ನಾಡಿನ ವರ್ಣನೆಯೆಂದರೆ ನೆಲದ ಅಭಿವ್ಯಕ್ತಿ. ರನ್ನನ ಕಾವ್ಯದಲ್ಲಿ ಬರುವ 'ಈ ನೆಲಂಪಾಳ್ನೆಲಂ ಎನಗೆ' ಎನ್ನುವುದು ಪಾಂಡವರ ಜೊತೆಗೆ ಬದುಕುವ ಅನಿವಾರ್ಯತೆಯ ಚರ್ಚೆ ಬಂದಾಗ ದುರ್ಯೋಧನ ಹೇಳುವ ಮಾತು. ಈ ಪದ 'ರಾಜ್ಯ' ಅಥವಾ 'ಭೂಮಿ' ಎಂಬರ್ಥವನ್ನೇ ಕೊಡುತ್ತದೆ.

ಸಂಸ್ಕೃತದ ಪಾಂಡಿತ್ಯದೊಂದಿಗೆ ಅದೇ ಭಾಷೆಯಿಂದ ವಸ್ತುವನ್ನು ಸ್ವೀಕರಿಸಿದ ಪಂಪ ಈ ಮಣ್ಣಿನಲ್ಲಿಯೇ ನಿಂತು ಕಾವ್ಯ ರಚಿಸಿದ್ದಾನೆ. ಇದು ಕವಿಯ ನೆಲದ ಪ್ರಜ್ಞೆಗೆ ಸಾಕ್ಷಿ. ಪರಿಸರ ಪ್ರಜ್ಞೆಯೂ 'ಪ್ರಾದೇಶಿಕ' ಪರಿಭಾಷೆಯಲ್ಲಿ ಅಂತರ್ಗತಗೊಳ್ಳುವಂತದ್ದು. ಪಂಪನ ಪರಿಸರ ಪ್ರಜ್ಞೆಯು ವಿಶೇಷವಾದದ್ದು. ಅವನ ಎರಡೂ ಕೃತಿಗಳಲ್ಲಿ ಇದಕ್ಕೆ ನಿದರ್ಶನಗಳಿವೆ. 'ಕಬ್ಬಿಗರ ಕಾವ'ದ ಆಂಡಯ್ಯ ತಾನು ಎಲ್ಲಿಯವನೆಂದು ಸ್ಪಷ್ಟವಾಗಿ ತಿಳಿಸಿಲ್ಲ. ಆದರೂ ಸುಂದರ ಹಾಗೂ ಸಮೃದ್ಧವಾದ ನಾಡನ್ನು ತನ್ನ ಕಾವ್ಯದಲ್ಲಿ ವರ್ಣಿಸಿದ್ದಾನೆ.

ನಡುಗನ್ನಡ ಸಾಹಿತ್ಯದ ಕಾಲಘಟ್ಟವು ಪ್ರಾಯೋಗಿಕವಾಗಿ ತನ್ನನ್ನು ತೆರೆದುಕೊಂಡ ಕಾಲ. ಈ ಸಂದರ್ಭದಲ್ಲಿ ಅನೇಕ ಹೊಸ ಪ್ರಕಾರಗಳು ಕಾಣಿಸಿಕೊಂಡವು. ರಗಳೆ, ಸಾಂಗತ್ಯ, ಷಟ್ಪದಿ ಮುಂತಾದ ಛಂದಸ್ಸಿನ ಹೊಸ ಮಟ್ಟುಗಳು ಕಾಣಿಸಿಕೊಂಡಿದ್ದು ಇದೇ ಕಾಲಘಟ್ಟದಲ್ಲಿ. ದೇಸಿ ನೆಲೆಯು ಒಟ್ಟು ಕನ್ನಡದ ಸಂದರ್ಭದಲ್ಲಿ ಪ್ರಯೋಗಗೊಂಡ ಘಟ್ಟವೆಂದು ಇದನ್ನು ಗುರುತಿಸಬಹುದು. ಶರಣರ ಕಾಲದಲ್ಲಿ ಅವರ ವಚನಗಳಲ್ಲಿ ಆ ಕಾಲದ ವಿವಿಧ ಜನವರ್ಗಗಳ ಸಂವೇದನೆಗಳು, ಆಶೋತ್ತರಗಳು ಮಾತ್ರವಲ್ಲ, ಆಶಯಗಳು ಇಲ್ಲಿ ದೇಸೀಯತೆಯ ಭಾಗವಾಗಿ 'ವಚನ'ಗಳಾದುವು. ಆವರೆಗಿನ ರೂಢ ಮೂಲ ಪರಂಪರೆಯಿಂದ ಭಿನ್ನವಾಗಿ ಕನ್ನಡ ಜನರ ಭಾಷೆ-ಭಾವನೆಗಳಿಗೆ ಹೊಸದನಿಯನ್ನು ತುಂಬಿದ ನಡಿಗೆ ವಚನಕಾರರದು. ಸಾಮುದಾಯಿಕ ಪಾಲ್ಗೊಳ್ಳುವಿಕೆ ಇಲ್ಲಿ ಮುಖ್ಯವಾಗುತ್ತದೆ. ಕನ್ನಡ ಜನರಲ್ಲಿ ಹೊಸತನವನ್ನು ತುಂಬಿದ ಈ ಚಳುವಳಿಯ ಪರಿಣಾಮವಾಗಿ ಮೂಡಿದ ಮಾತುಗಳು ಹೊಸಪರಿಯ ಅಭಿವ್ಯಕ್ತಿಗಳಾಗಿ ಹೊಸ ಪ್ರಕಾರವೊಂದರ ಜನ್ಮಕ್ಕೆ ಕಾರಣವಾಯಿತು. ಕನ್ನಡದ ಆಡುನುಡಿಯನ್ನು ಅಚ್ಚುಕಟ್ಟಾಗಿ ಉಳಿಸಿ ಕಟ್ಟಿದ ಇವರ ರಚನೆಗಳು ವಿಶಿಷ್ಟವಾಗಿವೆ. ಇವರ ಭಾಷೆಯ ಬಳಕೆ ಅನನ್ಯವಾದುದು. ಸಾಮಾನ್ಯರ ಮಾತುಗಳನ್ನೇ ಬಳಕೆ ಮಾಡಿ ಎಂತಹ ಭಾವನೆಯನ್ನು ಹೇಳುವುದಕ್ಕೂ ಸಮರ್ಥವಾಗುವಂತೆ ಮಾಡುವುದರ ಮೂಲಕ ಜನವಾಣಿಯನ್ನು ದೇವವಾಣಿಯ ಮಟ್ಟಕ್ಕೇರಿಸಿದರು. ಲೋಕವನ್ನು ಹೊಸಕಣ್ಣುಗಳಿಂದ ನೋಡುವುದರ ಮೂಲಕ ಜನರ ಭಾಷೆ ಮತ್ತು ಅಭಿವ್ಯಕ್ತಿ ವಿಧಾನದಲ್ಲೂ ಹೊಸತನವನ್ನು ಮೆರೆದರು. ಪುರಾಣದ ಬದಲಿಗೆ ಕಣ್ಣ ಮುಂದಿರುವ ಪ್ರಾಣರೂಪಿ ಜೀವಿಗಳ ಕುರಿತು ಚಿಂತಿಸಿದರು. ಕಣ್ಣು ತೆರೆದು ಕನ್ನಡದಲ್ಲಿ ಮಾತನಾಡಿದ ಹಿರಿಮೆಯಲ್ಲಿಯೇ ಇವರ ದೇಸೀಯತೆಯ ನಿಲುವನ್ನು ಅರ್ಥೈಸಿಕೊಳ್ಳಬಹುದು.

ಆ ಕಾಲದ ಕನ್ನಡ ಕಾವ್ಯಪರಂಪರೆಗೆ ಬಹುರೂಪಿಯಾದ ಹರಿವು ಒದಗಿ ಬಂದಿತು. ಇವುಗಳಲ್ಲೊಂದು ರಗಳೆಯೆಂಬ ಮಟ್ಟು. ಪಂಪನಿಂದ ತೊಡಗಿ ಅನೇಕರು ಇದನ್ನು ಬಳಸಿದರೂ ಇದರ ನಿಜವಾರಸುದಾರ ಹರಿಹರನೇ. ಈತನ ರಗಳೆಗಳಲ್ಲಿ ಕೈಲಾಸದ ಭಕ್ತಿಯ ಹೂವುಗಳು ಕನ್ನಡನಾಡಿನ ಕಾಯಕದಲ್ಲಿ ತೊಡಗುವ ಮೂಲಕ ಈತನ ನೆಲದ ಪ್ರಜ್ಞೆ ಪ್ರಕಟಗೊಳ್ಳುವುದನ್ನು ಗಮನಿಸಬಹುದು. ಈತನ ರಗಳೆಗಳಲ್ಲಿ ಮೇಲ್ವರ್ಗದ ಮತ್ತು ತಳಸಮುದಾಯದ ಪಾತ್ರಗಳನ್ನು ಮುಖಾಮುಖಿಯಾಗಿಸುವ ಚಹರೆಯಿದೆ. ಈ ಮೂಲಕ ಸಮಾಜದ ಸಾಮಾನ್ಯ ಜನವಲಯವನ್ನು ಈತ ಗೌರವಿಸಿದ್ದನ್ನು ಕಾಣಬಹುದು. ಇದಕ್ಕಾಗಿ ಹರಿಹರ ಸರಳವಾದ ಕನ್ನಡವನ್ನು ಆಯ್ಕೆ ಮಾಡಿಕೊಂಡನು. ಸ್ಥಳೀಯ ಭೂಗೋಳವನ್ನು ತನ್ನ ಕಾವ್ಯಕ್ಷೇತ್ರವನ್ನಾಗಿಸಿಕೊಂಡು ನೆಲದ

ಪ್ರಜ್ಞೆಯನ್ನು ಉಳಿಸಿಕೊಂಡವನು ಹರಿಹರ. ಗಿರಿಜಾ ಕಲ್ಯಾಣದಲ್ಲಿಯೂ ಹಂಪೆಯನ್ನು ಕಥಾ ಭೂಮಿಕೆಯನ್ನಾಗಿ ಮಾಡಿಕೊಂಡಿದ್ದಾನೆ. ತನ್ಮೂಲಕ ನೆಲದ ಪ್ರಜ್ಞೆಯನ್ನು ಮೆರೆದಿದ್ದಾನೆ.

ಒಂದು ಯುಗದ ಛಂದಸ್ಸಾಗಿ ಕಾವ್ಯ ಸಾಮ್ರಾಜ್ಯವನ್ನು ಆಳಿದ ಹಿರಿಮೆ ಷಟ್ಪದಿಯದು. ನಡುಗನ್ನಡ ಕಾಲಘಟ್ಟದ ಈ ಛಂದೋರೂಪ ಹಾಡುಗಬ್ಬದ ಮಾದರಿಯದು. ಹೇಳು–ಕೇಳು ಕಾವ್ಯ ಮಾದರಿ. ಹಾಗಾಗಿಯೇ ಇದು ಸಂಗೀತಾಂಶವನ್ನು ಹೊಂದಿದ್ದು, ದೇಸೀಮಟ್ಟಿನ ಈ ಗುಣವನ್ನು ನಡುಗನ್ನಡ ಕವಿಗಳು ಸೊಗಸಾಗಿ ಬಳಸಿಕೊಂಡರು. ಹಾಗಾಗಿ ಇವರಿಗೆ ದೇಸೀಯವಾದ ಶರಣ ಚಾರಿತ್ರ್ಯವನ್ನು ಕತೆಯಾಗಿಸುವುದಕ್ಕೆ ಕಷ್ಟವಾಗಲಿಲ್ಲ. ಇಂದಿಗೂ ಗಮಕಲೆಯಲ್ಲಿ ಬಳಕೆಯಾಗುವುದು ಈ ಕಾಲದ ಷಟ್ಪದಿ ಕಾವ್ಯಗಳೇ ಆಗಿವೆ.

ರಾಘವಾಂಕನ ಭಾಷಾಪ್ರಯೋಗ ವಿಶಿಷ್ಟವಾದುದು. ನಾಟಕೀಯ ಶೈಲಿಗೆ ಇವನ ಕೃತಿ ಮಾದರಿ. ತನ್ನ ಪರಿಸರದ ಜನರ ಆಡುಮಾತಿನ ಸೊಗಸು ಕಾವ್ಯದಲ್ಲಿದೆ. ಹಂಪೆಯ ಬಗೆಗೆ ವಿಶೇಷ ಅಭಿಮಾನವನ್ನುಳ್ಳ ಈತನಿಗೆ ಅಲ್ಲಿಯ ತುಂಗಭದ್ರೆ, ವಿರೂಪಾಕ್ಷ ಭಕ್ತಿ ಗೌರವದ ನೆಲೆಗಳು. ಇವನ ವಿವರಣೆಗಳಲ್ಲಿ ಹಂಪೆ ಕಾಶಿಗೆ ಸಮಾನ; ತುಂಗೆ ಗಂಗೆಗೆ ಸಮಾನ; ವಿರೂಪಾಕ್ಷ ವಿಶ್ವೇಶ್ವರನಿಗೆ ಸಮಾನ. ಹೀಗೆ ಈ ಕಾಲಘಟ್ಟದ ಕವಿಗಳಲ್ಲಿ ದೇಸೀಯ ನೆಲೆಯನ್ನೂ, ನಂತರದ ಕವಿಗಳಲ್ಲಿಯೂ ಈ ಪ್ರಜ್ಞೆ ಅಂತರ್ಗತಗೊಂಡಿರುವುದನ್ನು ಗಮನಿಸಬಹುದು. ಭಕ್ತಿಯ ತನ್ಮಯತೆಯಿಂದ, ಅಚ್ಚಗನ್ನಡದ ಸೊಗಸಿನಿಂದ ಜನಪ್ರಿಯಗೊಂಡದ್ದು ಕೀರ್ತನ ಸಾಹಿತ್ಯ. ಸಮಾಜದ ಅನಿಷ್ಟ ಪದ್ಧತಿಗಳನ್ನು ಟೀಕಿಸುವ ಇವರ ಕೀರ್ತನೆಗಳಲ್ಲಿ ಸಾಮಾಜಿಕ ಕಳಕಳಿ ವ್ಯಕ್ತಗೊಳ್ಳುತ್ತದೆ. ಮುಂದುವರಿದು ಮುದ್ದಣನನ್ನೂ ತುಳುನಾಡಿನ ಬಗೆಗೆ ವಿಶೇಷ ಅಕ್ಕರೆಯುಳ್ಳ ಕವಿಯೆಂದು ಗುರುತಿಸಿಬಹುದು. ಇಲ್ಲಿನ ಸಂಸ್ಕೃತಿ, ಕಡಲ ಮೊರೆ ಅವನ ಕೃತಿಯಲ್ಲಿ ಮೈದಾಳಿದೆ.

ಪ್ರತಿಭಾವಂತನಾದ ಕವಿ ಕಾವ್ಯದೊಳಗೆ ಎಲ್ಲವನ್ನು ಸರಿದೂಗಿಸಬಲ್ಲ. ಮಣ್ಣಿನ ವಾಸನೆಯೂ ಅಲ್ಲಿ ಹೊರಸೂಸುತ್ತದೆ. ಆಧುನಿಕ ಸಾಹಿತ್ಯವನ್ನು ಅವಲೋಕಿಸಿದಾಗ ನೆಲ, ನಾಡು, ಮಣ್ಣಿನ ವಾಸನೆ, ಸಮಕಾಲೀನ ಪ್ರಜ್ಞೆ ಮುಂತಾದ ಪರಿಭಾಷೆಗಳೊಂದಿಗೆ ಪ್ರಕೃತಿ, ಶ್ರಾವಣ, ಸಮಾಜ ಇವೆಲ್ಲ ಹೊಸ ಆಲೋಚನೆಗಳೊಂದಿಗೆ ಅನಾವರಣಗೊಂಡದ್ದನ್ನು ಕಾಣಬಹುದು. ತಾನು ಸೃಷ್ಟಿಸುವ ಕೃತಿಯ ಮೂಲಕ ಕವಿ ತನ್ನದೇ ಆದ ರೀತಿಯಲ್ಲಿ ಅದಕ್ಕೆ ಸ್ಪಂದಿಸುವುದನ್ನು ಕಾಣಬಹುದು. ಪರಂಪರೆಯನ್ನು ಪ್ರತಿನಿಧಿಸುವ ಪಂಪನಿಂದ ತೊಡಗಿ ಆಧುನಿಕ ಸಂದರ್ಭದಲ್ಲಿಯೂ ನೆಲದ ಪ್ರಜ್ಞೆ ಪ್ರತಿಯೊಬ್ಬ ಬರಹಗಾರನಲ್ಲೂ ರೂಪು ತಳೆದಿದೆ. ಇವರೆಲ್ಲರ ನೆಲದ ಹಂಬಲ ಅದಮ್ಯವಾದುದು.

ಯಾವುದೇ ಸಾಹಿತ್ಯದ ಇತಿಹಾಸದಲ್ಲಿಯೂ ಬರವಣಿಗೆಯ ಸಂಪ್ರದಾಯ ಬದಲಾಗುವುದು ಸಹಜ. ಆದರೆ ನೆಲದ ಬಂಧ ಯಾವ ಕವಿಯನ್ನು ಬಿಟ್ಟಿಲ್ಲ. ಆಧುನಿಕ ಸಾಹಿತ್ಯದಲ್ಲಿ ಪ್ರಕೃತಿ ಕವಿಯೆಂದು ಗುರುತಿಸಲ್ಪಟ್ಟವರು ಕುವೆಂಪು. ಅವರಿಗೆ ಪ್ರಕೃತಿ ತನ್ನನ್ನು ತಾನು ಅರಿತುಕೊಳ್ಳುವ ಸಾಧನವಾಗಿತ್ತು. ಸೂರ್ಯೋದಯ, ಚಂದ್ರೋದಯದಲ್ಲಿ, ಹಕ್ಕಿಯ ಹಾರುವಿಕೆಯಲ್ಲಿ, ದೇವರ ರುಜುವನ್ನು ಕಾಣುವ ಮನಸ್ಸು ಇವರದು. 'ನೆನಹು ಬಾಳಿನ ಬುತ್ತಿ' ಎಂಬ ಕುವೆಂಪು ಮಾತಿನಂತೆ ಬೆಳೆದ ಮೇಲೆಯೂ ತನ್ನ ಹುಟ್ಟೂರಿನ ಮತ್ತು ಬಾಲ್ಯದ ಜೀವನವನ್ನು ಒಂದಲ್ಲ ಒಂದು ಕಾರಣಕ್ಕೆ ಸ್ಮರಿಸುತ್ತಾರೆ.

ನವೋದಯದ ಬರಹಗಾರರು ಸಾಮಾಜಿಕ ಹಾಗೂ ಪರಿಸರದ ಚಿತ್ರಣಕ್ಕೆ ಮಹತ್ವ ನೀಡಿದರು. ಪರಂಪರೆಯನ್ನು ಗೌರವಿಸುತ್ತಾ, ಸಮಕಾಲೀನತೆಯನ್ನು ಗಮನಿಸಿಕೊಂಡದ್ದು ಇವರ ಶ್ರೇಷ್ಠತೆ. ನಾಗರೀಕತೆಯ ಸಂಪರ್ಕದಿಂದ ಗ್ರಾಮೀಣ ಬದುಕು ಸಮತೋಲನ ಕಳೆದುಕೊಳ್ಳುವುದನ್ನು ಗಮನಿಸಿದ ಬರಹಗಾರರು ಗ್ರಾಮೀಣ ಚಿತ್ರಣವನ್ನು ಕೃತಿಗಳಲ್ಲಿ ತರಬೇಕಾಯಿತು. ಯಾವುದೇ ಪ್ರದೇಶದಲ್ಲಿದ್ದರೂ ತಮ್ಮ ಬಾಲ್ಯದ ಪರಿಸರವನ್ನು ಅವರು ಮರೆಯಲಿಲ್ಲ. ಬಾಳಿನಲ್ಲಿ ಸಹಜವಾಗಿ ಬರುವ ದುಃಖ –ದುಮ್ಮಾನಗಳನ್ನು, ಬಿಸಿಲ ಬೇಗೆಯನ್ನು ಮರೆಯಲು ಕುವೆಂಪು ಪ್ರಕೃತಿಯನ್ನು ಆಶ್ರಯಿಸಿದವರು. ಮಗು ತಾಯಿಯನ್ನು ಅರಸಿಕೊಂಡು ಅಲೆಯುವಂತೆ ಪ್ರಕೃತಿಯ ಮಡಿಲಲ್ಲಿ ಕೂಸಾಗುತ್ತಾರೆ. 'ನಗರದೆಡೆ ಬೇಸರದ ಬೊಬ್ಬೆಗಾಂ ಬೇಸತ್ತು, ಬಂದಿಹೆನು ನಿನ್ನೆಡೆಗೆ ಓ ಸಹ್ಯಾದ್ರಿ, ಹಸಿದ ಶಿಶು ತಾಯೆಡೆಗೆ ಹುಡುಕಿ ಹರಿವಂತೆ' ಎನ್ನುತ್ತಾರೆ. ಕವಿಶೈಲ ಇವರ ಅಚ್ಚುಮೆಚ್ಚಿನ ತಾಣ. ಇವರ ಪಾಲಿಗೆ ಸ್ವರ್ಗವೂ ಇದುವೇ. ಮಲೆನಾಡಿನ ತಾಣಗಳನ್ನು ಈ ಕವಿ ಮೈಮರೆತು ವರ್ಣಿಸಿದ್ದಾರೆ. ಬಯಲು ಸೀಮೆಯ ಬದುಕು ಯಾಂತ್ರಿಕವಾಗಿ ಬೇಸರವನ್ನು ನೀರಸವನ್ನು ಉಂಟು ಮಾಡಿದಾಗ ಕವಿಗೆ ನೆನಪಾಗುವುದು ತಾನು ಬೆಳೆದು ಬಂದ ಮಲೆನಾಡು. ಪ್ರಾತಃಕಾಲದ ಸುಂದರ ಬೆಳಗಿನಲ್ಲಿ ನವಿಲು ಕಲ್ಲನ್ನೇರಿ ಸೂರ್ಯೋದಯವನ್ನು ಎದುರುಗೊಳ್ಳುವ ಸಂದರ್ಭ ನೆನಪಿಗೆ ಬಂದು ಮಲೆನಾಡಿಗೆ ಮರಳುವ ಆಸೆ ಬಲವಾಗುತ್ತದೆ. ಹಾಗಾಗಿಯೇ 'ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ. ಮಲೆಯ ನಾಡಿಗೆ ಮಳೆಯಬೀಡಿಗೆ ಎನ್ನುತ್ತಾರೆ. ನವೋದಯ ಕಾವ್ಯದ ಪ್ರಮುಖ ಕಾಳಜಿಗಳಲ್ಲಿ ಒಂದಾದ ನಾಡಿನ, ನೆಲದ ಪ್ರೇಮ ಕುವೆಂಪುರವರ ಗೀತೆಗಳಲ್ಲಿ ಸ್ಪಷ್ಟವಾಗಿ ಮೈವೆತ್ತಿದೆ., ಮಹಾಕಾವ್ಯದ ಸಂದರ್ಭದಲ್ಲಿಯೂ ಈ ಅಭಿಮಾನ ಪರಿಣಾಮಕಾರಿಯಾಗಿ ಅಭಿವ್ಯಕ್ತಿ ಪಡೆದಿದೆ.

ಕವಿ ಬೇಂದ್ರೆಗೆ ಹುಟ್ಟೂರು ಧಾರವಾಡದ ಬಗೆಗೆ ವಿಶೇಷ ಅಭಿಮಾನ. ಅದೇ ಧಾರವಾಡ ಅವರಿಗೆ ಶ್ರೀರಂಗವೂ, ಶ್ರೀಗಂಧವೂ ಆಗಿತ್ತು. ಅಲ್ಲಿ ಕಳೆದ ಜಾತ್ರೆಗಳನ್ನು ಬೇಂದ್ರೆ ಆಗಾಗ ನೆನಪಿಸಿಕೊಳ್ಳುತ್ತಿದ್ದರು. ಧಾರವಾಡದಲ್ಲಿ ಕಳೆದ ಬಾಲ್ಯದ ದಿನಗಳು ಅವರ ಸ್ಮೃತಿಯಲ್ಲಿ ಹಬ್ಬದ ದಿನಗಳಾಗಿ ಉಳಿದಿದ್ದು, ಅಲ್ಲಿ ತಾವು ಅನುಭವಿಸಿದ ಸಂತೋಷವನ್ನು ಕವನಗಳಲ್ಲಿ ಅನಾವರಣಗೊಳಿಸಿದ್ದಾರೆ. ಬೇಂದ್ರೆಯವರಿಗೆ ಭೂಮಿ ತಾಯಿಯ ಬಗೆಗೆ ವಿಶೇಷ ಪ್ರೀತಿ.

ಮಣ್ಣೆಂದು ಜರೆಯುವರು ಏನು ಮಣ್ಣೋ ಕಾಣೆ
ಮಣ್ಣ ಬೆಳೆ, ಮಣ್ಣ ಕಳೆ ಮಣ್ಣಗಂಪು............
ಶ್ರೀನಿವಾಸನು ಕೂಡ ತಿರುಮಲೆಗೆ ನೆಲೆನಿಂತ
ಮಣ್ಣಲ್ಲ ಈ ಭೂಮಿದೇವನೊಲುಮೆ (ಭೂಮಿತಾಯಿ)

ಈ ಭೂಮಿ ಬರಿಯ ಮಣ್ಣಲ್ಲ. ಅದು ದೇವರ ಒಲುಮೆ. ಮನುಕುಲದ ದಿವ್ಯ ವಿಕಾಸಕ್ಕೆ ಕರೆದೊಯ್ಯುವ ತಾಯಿ. ಇಂತಹ ತಾಯಿಯನ್ನು 'ಮಣ್ಣು' ಎನ್ನುವುದು ಕವಿ ಒಪ್ಪತಕ್ಕ ಸಂಗತಿಯಲ್ಲ. ಮನುಷ್ಯನ ಬದುಕು ಮಣ್ಣಿನಿಂದ ಆವೃತವಾದುದು. ಮೈಯ ತೇಜಸ್ಸು ಮಣ್ಣಿನದು. ಕೊನೆಗೆ ಬದುಕು ಮುಗಿದ ಮೇಲೆಯೂ ತನ್ನ ಮಡಿಲಿಗೆ ಸೇರಿಸಿಕೊಳ್ಳುವವಳು ಈ ತಾಯಿಯೇ. 'ಭೂಮಿತಾಯಿ', 'ಪ್ರೇಮಬೀಜ', 'ಬೆಳಗು', 'ಇಳೆಯೆಂದರೆ ಬರಿ ಮಣ್ಣಲ್ಲ' ಮೊದಲಾದವು ಭೂಮಿ ತಾಯಿಯ ಕುರಿತಾದ ಬೇಂದ್ರೆಯವರ ಕವನಗಳು.

ಇಳೆಯೆಂದರೆ ಬರಿ ಮಣ್ಣಲ್ಲ
ನಮಗೋ ನೋಡುವ ಕಣ್ಣಿಲ್ಲ

ಇಳೆಯನ್ನು ಒಳಗಣ್ಣಿನಿಂದ ನೋಡಿದಾಗ್ ಪಾವಿತ್ರ್ಯದ ಅರಿವಾಗುವುದು ಎನ್ನುವುದರೊಂದಿಗೆ ಅದನ್ನು ಮಣ್ಣೆಂದು ಜರೆಯುವವರಿಗೆ ವಿರೋಧದ ಮಾತುಗಳನ್ನು ಆಡಿದ್ದಾರೆ. ಆಧುನಿಕ ಮಾನವರು ಭೂಮಿಯನ್ನು ಸರಕಿನ ಸೊತ್ತಾಗಿ ಪರಿಭಾವಿಸಿದ್ದಾರೆ. ಭೂಮಿ ನಿಂತ 'ನೆಲ' ಅಲ್ಲ, ಅದು ಹೆಣ್ಣು. ಉಕ್ಕುವ ದುಃಖವನ್ನು ತನ್ನೊಳಗೆ ತುಂಬಿಕೊಂಡವಳು. ಅವಳು ಒಡವೆಯಲ್ಲ, ಉಸಿರಿರುವ ಒಡಲು ಎಂಬ ತಿಳುವಳಿಕೆಯನ್ನು ನೀಡುವ ನೆಲ ಬೇಂದ್ರೆಯವರ 'ಚಿಗರಿಕಂಗಳ ಚೆಲುವಿ' ಕವನದಲ್ಲಿದೆ. ಮನುಷ್ಯನ ಹಿಂಸಕ ಪ್ರವೃತ್ತಿಯನ್ನು ಖಂಡಿಸುವ ಧೋರಣೆ ಈ ಕವನದಲ್ಲಿ ಅಭಿವ್ಯಕ್ತಗೊಂಡಿದೆ. ಬೇಂದ್ರೆಯವರಿಗೆ ತಮ್ಮ ಹುಟ್ಟೂರು ಮಾತು ಮಾತಿಗೂ ಹೊಸತನ ಕೊಟ್ಟ ಊರು. ಜೀವನ ನಿರ್ವಹಣೆಗಾಗಿ ಊರು ತೊರೆದಾಗ ಹುಟ್ಟೂರಿನಿಂದ ದೂರವಾಗುತ್ತಿರುವ ನೋವು ಅವರನ್ನು ಅತಿಯಾಗಿ ಕಾಡಿದೆ.

ನಾವು ಬರತೇವಿನ್ನು ನೆನಪಿರಲಿ ತಾಯಿ

ನಂ ನಮಸ್ಕಾರ ನಿನಗೆ

ಕಾಯ್ದಿರಿ ಕೂಸಿನ್ಹಾಂಗ ನಮಗ

ನಾವು ಬರತೇವಿನ್ನ

ನೀವು ತಾಯಿತನ ನಡಸಿದಿರಿ

ಹಾಲಕುಡಿಸಿದಿರಿ

ಮರಳು ಆಡಿಸಿರಿ ಕನಸಿನ್ಯಾಗ

ಬೆಳಗು ಆತು ಬಾಳಿನ್ಯಾಗ (ನಾವು ಬರತೇವಿನ್ನು)

ಹುಟ್ಟೂರಿನಿಂದಾಗಿ ತಮ್ಮ ಬಾಳು ಬೆಳಗಿದೆಯೆಂಬ ಕೃತಜ್ಞತಾ ಭಾವ ಕವಿಗಿದೆ. ಮರಳಿ ಸಾಧನ ಕೇರಿಗೆ ಬಂದಾಗ ತವರನ್ನು ವರ್ಣಿಸಿರುವ ರೀತಿ ಅನನ್ಯವಾದುದು.

ನೆಲದೊಡನೆ ಮಾನವರ ಒಡನಾಟ ನಾಗರಿಕತೆಯಷ್ಟು ಹಳೆಯದು. ನಮ್ಮ ಸಂಸ್ಕೃತಿ ಮಣ್ಣಿನ ಮಹತ್ವವನ್ನು ಸಮರ್ಥವಾಗಿ ಗುರುತಿಸುತ್ತದೆ. 'ಮಣ್ಣಿಲ್ಲದ ಮಾನವನಿಲ್ಲ. ಮಣ್ಣಿಂದಲೇ ಸರ್ವ ಸಂಪತ್ತು' ಎಂಬ ಮಾತು ಜನಪ್ರಿಯವಾದುದು. ಇದನ್ನು ಕಾವ್ಯ ಸೃಷ್ಟಿಯ ಮೂಲಕ ಅನೇಕರು ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕಣವಿಯರ 'ಮಣ್ಣಿನ ಮೆರವಣಿಗೆ' ಕವನ ಅಧ್ಯಯನ ಯೋಗ್ಯವಾದುದು.

ಕಣವಿಯವರು ಧರೆಯ ವೈಚಿತ್ರ್ಯವನ್ನು 'ಮಣ್ಣಿನಮೆರವಣಿಗೆ'ಯಾಗಿ ಕಂಡಿದ್ದಾರೆ. ವೈಜ್ಞಾನಿಕವಾಗಿ ಈ ಭೂಮಿ ಸೂರ್ಯನಿಂದ ಸಿಡಿದ ಅಗ್ನಿಗೋಲ. ಇದು ತಣ್ಣಗಾಗಿ ಜೀವಜಾಲದ ಸೃಷ್ಟಿಗೂ, ವಾಸಕ್ಕೂ ಯೋಗ್ಯವಾಯಿತು ಎಂಬ ಕಲ್ಪನೆ. ಆದರೆ ಕವಿ ಇದನ್ನು ಒಪ್ಪುವುದಿಲ್ಲ. ಕವನದ ಆರಂಭ ದಟ್ಟವಾದ ವೈಜ್ಞಾನಿಕ ವಿವರಗಳಿಂದ. ಕವಿಯ ಪ್ರಕಾರ ಅದು ಇನ್ನೂ ತಣ್ಣಗಿಲ್ಲ. ಕಡಲೊಳಗಿನ ಅಗ್ನಿಯಂತೆ, ಭೂಮಿಯಲ್ಲೂ ಕಷ್ಟಪರಂಪರೆಯಿದೆ. ನಯವಾಗಿ, ಶಾಂತವಾಗಿ ಕಾಣಿಸುವ ಬಾನಿನ ಮರೆಯಲ್ಲೂ ಅಶಾಂತಿಯ ಹೊಗೆಯಿದೆ. ಮನುಕುಲದ ಅಳಿವಿನ ಬಗೆಗೆ ಕವಿಗೆ ಇನ್ನೂ ಸಂದೇಹವಿದೆ. ಈ ಬೇಗೆ ತುಂಬಿದ ಒಡಲಿನಿಂದ ಲಕ್ಷಾಂತರ ಆಸೆಗಳು, ಸಸ್ಯರಾಶಿಗಳಾಗಿ ಕಣ್ಣು ಬಿಟ್ಟಿದ್ದು ಕವಿಯ ಅಚ್ಚರಿಗೆ ಕಾರಣವಾದ ಸಂಗತಿ.

ಕವನದ ಎರಡನೆಯ ಭಾಗ ಮನುಷ್ಯನ ಹುಟ್ಟಿನ ಕಲ್ಪನೆಯನ್ನು ಅನಾವರಣಗೊಳಿಸುತ್ತದೆ. ಭೂಮಿಯ ಮೇಲೆ ಶಿಶುವಿನ ಜನನ ಎನ್ನುವುದು ಮಹತ್ವದ ಗಳಿಗೆಯಾಗುತ್ತದೆ. ಭೂಮಿಯ ಕಲ್ಪನೆಗೆ ಅರ್ಥ ಒದಗಿಸುವುದು ಅಲ್ಲಿ ಮಾನವನ ಅಸ್ತಿತ್ವವಿದ್ದಾಗ ಮಾತ್ರ. 'ಮಣ್ಣ ಮನೆಯೊಳು

ಮಗುವು ಕಣ್ಣು ತೆರೆದಿತ್ತು' ಎಂಬಲ್ಲಿ ಮಣ್ಣು ಮನೆಯಾಗಿದೆ. ಸಮರ್ಥ ಭಾವನಾ ವಾತಾವರಣವೊಂದು ಹಲವು ಪ್ರತಿಮೆಗಳ ಮೂಲಕ (ಹೂತುರಾಯಿ, ಹಾಡಿನುಯ್ಯಾಲೆ) ಇಲ್ಲಿ ನಿರ್ಮಾಣಗೊಂಡಿದೆ. ಪರಿಸರದ ಅರಿವನ್ನು ಮೈಗೂಡಿಸಿಕೊಂಡಿದ್ದು ಭೂಮಿಯ ಅಸ್ತಿತ್ವವನ್ನು ಅದರ ಆಕೃತಿಯನ್ನು ತಿಳಿಯಲು ಪ್ರಯತ್ನಿಸಿದ್ದು ಮನುಷ್ಯನ ನಾಗರಿಕತೆಯ ಮಹತ್ವದ ಹೆಜ್ಜೆಗಳು.

ಮುಂದಿನದು ಮಗುವಿನ ಬೆಳವಣಿಗೆಯ ದಾರಿ. 'ಮಣ್ಣಿನೆದೆಯೊಳು ಸ್ನೇಹವಂಕುರಿಸಿ ಬೆಳೆದು, ಬೆಳದಿಂಗಳಿನ ಹೊನಲೆ ಎಲ್ಲೆಲ್ಲೂ ಹರಿದು, ಕಣ್ಣೆದುರು ಸಾಗಿತ್ತು ಮಣ್ಣ ಮೆರವಣಿಗೆ, ಇಲ್ಲಿಂದ ಆ ಬಾನ ಗುಡಿಯವರೆಗೆ'. ಕವಿ ಭೂಮಿಯನ್ನು ಕುರಿತು ಹೀಗೆಲ್ಲ ಯೋಚಿಸುವುದಕ್ಕೆ ಕಾರಣವಾದದ್ದು, ಚಳಿಗಾಲದಲ್ಲಿ ಎಲೆಯುದುರಿಸಿದ ಬೋಳು ಮರವೊಂದು ಸಿಂಗಾರಗೊಂಡ ರಥದ ಹಾಗೆ ಹೂ ತುಂಬಿ ಕಂಗೊಳಿಸುವ ದೃಶ್ಯ. ಶಿಶಿರದ ಮೇಲೆ ವಸಂತ ಸಾಧಿಸಿದ ಈ ವಿಜಯದ ಸಂಕೇತವು ಕವಿಗೆ ಬುವಿಯ ಬದುಕಿನ ಬಗೆಗೆ ಆಶಾವಾದಿಯಾಗಿರುವಂತೆ ಮಾಡುತ್ತದೆ. ಈ ಭೂಮಿಯನ್ನು ಕವಿಯುವ ನಾನಾ ರೀತಿಯ ಸಮಸ್ಯೆಗಳು, ಲೆಕ್ಕವಿರದ ಬೇಗುದಿ ಸಂಕಟಗಳು ಇದ್ದೇ ಇವೆ. ಭ್ರಮಣಗೈಯುವ ಅದರ ವಿಧಿ ಇನ್ನು ಮುಗಿದಿಲ್ಲ. ಆದರೂ ಕತ್ತಲೆಯು ಬೆಳಕಿನ ನೆನಪನ್ನೂ, ಭರವಸೆಯನ್ನೂ ತರುವಂತೆಯೇ ಅವುಗಳನ್ನು ದಾಟಿದ ಸ್ಥಿತಿಯ ಕನಸನ್ನು ಕಾಣುವಂತೆ ಮಾಡುತ್ತವೆ. 'ಮಣ್ಣಿನ ಮೆರವಣಿಗೆ' ಎಂಬ ಪ್ರಯೋಗವು 'ಮುಗಿಯದ ದೃಶ್ಯಾವಳಿಯನ್ನು ಸೂಚಿಸುತ್ತದೆ' ಎಂಬ ಮಹೇಶ್ವರಿಯವರ ಮಾತು ಅರ್ಥಪೂರ್ಣವೆನಿಸುತ್ತದೆ. (೨೦೧೩ ಪು.೬೫) ಯಾವ ಯಾತನೆಯ ಸಂದರ್ಭದಲ್ಲಿಯೂ ನಿರಾಶೆಗೊಳಗಾಗದೆ ನೆಲ–ಆಕಾಶಗಳ ನಂಟನ್ನು ಕಳೆದುಕೊಳ್ಳದ ಮನಸ್ಸು ಇಲ್ಲಿ ಅನಾವರಣಗೊಳ್ಳುತ್ತದೆ.

ಭಾವಗೀತೆ ಮತ್ತು ಕಥನ ಕವನಗಳಿಗೆ ಹೆಸರಾದ ಸು.ರಂ. ಎಕ್ಕುಂಡಿಯವರು ಕಥನಕವನಗಳ ಮೂಲಕ ವಿಶಿಷ್ಟ ಛಾಪು ಮೂಡಿಸಿದವರು. ಇವರ ಕವನ 'ಮಿಥಿಲೆ'.

ಎಂದಾದರೊಂದು ದಿನ ನಾನು ಮಿಥಿಲೆಗೆ ಹೋಗಿ
ಬೀದಿಬೀದಿಯನಲೆದು ನೋಡಬೇಕು
ಅಲ್ಲಿ ಎಲ್ಲಾದರೂ ಮರದ ನೆರಳಿಗೆ ಕುಳಿತು
ರಾಮಭದ್ರನ ಮಹಿಮೆ ಹಾಡಬೇಕು (ಮಿಥಿಲೆ)

ಎಂಬ ಅಪೇಕ್ಷೆ ಕವನದ ಆರಂಭ. ಮಿಥಿಲೆಯಲ್ಲಿ ಇಲ್ಲದುದು ಇನ್ನೆಲ್ಲೂ ಇಲ್ಲ. ಎತ್ತರದ ಮನೆಗಳು, ಮಂದಿರಗಳು, ತುಳಸಿ, ಹೂವು, ಸಂಪಿಗೆಯ ಮರಗಳು, ಗಿಳಿಗಳು ಇವೆಲ್ಲ ಯಥೇಷ್ಟವಾಗಿದ್ದರೂ ಇಲ್ಲಿ ಪಂಜರದ ನೋವು ಇಲ್ಲ. ತಾವರೆ ಅರಳಿರುವ ಪುಷ್ಕರಣಿ,

ವಿಶ್ವಾಮಿತ್ರ ಕುಳಿತ ಕಲ್ಲು, ರಾಮ ನಿಂತ ಮರದ ನೆರಳು ಎಲ್ಲವೂ ಇದೆ. ಅಲ್ಲಿಯ ಮಣ್ಣನ್ನು ಹಾಗೇ ಎತ್ತಿಕೊಂಡರೂ ರಾಮನ ಕರುಣೆ ಸ್ಪಂದಿಸುವುದು. 'ಕರುಣಾಳು ರಾಘವ' ಎನ್ನುವಂತದ್ದು ಸಾರ್ಥಕ್ಯ ಪಡೆಯುವುದು ಇಲ್ಲಿಯೇ ಎನಿಸುತ್ತದೆ. ಮುಂದುವರಿಯುತ್ತಾ, ರಾಮನಿಗೆ ಮಾಲೆ ಹಾಕಿದ ಸೀತೆಯನ್ನು ನೆನಪಿಸುತ್ತಾ ಸಾಗುವ ಕವನ ಸೀತೆಯ ಬೀಳ್ಕೊಡುಗೆಯನ್ನು ಗುರುತಿಸುತ್ತದೆ. ತಂದೆ ಮಗಳಿಗೆ ಕೊಟ್ಟ ಉಡುಗೊರೆ ಜಗತ್ತಿನಲ್ಲಿ ಯಾರೂ ಕೊಡದೇ ಇರುವಂತದ್ದು 'ಮಗಳೆ ಮಂಗಲವಿರಲಿ ಎಂದು ಉಡುಗೊರೆಯಿತ್ತ ಬಂಗಾರ ಕರಡಿಗೆ ತುಂಬ ಹೊಲದ ಮಣ್ಣು' ಇದು ಅರ್ಥಪೂರ್ಣವಾದ ಉಡುಗೊರೆ. ಕವಿಯ ಮನಸ್ಸು ಆರ್ದ್ರಗೊಂಡು,

ಎಂದಾದರೊಂದು ದಿನ ನಾನು ಮಿಥಿಲೆಗೆ ಹೋಗಿ
ಬೀದಿಬೀದಿಯ ನಲೆದು ನೋಡಿ ಬರುವೆ
ರಾಮಭದ್ರನ ಕಥೆಯ ಹಾಡಿ ಕರಡಿಗೆಯಲ್ಲಿ
ಜನಕರಾಜನ ಹೊಲದ ಮಣ್ಣು ತರುವೆ (ಮಿಥಿಲೆ)

ಎಂಬ ಕವಿಯ ಅಪೇಕ್ಷೆ ಇಲ್ಲಿ ಮೈತಾಳಿದೆ. ಸೀತೆ ಮಣ್ಣಿನ ಮಗಳು. ಆಕೆಗೆ ತನ್ನ ತವರಿನ ಉಡುಗೊರೆ ಮಣ್ಣು. ಅದೂ ಕರಡಿಗೆಯಲ್ಲಿ. ಹಾಗಾಗಿ ಜನಕರಾಜನ ನಾಡಿನ ಮಣ್ಣು ಇಲ್ಲಿ ವಿಶೇಷ ಅರ್ಥವನ್ನು ಪಡೆಯುತ್ತದೆ. ಕಿಲೋಗಟ್ಟಲೆ ಬಂಗಾರ ನೀಡಿಯೂ ಮಗಳು ಸಂಕಟ ಪಡುವುದನ್ನು ನೋಡಿ ಅವಳ ಸಂತೋಷಕ್ಕೆ ಕೈಲಾದದ್ದನ್ನೆಲ್ಲಾ ಮಾಡಿಯೂ ಕಷ್ಟಪಡುವ ನಮ್ಮ ಸಮಾಜದ ತಂದೆಯೆಲ್ಲಿ! ಮಣ್ಣನ್ನೇ ಉಡುಗೊರೆಯಾಗಿ ಕೊಟ್ಟ ಜನಕ ಮಹಾರಾಜನೆಲ್ಲಿ! ಸಂತಸದಿಂದ ಸ್ವೀಕರಿಸಿದ ಸೀತೆ ನಿಜ ಅರ್ಥದಲ್ಲಿ ಮಣ್ಣಿನ ಮಗಳಾಗುತ್ತಾಳೆ.

ಜೀವನ ನಿರ್ವಹಣೆಗಾಗಿ, ಸಂಪತ್ತಿನ ಆಸೆಯಿಂದ, ಶ್ರೀಮಂತಿಕೆಯ ಸೆಳೆತದಿಂದ ಮನುಷ್ಯ ಎಲ್ಲೆಲ್ಲೋ ಅಲೆದಾಡುತ್ತಾನೆ. ಬದುಕಿನ ಕೊನೆಯ ಕಾಲಘಟ್ಟ ಅವನನ್ನು ಮತ್ತೆ ತನ್ನ ಮಣ್ಣಿಗೇ ಸೆಳೆಯುತ್ತದೆ ಎಂಬ ವಾಸ್ತವ ಸಂಗತಿ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ 'ಮಗನಿಗೊಂದು ಪತ್ರ' ಎಂಬ ಕವನದಲ್ಲಿ ಅಭಿವ್ಯಕ್ತಗೊಂಡಿದೆ. ತಂದೆಯು ಮಗನಲ್ಲಿ ಸಾಂಸ್ಕೃತಿಕ ಮೂಲದ ಪರಿಜ್ಞಾನವನ್ನು ಜಾಗೃತಗೊಳಿಸುವ ನೆಲೆಯನ್ನು ಇಲ್ಲಿ ಕಾಣಬಹುದು.

ಬಾಮಗು ಅಲ್ಲೆ ನಿಲ್ಲದೆ ಮತ್ತೆ ಹಿಂದಕ್ಕೆ
ನಿನ್ನದೇ ನೆಲಕ್ಕೆ, ಜಲಕ್ಕೆ
ನಿನ್ನ ಒಳಹೊರಗನ್ನು ಸೃಷ್ಟಿಸಿ ಕೊಟ್ಟ ಸತ್ವಕ್ಕೆ
ನಿನ್ನ ಬೆನ್ನಿಗೆ ನಿಂತ ಪುರಾಣ ಇತಿಹಾಸಗಳ

ಬಿಸಿಯುಸಿರು ಬಡಿಯವೀ ವರ್ತಮಾನಕ್ಕೆ

ಭೂರ್ಜ ಪತ್ರಕ್ಕೆ ಮಾತು ಬರುವ ಮುಂಚೆಯೇ

ಬೋಧಿ ತಿಳಿವ ಹರಸಿದ್ದ ಈ ಜ್ಞಾನಧಾಮಕೆ (ಮಗನಿಗೊಂದು ಪತ್ರ)

ತಂದೆಗೆ ಮಗನ ಭವಿಷ್ಯದ ಅರಿವಿದೆ. ಅವನು ಹೋದಲ್ಲೆಲ್ಲ ಅವನ ಜ್ಞಾನಕ್ಕಾಗಿ ಮಣೆಯಿಡುವ ಜನರ ಸ್ವಾರ್ಥ ತಂದೆಯ ಮನಸ್ಸಿಗೆ ಅರ್ಥವಾಗಿದೆ. ಮಗ ತನ್ನ ಮನದಿಚ್ಛೆಯಂತೆ ವಿದೇಶಕ್ಕೆ ಹೋದರೂ ಅವನು ಹುಟ್ಟಿದ, ಬೆಳೆದ, ಜ್ಞಾನ ಸಂಪಾದಿಸಿದ ಮಣ್ಣಿಗೆ ಮತ್ತೆ ಮರಳಬೇಕೆಂಬ ಮಹದಾಸೆ ಇಲ್ಲಿ ಪ್ರಕಟಗೊಂಡಿದೆ. ಕವಿಗೆ ಮಣ್ಣಿನ ಕಾಳಜಿ, ನೆಲದ ಪ್ರೀತಿಯ ಅಗಾಧತೆಗೆ ಈ ಸಾಲುಗಳು ಸಾಕ್ಷಿ. ತನ್ನ ನೆಲ ಕವಿಗೆ ಜ್ಞಾನಧಾಮ. ಈ ನೆಲದ ಸಂಸ್ಕೃತಿಯನ್ನು ಮರೆತು ಅನ್ಯ ಸಂಸ್ಕೃತಿಗೆ ಮರುಳಾಗಿ ಜೀವನ ನಿರ್ವಹಣೆ ಮಾಡುವುದರಲ್ಲಿ ಸಾರ್ಥಕತೆಯಿಲ್ಲ. ಅದು ಧನ್ಯತೆಯ ಬದುಕೂ ಅಲ್ಲ ಎಂಬ ಭಾವನೆಯನ್ನು ಈ ಕವನ ಗುರುತಿಸಿಕೊಡುತ್ತದೆ. ನಗರ ಜೀವನದ ಭರಾಟೆಯಲ್ಲಿ ಪಾಶ್ಚಾತ್ಯ ಪ್ರೇಮದಲ್ಲಿ ಸೋತು ಸುಣ್ಣವಾದಾಗ, ಮಾಲಿನ್ಯಗೊಂಡ ಪರಿಸರದ ಮಧ್ಯೆ ಬದುಕು ಹೈರಾಣಾದಾಗ ಮನುಷ್ಯನ ಗಮ್ಯ ತಾಯ್ನಾಡಿನತ್ತ. ಬಾಲ್ಯದ ಹಸಿರು ನೆಲ ಮನುಷ್ಯನನ್ನು ಸೆಳೆದಷ್ಟು ಇನ್ನಾವುದೂ ಸೆಳೆಯದು.

ಪ್ರಾದೇಶಿಕತೆಯ ಗುಣಲಕ್ಷಣದಲ್ಲಿ ಪ್ರಕೃತಿಯೂ ಸೇರಿದೆ. ಕವಿಗಳ ನಿಸರ್ಗ ಪ್ರೀತಿಯನ್ನು ಈಗಾಗಲೇ ಚರ್ಚಿಸಲಾಗಿದೆ. ಆಧುನಿಕ ಸಂದರ್ಭದಲ್ಲಿಯೂ ಈ ಪುಷ್ಪ ಪ್ರೀತಿ ಬೇರೆ ಬೇರೆ ಕವಿಗಳಲ್ಲಿ ಪ್ರಕಟಗೊಡಿದೆ. ಗಿಡದಲ್ಲಿ ಅರಳಿರುವ ಹೂಗಳನ್ನು ಯಾವುದೇ ಅನುಕಂಪವಿಲ್ಲದೆ ಕೀಳುವವರು ಮನುಷ್ಯರು. ಅರಳಿರುವ ಹೂಗಳನ್ನು ಗಿಡದಲ್ಲೇ ಬಿಟ್ಟ ಕರುಣಾಳುಗಳಿಗೆ ಕೈ ಮುಗಿದು ತಲೆದೂಗಿದವರು ಕೆ.ಎಸ್. ನರಸಿಂಹ ಸ್ವಾಮಿಯವರು. ಹೂವನ್ನು ಅರ್ಪಿಸುವುದೇ ಭಕ್ತಿ ಎಂದುಕೊಂಡವರಿಗೆ ಇದು ಹೊಸ ದೃಷ್ಟಿಯನ್ನು ನೀಡಬಹುದೆನ್ನಿಸುತ್ತದೆ.

'ನೆಲದ ಸಿರಿ ಸವಿಯದವನ ಬಾಳು ಬಾಳೆ ಅಲ್ಲ; ಗೋಳು. ಇದು ನಿಸರ್ಗವನ್ನು ಕುರಿತು ನಿಸ್ಸಾರರ ಧೋರಣೆ. ಪ್ರಕೃತಿಯ ಎಲ್ಲಾ ಆಗುಹೋಗುಗಳನ್ನು ಕುತೂಹಲದ ಕಣ್ಣಿನಿಂದ ನೋಡಿ ಆಸ್ವಾದಿಸುವ ವಿಶಾಲ ಮನಸ್ಸು ನಿಸ್ಸಾರರದ್ದು. ಚಂದ್ರ ಈ ಕವಿಯ ಕಣ್ಣಿಗೆ 'ಉಟ್ಟ ನೀಲಿ ನಿಲುವಂಗಿಯ ಬೆಳ್ಳಿ ಗುಂಡಿ ಚಂದಿರನಾಗಿ ಕಂಡಿದ್ದಾನೆ. ಭೂಮಿತಾಯಿಯ ಸಿರಿಗೆ ಚೆಲ್ವಿಕೆಗೆ ಕೊರೆಯುಂಟೆ! ಕಲ್ಲು-ಜಲ ಮಣ್ಣಲ್ಲಿ ಹಸುರಿನಲ್ಲಿ – ಹೊದಿಕೆ ಬಣ್ಣಗಳೇನು? ಒಳತಿರುಳ ರುಚಿಯೇನು? ಎಷ್ಟು ಬಗೆ ಗ್ರಂಥವಿದೆ ಬೀರುವಲ್ಲಿ' ಎಂಬ ವಿಸ್ಮಯ ಕವಿಯದ್ದು. ಜೋಗದ

ಜಲಪಾತ ಬರೀ ನೀರ ನುಗ್ಗಾಟವಷ್ಟೇ ಅಲ್ಲ, ತನ್ನ ನಾಡಿನ ಬದುಕಿನ ಪ್ರೀತಿಯ ಪ್ರತಿಮೆಯೂ, ಕವಿಯ ಜೀವದ ಭಾಗವೂ ಆಗಿದೆ.

ಭೂಮಿ – ಮನುಷ್ಯ ಸಂಬಂಧವನ್ನು ಹೊಸ ಆಯಾಮದೊಂದಿಗೆ ಗುರುತಿಸಿದವರು ಕೆ.ಎಸ್. ನರಸಿಂಹಸ್ವಾಮಿ. ಇವರ 'ಭೂಮಿಗೀತೆ', 'ಕುಂಕುಮ ಭೂಮಿ' ಮೊದಲಾದ ಕವನಗಳು ಈ ಹಿನ್ನೆಲೆಯಿಂದ ವಿಶಿಷ್ಟವೆನಿಸುತ್ತವೆ. ಭೂಮಿ ತಾಯಿಯದು ಶಕ್ತಿ ಶಾಲಿಯಾದ ವ್ಯಕ್ತಿತ್ವ

ಅಗೆದಾಗ ನಕ್ಕದ್ದು ನುಣುಪು ಕುಂಕುಮಭೂಮಿ
ಗುದ್ದಲಿಯ ಕೆಲಸ ಅಲ್ಲಿಗೆ ನಿಂತಿದೆ
ಪಂಚಾಂಗದಂತೆ ಮಳೆಯು ಬಿತ್ತು ಹತ್ತು ಹನಿ
ಬೆವರಿಳಿದ ಬೊಗಸೆ ಹಾಗೂ ತುಂಬಿದೆ (ಕುಂಕುಮ ಭೂಮಿ)

ಅಡಿಗರದು ಭೂಮಿಯ ಆಳದಿಂದ ಚಿನ್ನದದಿರು ತೆಗೆಯುವ ತ್ರಾಸದಾಯಕ ಕೆಲಸ. ಕೆ.ಎಸ್.ನ. ಅವರದು ನುಣುಪಾದ ಕುಂಕುಮಭೂಮಿಯಲ್ಲಿ ಸಾಮಾನ್ಯನಂತೆ 'ಪಯಿರು ಎಬ್ಬಿಸುವ ಕಾಯಕ'. ಇಬ್ಬರದು ಸಂಸ್ಕೃತಿ ಪರಂಪರೆಗಳ ಉತ್ಖನನ. ಇದು ಜನಸಾಮಾನ್ಯರ ಹುಟ್ಟು ಶ್ರಮವನ್ನು ಬೆಳಕಿಗೊಡ್ಡುವ ಜನಪ್ರೀತಿ. ಮನುಷ್ಯನ ಸಮಷ್ಠಿ ವಿಕಾಸಕ್ಕೆ ನೆಲೆ ಭೂಮಿ. ದುಡಿವ ಮನುಷ್ಯನ ಬೆವರಿಗೆ ಸಾರ್ಥಕತೆಯಿದೆ. ಶ್ರಮದ ಫಲವನ್ನು ಉಣ್ಣುವವರು ಯಾರು? ಎಂಬುದರ ಬಗೆಗೂ ಕವನ ಚಿಂತಿಸುತ್ತದೆ. ಇಲ್ಲಿ ಭೂಮಿ ಕೊಡುವ ಎಲ್ಲವನ್ನೂ ಪಡೆಯುವ ನೆಲೆಯಿದ್ದದ್ದು ರಾಜತ್ವ ಮತ್ತು ಧರ್ಮಕ್ಕೆ. ಇವೆರಡೂ ಅತ್ಯಂತ ಪ್ರಭಾವಶಾಲಿಯಾದ ಸಂಗತಿಗಳು. ಆದರೆ ಕುಂಕುಮಭೂಮಿಯ ಸೃಷ್ಟಿಯನ್ನು ಸಾರ್ಥಕವಾಗಿಸುವ ಸಾಮರ್ಥ್ಯ ಇವುಗಳಿಗಿಲ್ಲ. ಭೂಮಿಯ ಫಲ ಪಡೆಯಬಲ್ಲ ಶಕ್ತಿಯಿರುವವನು ದುಡಿಯುವ ಮನುಷ್ಯ ಮಾತ್ರ. ಜಗತ್ತಿನ ಪ್ರಗತಿ ಇವರ ಪರಿಶ್ರಮದ ಫಲ.

ಭೂಮಿಯಲ್ಲಿ ವಂಧ್ಯರಾದವರು ಅನೇಕರಿದ್ದಾರೆ. ಭೂಮಿತಾಯಿಗೆ ಮತ್ತೆ ಹುಟ್ಟಲಿರುವ ಮಗು ಇಡೀ ಜಗತ್ತನ್ನು ಸೃಜಶೀಲವಾಗಿಸಿದ ಜನರಂತಾಗಲಿ ಎಂಬ ಹಾರೈಕೆ ಕವನದಲ್ಲಿದೆ. ಒಟ್ಟಿನಲ್ಲಿ ಬದುಕು ಸದಾ ಕ್ರಿಯಾಶೀಲವಾಗಿರಬೇಕೆಂಬ ಆಶಯ ಇಲ್ಲಿದೆ. 'ಪ್ರಕೃತಿ ಮನುಷ್ಯನ ಸ್ವಾರ್ಥಕ್ಕೆ ಬಲಿಯಾಗದೆ ಹಸಿರಾಗಿ ನಳನಳಿಸಲಿ, ನೆಲದಾಳದಲ್ಲಿ ಬೇರಿಳಿದ ಮರಗಳು ಬದುಕಿ ಎಲ್ಲ ಕಾಲಗಳಲ್ಲಿ ಹೂವ ತೊಡಲಿ' ಎಂಬ ಮಾತುಗಳ ಮೂಲಕ ಮನುಷ್ಯರಿಗಿರಬೇಕಾದ ಮಾನವಂತಿಕೆಯನ್ನು ನೆನಪಿಸಿದ್ದಾರೆ.

'ಭೂಮಿಗೀತೆ' ಕೆ.ಎಸ್.ನ. ಅವರ ಕವನ. ಮನುಷ್ಯನನ್ನು ಹೊತ್ತವಳು ಭೂಮಿ. ಭೂಮಿಯನ್ನು ಹೊತ್ತಿದ್ದು ಆದಿಶೇಷ. ಬದುಕಿರುವಾಗ ಭೂಮಿಯ ಮೇಲಿದ್ದ ಮನುಷ್ಯ ಸತ್ತ ಮೇಲೆ ಮಣ್ಣಿನಲ್ಲೇ ಲೀನವಾಗುತ್ತಾನೆ. ಮಣ್ಣು ನಾಶವಾಗುವುದಿಲ್ಲ. ಮನುಷ್ಯ ನಾಶವನ್ನು ಕಾಣುತ್ತಾನೆ. ಮನುಷ್ಯರ ದುರಾಸೆಗೆ ಮಣ್ಣು ನೆರವು ನೀಡುವುದಿಲ್ಲ. ಮನುಷ್ಯನ ಸ್ವಾರ್ಥ ಎಷ್ಟೆಂದರೆ, ಅಲೆಗೊಂದರಂತೆ ಹಡಗು ನಿಂತರೂ ದಾಹ ತೀರುವುದಿಲ್ಲ. ಮಳೆಬಿಲ್ಲಿನ ಮೇಲೆ ಮಹಲು ಕಟ್ಟಿದರೂ ಆಶ್ಚರ್ಯವಿಲ್ಲ. ಸ್ವಾರ್ಥ ಮಿತಿ ಮೀರಿದರೆ ಭೂಮಿತಾಯಿ ಜ್ವಾಲಾಮುಖಿಯಾಗುತ್ತಾಳೆ. ಹಾಗಾಗಿ ರಕ್ಷಕಿಯಾಗಿರುವ ಭೂಮಿತಾಯಿ ದುಷ್ಟ ವರ್ತನೆ ಮಿತಿಮೀರಿದಾಗ ಕೊಲ್ಲುವವಳು ಆಗುತ್ತಾಳೆ. 'ಜಗನ್ಮಾಯೆ ಇವಳು ತಾಯೆ? ಮಣ್ಣ ಹರಡಿ ಮಲಗಿರುವಳು ಸಣ್ಣಗಿದೆ ದೀಪ ಎಲ್ಲೋ ಒಂದು ಮೂಲೆಯಲ್ಲಿ' ಮುಂತಾದ ಸಾಲುಗಳು ಹಸಿರಿನ ಕಾಳಜಿಯನ್ನು ಗುರುತಿಸುತ್ತವೆ. ಮನುಷ್ಯನ ಸ್ವಾರ್ಥ, ದುರಾಸೆ ಭೂಮಿತಾಯಿಯ ಸಮೃದ್ಧಿಯನ್ನು ನಾಶ ಮಾಡಿದೆ. ಎಲ್ಲವನ್ನು ಇಲ್ಲವಾಗಿಸುತ್ತ ಬಂದಿರುವ ಆಧುನಿಕ ಜೀವನ ಶೈಲಿ ಇಲ್ಲಿ ಪರಿಚಯವಾಗುತ್ತದೆ. 'ಮಳೆ ಬಂದು ಕೆರೆ ತುಂಬಿ ನೀರು ನಕ್ಕವು ತಣ್ಣನೆ ಗದ್ದೆಗಳಲ್ಲಿ' ಎನ್ನುವಾಗ ಇರುವ ಭೂಮಿಯ ಬಗೆಗಿನ ಸಂಭ್ರಮ, 'ಅವಳು ನಕ್ಕರೂ ನೀವು ಸಾಯುವಿರಿ; ಅವಳ ಶಕ್ತಿ ಹಿರಿದು' ಎನ್ನುವಾಗ ಪ್ರಕೃತಿಯ ನಿಯಮದ ಜೊತೆ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಹಾಗೂ ಮನುಷ್ಯನ ಸ್ವಯಂಕೃತ ಅಪರಾಧಕ್ಕೆ ದಂಡ ತೆರಬೇಕಾದೀತು ಎಂಬ ಎಚ್ಚರಿಕೆಯೂ ಇದೆ.

ಆಧುನಿಕ ಸಾಹಿತ್ಯದಲ್ಲಿ ತಮ್ಮ ವರ್ಚಸ್ಸು ಬೀರಿದವರು ಗೋಪಾಲಕೃಷ್ಣ ಅಡಿಗರು. ಸಾಹಿತ್ಯ ಸೃಷ್ಟಿಯಲ್ಲಿನ ಇವರ ಶ್ರದ್ಧೆ ಇವರನ್ನು ಒಬ್ಬ ಪ್ರಮುಖ ಕವಿಯನ್ನಾಗಿ ಮಾಡಿದೆ. ಇವರ ಹುಟ್ಟೂರು ಮೊಗೇರಿ ಪ್ರಕೃತಿ ಮಾತೆಯ ಕೈಗೂಸು. ಸುತ್ತಮುತ್ತಲೆಲ್ಲ ಸೌಂದರ್ಯ ಹೊತ್ತುನಿಂತ ಪ್ರಕೃತಿ. ಬದುಕಿನ ಮೊದಲ ಹದಿನಾರು ವರ್ಷಗಳನ್ನು ಕವಿ ಕಳೆದದ್ದು ಅವರ ಹುಟ್ಟೂರಿನಲ್ಲಿ, ಸುತ್ತಮುತ್ತಲೂ ಹಾಡಿ, ಹೂಹಣ್ಣು ಕಾಯಿಗಳಿಂದ ತುಂಬಿದ ಬಾಳೆ, ಹಲಸು, ಮಾವು, ನಿಂಬೆ, ಸೀಬೆ ಇತ್ಯಾದಿ. ಎದುರು ಗದ್ದೆ, ಎಡದಿಕ್ಕಿನಲ್ಲಿ ಕೆರೆ, ಸಮೀಪದಲ್ಲೇ ಊರಿನ ದೇವಾಲಯ ಇಂಥ ಪರಿಸರದ ನಡುವೆ ಬೆಳೆದ ಕವಿ ಅಡಿಗರು.

ಅಡಿಗರು ನಡೆದು ಬಂದ ದಾರಿ ಕುತೂಹಲಕಾರಿಯಾದುದು. ಕನ್ನಡ ಕಾವ್ಯಕ್ಕೆ ಹೊಸತಾದ ನೆಗೆತವನ್ನು ನೀಡಿ ಕಾವ್ಯದಲ್ಲಿ 'ವಾಸ್ತವದ ರಕ್ತದಾನ', 'ಮಣ್ಣಿನ ವಾಸನೆ' ಎಂಬ ಅನನ್ಯ ಪರಿಕಲ್ಪನೆಗಳನ್ನು ಪರಿಚಯಿಸಿದರು. ನವೋದಯದ ಭಾವುಕ ಭಾಷೆಯಿಂದ ಆಚೆ ಬರಲು

ನವ್ಯ ಕಾವ್ಯವು ಮಣ್ಣಿನ ವಾಸನೆಯಿಂದ ಆಡು ಮಾತಿನ ಗದ್ಯಲಯಕ್ಕೆ ಹತ್ತಿರವಾಯಿತು. ಕಾವ್ಯದಲ್ಲಿ ಭಾಷೆ ನುಡಿಗಟ್ಟು, ಸಂವೇದನೆ ಪ್ರತಿಮೆಗಳನ್ನು ಬಳಸುವುದರ ಮೂಲಕ ಹೊಸ ಸ್ಪಂದನ ಮೂಡಿಸಿದರು. 'ನಡೆದು ಬಂದ ದಾರಿಯ ಕಡೆಗೆ ತಿರುಗಿಸಬೇಡ: ಕಣ್ಣ ಹೊರಳಿಸಬೇಡ' ಎನ್ನುತ್ತಾ ಸ್ವಯಂಪ್ರೇರಿತ ದಾರಿಯನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ಮುಂದಾದರು. ಗೀತಾನಾವೆಲ್ ಅಭಿಪ್ರಾಯ ಪಡುವಂತೆ, 'ಅವರ ಕವಿತೆಗಳು ಈ ಭೂಮಿಗೆ ಇಲ್ಲಿನ ಸಮಾಜಕ್ಕೆ ಈ ನೆಲದ ಪುರಾಣ ಪ್ರತಿಮೆಗಳಿಗೆ ಬದ್ಧವಾಗಿವೆ. ಒಟ್ಟಿನಲ್ಲಿ ಅಡಿಗರು ಸಾಧಿಸಿದ್ದು ತನ್ನ ಸುತ್ತಲಿನ ಪರಿಸರದ ಉಸಿರಾಟಕ್ಕೆ ಏರಿಳಿತವನ್ನು ಎನ್ನಬಹುದು. ಕರಾವಳಿ ತೀರ ಇಲ್ಲಿಯ ಮಳೆ–ಮೋಡ, ಹಸಿರ ರಾಶಿ ಅವರನ್ನು ಪ್ರಭಾವಿಸಿವೆ. ನಾಡಿನ ಸಂಸ್ಕೃತಿಯ ಸಿರಿಯ ಪ್ರಭಾವವೂ ಇಲ್ಲಿದೆ' (೨೦೧೨ ಪು.೧೭) ಎಂಬ ಮಾತು ಒಪ್ಪುವಂತದ್ದೇ ಆಗಿದೆ. ಕೇವಲ ವಾಸ್ತವವಾದದ್ದು, ಇಂದ್ರಿಯಗಮ್ಯವಾದದ್ದು ಮಾತ್ರ ಕಾವ್ಯದ ವಸ್ತುವಾಗಲಾರದೆನ್ನುವುದು ಅಡಿಗರ ಅಭಿಪ್ರಾಯ. ಇವರ ಪ್ರಕಾರ ನಮ್ಮ ಪರಿಸರದಲ್ಲಿ ಕಾಣುವ ವಸ್ತುಗಳಷ್ಟೇ ನಿಜವಾದುದು ಅವುಗಳ ಬಗ್ಗೆ ನಮ್ಮ ಮನಸ್ಸಿನಲ್ಲಿ ಮೂಡುವ ಭಾವನೆಗಳು. ಹೀಗಾಗಿ ಕಾವ್ಯಕ್ಕೆ ನಮ್ಮ ಆದರ್ಶ, ಕನಸು, ಕಲ್ಪನೆ ಇವೆಲ್ಲವುಗಳ ಮೇಳೈಕೆ ಅಗತ್ಯ. ಈ ಕುರಿತು ಚರ್ಚಿಸುತ್ತಾ, ಅಣ್ಣಮ್ಮನವರು 'ಅಡಿಗರು ನಮ್ಮ ಬದುಕಿನ ವಾಸ್ತವಗಳನ್ನು ಕೌಟುಂಬಿಕ, ಸಾಮಾಜಿಕ, ರಾಜಕೀಯ ವಾಸ್ತವಗಳನ್ನು ತಮ್ಮ ಆತ್ಮಸಾಕ್ಷಿಯಾಗಿ ಕಂಡು ಸವಿವರವಾಗಿ ನಮ್ಮೆದುರಿಗೆ ತೆರೆದಿಟ್ಟದ್ದೇ ಅಡಿಗರ ಕಾವ್ಯದ ವಾಸ್ತವತೆಯಾಗಿದೆ. ಈ ರೀತಿ ತೋರಿಸಲು ಬೇಕಾದ ಪ್ರತಿಮೆಗಳನ್ನು ಮತ್ತು ಹೊಸ ನುಡಿಗಟ್ಟನ್ನು ಕಾವ್ಯಕ್ಕೆ ತಂದದ್ದನ್ನೇ ಅವರು 'ವಾಸ್ತವದ ರಕ್ತದಾನ' ಎಂದಿದ್ದಾರೆ. ಇದನ್ನೇ ಮಣ್ಣಿನ ವಾಸನೆಯೆಂದು ಕರೆದಿದ್ದಾರೆ' ಎನ್ನುತ್ತಾರೆ. (೨೦೦೪ ಪು.೯೧) ಅಡಿಗರ ಈ ಕಲ್ಪನೆಯ ಕುರಿತು ಚರ್ಚೆಗಳಾಗಿವೆ.

ಅಧುನಿಕ ಸಾಹಿತ್ಯದಲ್ಲಿ 'ಮಣ್ಣಿನ ವಾಸನೆ', 'ಸಮಕಾಲೀನ ಪ್ರಜ್ಞೆ, 'ಆಡುಮಾತು' ಮುಂತಾದ ಪರಿಭಾಷೆಗಳ ಪ್ರಯೋಗಗಳಿವೆ. ಇವು ಆಯಾ ಕಾಲದ ಸಾಹಿತ್ಯಕ್ಕೆ ಅನ್ವಯಿಸುವಂತವು. ಈ ಪದಗಳ ಹಿಂದಿರುವ ಕಲ್ಪನೆಗಳೂ ಸಂದರ್ಭಕ್ಕನುಸಾರವಾಗಿ ನಾನಾರ್ಥಗಳಲ್ಲಿ ಬಳಕೆಯಾಗುತ್ತಾ ಬಂದಿವೆ. ಅಡಿಗರ ಆಲೋಚನೆಯ ಪ್ರಕಾರ ಕಾವ್ಯದಲ್ಲಿ ಮಣ್ಣಿನ ವಾಸನೆ ಹೊಡೆಯಬೇಕು. ಒಂದರ್ಥದಲ್ಲಿ ಕಾವ್ಯದಲ್ಲಿ ಮಡಿವಂತಿಕೆ ಕೂಡದು ಎಂಬಂತೆ ಇದು ಬಳಕೆಯಾಗಿದೆ. ಲೌಕಿಕ ವಾಸ್ತವ ನಿಷ್ಠುರವಾಗಿ ಅಭಿವ್ಯಕ್ತಗೊಳ್ಳಬೇಕೆನ್ನುವುದು ಇಲ್ಲಿಯ ಗ್ರಹಿಕೆ. ಆದರೆ ಇದು ಹೊಸತಲ್ಲ. ಎಲ್ಲ ಸಂಪ್ರದಾಯಗಳ ಆರಂಭದಲ್ಲಿಯೂ ಈ ಗ್ರಹಿಕೆ

ಇತ್ತೆಂಬುದನ್ನು ಮರೆಯುವಂತಿಲ್ಲ. ಇದನ್ನು ಇನ್ನೂ ಸ್ಪಷ್ಟಪಡಿಸಿಕೊಳ್ಳುವುದಾದರೆ, ಆಡುಮಾತನ್ನು ಕಾವ್ಯದಲ್ಲಿ ಬಳಸಬೇಕು ಎನ್ನುವುದು. ಹಾಗಾಗಿ ಈ ಎರಡನ್ನೂ ಅಭಿವ್ಯಕ್ತಿಸಲು ಮೂಲವಾದ ಧೋರಣೆಯನ್ನು ಸಮಕಾಲೀನ ಪ್ರಜ್ಞೆ ಎನ್ನಬಹುದು. ರಂ. ಶ್ರೀ. ಮುಗಳಿಯವರ ಪ್ರಕಾರ ಸಮಕಾಲೀನ ಪ್ರಜ್ಞೆಯೆಂದರೆ, 'ಕಾಲಮಾನದ ಅರಿವು'. ಇದು ಕವಿಯಲ್ಲಿ ತೀರಾ ಅಗತ್ಯ. ಪ್ರಜ್ಞೆಯೆನ್ನುವುದು ಬುದ್ಧಿ, ವಿವೇಕ ಮೊದಲಾದ ಅರ್ಥಗಳಲ್ಲಿ ಬಳಕೆಯಾಗಿದೆ. ನಿಜವಾದ ಸಮಕಾಲೀನ ಪ್ರಜ್ಞೆ ಸರ್ವಕಾಲೀನವೇ ಆಗಿರುತ್ತದೆ. ಇದು ವಿಶಾಲ ಅನುಭವಗಳ ತೀವ್ರ ಮಂಥನದಿಂದ ಮೂಡಿದ ಸಮಗ್ರ ಅರಿವು'. (೨೦೦೯ ಪು.೧೩೦) ಆದರೆ ತಾವು ಗ್ರಹಿಸಿದ ಈ ಕಲ್ಪನೆಯಿಂದ ಸ್ವತಃ ಅಡಿಗರೇ ದೂರ ಸರಿದದ್ದನ್ನು ಅವರ ಅನಂತರದ ಕವನಗಳ ಮೂಲಕ ಕಾಣಬಹುದು. ಪೂರ್ಣಚಂದ್ರ ತೇಜಸ್ವಿಯವರ ಮಾತಿನ ಪ್ರಕಾರ, 'ಮಣ್ಣಿನ ವಾಸನೆ ಹೊಡೆಯಬೇಕೆಂದು ವಾಸ್ತವಕಾರಿಯಾಗಿಯೂ ಶಪಥ ಮಾಡಿ ಹೊರಟ ಅಡಿಗರು ಮುಂದೆ ಕಾವ್ಯದಲ್ಲಿ ತಮ್ಮ ಸಂಪ್ರದಾಯ, ಧರ್ಮಾಚರಣೆ, ಭೂತ ಮುಂತಾದವುಗಳಲ್ಲಿಯೇ ತೊಡಕಿಕೊಂಡು ಅದೇ ಗುಂಗಿನಲ್ಲಿ ಕಾವ್ಯರಚನೆ ಮಾಡತೊಡಗಿದರು. ಆಡುಮಾತಿನಲ್ಲಿ ಕಾವ್ಯ ಬರೆಯಬೇಕೆಂದು ಹೊರಟವರು ಪೌರಾಣಿಕ ಪ್ರತೀಕ, ಸಂಕೇತಗಳ ಪರಿಭಾಷೆಯಲ್ಲಿ ತೊಡಕಿಗೊಂಡು ಕಾವ್ಯ ರಚಿಸಿದರು. ಶಪಥ ಪ್ರತಿಜ್ಞೆಗಳಿಂದ ಮಾತ್ರವೇ ಹೊಸ ಕಾವ್ಯದಲ್ಲಿ ಮಣ್ಣಿನ ವಾಸನೆ ಹೊಡೆಯುವುದು ಕೇವಲ ಮರೀಚಿಕೆಯಾಗಿದೆ' (೨೦೦೯ ಪು.೨) ಇದರಿಂದಾಗಿ ಸಮಕಾಲೀನ ಪ್ರಜ್ಞೆಯೆನ್ನುವುದು ಕೇವಲ ಪ್ರಚಲಿತ ಸ್ಥಿತಿಯ ಅರಿವು ಆಗಿರದೆ ಅದನ್ನು ಮೀರಿದ ಪ್ರಜ್ಞೆ ಎನ್ನಬಹುದು.

ಈ ಹಿನ್ನೆಲೆಯಿಂದ ಅಡಿಗರ 'ಭೂಮಿಗೀತ' ಕವನವನ್ನು ವಿಶ್ಲೇಷಿಸಬಹುದಾಗಿದೆ. ಇಲ್ಲಿ ಬರುವ ಮುಖ್ಯ ಪಾತ್ರಗಳೆಂದರೆ, ಭೂಮಿ ಮತ್ತು ಮನುಷ್ಯ. ಇವರಿಬ್ಬರ ಸಂಬಂಧದ ಮಧ್ಯೆ ಶೋಷಣೆಯ ನೆಲೆಯನ್ನು ಕವಿ ಗುರುತಿಸಿದ್ದಾರೆ. ಮಾನವನ ಅಸ್ತಿತ್ವದ, ಮಾನವೀಯ ಸಂದರ್ಭದ ಅರ್ಥಪೂರ್ಣ ಚಿತ್ರಣ ಇಲ್ಲಿದೆ.

ಅಧುನಿಕ ಕಾಲಘಟ್ಟದಲ್ಲಿ 'ನೆಲ' ಎನ್ನುವುದು ಸರಕಿನ ವಸ್ತುವಾಗಿದೆ ಇದಕ್ಕಾಗಿ ಸಹೋದರರಲ್ಲಿ ಕಲಹ, ತಂದೆ ಮಕ್ಕಳ ಸಂಬಂಧದ ನಾಶ ಮುಂತಾದವು ಕಣ್ಣಿಗೆ ಕಾಣುವ ಸಂಗತಿಯಾಗಿವೆ. ಪರಂಪರೆಯ ಕಾವ್ಯಗಳಲ್ಲಿ ಇದರ ವಿವರಣೆಯಿದೆ. ಪಂಪನ ಪ್ರಕಾರ ರಾಜ್ಯಲಕ್ಷ್ಮೀ ಎನ್ನುವುದು 'ಸೋದರರೊಳ್ ಸೋದರರ ಕಾದಿಸುವುದು, ಸುತನ ತಂದೆಯೆಡೆಯೊಳ್ ಬಿಡದುತ್ಪಾದಿಸುವುದು' (ಆದಿಪುರಾಣ). ಆದರೆ ಭೂಮಿಯನ್ನು

ಒಡವೆಯೆಂದು, ಸಂಪನ್ಮೂಲದ ಆಗರವೆಂದು ಭಾವಿಸಿದ ಮಾನವರೂ ಇದ್ದಾರೆ. ಮಣ್ಣಿನ ಮೇಲಿನ ಪ್ರಭುತ್ವದ ಮೂಲಕ ವ್ಯಕ್ತಿಯೊಬ್ಬನ ಶ್ರೀಮಂತಿಕೆ ಗುರುತಿಗೆ ಬರುತ್ತದೆ. ಮನುಷ್ಯ ಸ್ವಾರ್ಥಿಯಾದಾಗ ಸುತ್ತಲಿನ ನೆಲವೆಲ್ಲ ತನ್ನದೇ ಎಂಬ ಮೋಹಕ್ಕೊಳಗಾದರೆ ಅದನ್ನು ನೋಡಿ ಭೂಮಿತಾಯಿ ಕಂಗಾಲಾದುದನ್ನು ಅಡಿಗರ ಮಾತುಗಳ ಮೂಲಕ ಗ್ರಹಿಸಬಹುದಾಗಿದೆ.

ಈ ಅಬಲೆ ತಾಯಿ ಮಲಗಿರುವ ಪೃಥಿವೀ
ಸುಸ್ತಾಗಿ ಮಲಗಿದ್ದಾಳೆ ಮುಗಿಲ ಕಡೆ ಕಣ್ಣ ನೆಟ್ಟಿದ್ದಾಳೆ
ಅವಳ ಅಂಗಾಗಂಗಳು ಒಂದಿಷ್ಟು ರಕ್ತ ಜಿನುಗುವ ತನಕ
ಅದ ಕಚ್ಚಿ ಹೀರು ಮಾಂಸವಿಲ್ಲವೆ? ಮಾಂಸ?
ಮೂಳೆ ನರ ಮಚ್ಚೆ ತೊಗಲದಷ್ಟಾದರೂ ಇಹುದೊ ಇಲ್ಲೊ
ಅಹಹ! ಗಂಡು ನೀ ಕಣೊ
ಅಣುವನೊಡೆ, ಹತ್ತನ್ನು ಪಡೆ
ಬ್ರಹ್ಮಾಂಡಕ್ಕೆ ತೊಟ್ಟುಬಿಡು ಬ್ರಹ್ಮಾಸ್ತ್ರ, ವಿಜಯೀಭವ
(ಏನಾದರು ಮಾಡುತಿರು ತಮ್ಮ)

ನೆಲವನ್ನು ಒದ್ದು ಮೇಲೆದ್ದು ಹೆಡೆಯೆತ್ತುವ ಮಹಲುಗಳು, ಪಂಚತಾರಾ ಭವನಗಳು ಕವಿಯ ಕೆಂಗಣ್ಣಿಗೆ ಗುರಿಯಾಗಿವೆ. ಈ ರೀತಿಯಾಗಿ ನೆಲದ ಬಗೆಗೆ ಪ್ರತಿಯೊಬ್ಬ ಬರಹಗಾರನೂ ತಾಳಿದ್ದ ಕಾಳಜಿ ಅನನ್ಯವಾದುದು. ಪ್ರಚಲಿತ ಪರಿಸ್ಥಿತಿಯ ಅರಿವು ಪ್ರತಿಯೊಬ್ಬ ಬರಹಗಾರನಿಗಿರಬೇಕಾದ ಗುಣ. 'ನೆಲ' ಎನ್ನುವುದು ಸಾಹಿತ್ಯದ ಮೂಲಕ ಭಾವನಾತ್ಮಕ ಸಂಬಂಧದಲ್ಲಿ ಗುರುತಿಸಲ್ಪಟ್ಟಿದೆ. ಇಂದಿನ ದಿನಗಳಲ್ಲಿ ವಾಸ್ತವವಾಗಿ ಅದು ಸರಕಿನ ವಸ್ತುವಾಗಿದೆ. ಈ ನೋವು ಪ್ರತಿಯೊಬ್ಬ ಬರಹಗಾರರನ್ನೂ ಕಾಡಿತ್ತು.

# ಅಧ್ಯಾಯ - ೧

# ಕನ್ನಡ ಕಾವ್ಯಗಳಲ್ಲಿ ಸಮನ್ವಯದ ದಾರಿ

೧:೧ ಕವಿರಾಜಮಾರ್ಗ

೧:೨ ಮಾರ್ಗಕಾರ ಗುರುತಿಸಿದ ನಾಡಿನ ನಕ್ಷೆ

೧:೩ ಆದಿಪುರಾಣ

೧:೪ ವಿಕ್ರಮಾರ್ಜುನ ವಿಜಯ

೧:೫ ಸಾಹಸಭೀಮ ವಿಜಯ

೧:೬ ಧರ್ಮಾಮೃತ

೧:೭ ಕಬ್ಬಿಗರಕಾವ

## ಅಧ್ಯಾಯ - ೧

### ಕನ್ನಡ ಕಾವ್ಯಗಳಲ್ಲಿ ಸಮನ್ವಯದ ದಾರಿ

ಪ್ರಾಚೀನ ಕವಿಗಳು ನಾಡು ನುಡಿಯನ್ನು ಪ್ರತಿನಿಧೀಕರಿಸಿದ ಬಗೆಯನ್ನು ಕಾವ್ಯಗಳ ಅಧ್ಯಯನದ ಮೂಲಕ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಶ್ರೀವಿಜಯ, ಪಂಪ, ರನ್ನ, ನಯಸೇನ ಮತ್ತು ಆಂಡಯ್ಯ ಇವರ ಕಾವ್ಯಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕಾಲಘಟ್ಟದ ಕನ್ನಡ ಕಾವ್ಯಗಳನ್ನು ಗಮನಿಸುವಾಗ, ಒಂದೆಡೆ ಸಂಸ್ಕೃತದ ಸತ್ವವನ್ನು ಹೀರಿಕೊಂಡು ಕನ್ನಡ ಬೆಳೆದರೆ, ಇನ್ನೊಂದೆಡೆ ಸಂಸ್ಕೃತದ ನಿರಾಕರಣೆಯು ಕಾಣಿಸಿಕೊಂಡಿದೆ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ನಾಡು ಮತ್ತು ನುಡಿ ಎನ್ನುವುದು ಅಭಿಮಾನದ ನೆಲೆಯಲ್ಲಿ ಪ್ರಕಟಗೊಂಡಿದೆ. ರಾಜಕೀಯವಾಗಿ ಅಲ್ಲಿ ಯಾವುದೇ ಗಡಿರೇಖೆಗಳಿಲ್ಲದೇ ಇದ್ದ ಸ್ಥಿತಿಯಲ್ಲಿ ರಾಜಾಶ್ರಯವನ್ನು ಪಡೆದುಕೊಂಡಿದ್ದ ಅಂದಿನ ಕವಿಗಳು ತಮ್ಮ ಕಾವ್ಯದ ಮೂಲಕ ಗಡಿರೇಖೆಗಳನ್ನು ನಿರ್ಮಿಸುವ ಪ್ರಯತ್ನ ಮಾಡಿದರು. ಬೇರೆ ಬೇರೆ ರಾಜ ಮನೆತನಗಳು ಕರ್ನಾಟಕವನ್ನು ಆಳ್ವಿಕೆ ನಡೆಸಿದ್ದು, ಅವರವರ ಶೌರ್ಯ ಸಾಹಸಕ್ಕೆ ಅನುಗುಣವಾಗಿ ರಾಜ್ಯ ವಿಸ್ತರಣೆಗೊಂಡಿತ್ತು. ರಾಜಾಶ್ರಯದಲ್ಲಿದ್ದ ಆ ಕಾಲದ ಕವಿಗಳಿಗೆ ನಾಡಿನ ಗಡಿಗಳನ್ನು ಗುರುತಿಸಿ ವಿಶಾಲವಾದ ಮನೋಭೂಮಿಕೆಯಲ್ಲಿ ಕನ್ನಡ ನಾಡನ್ನು ಕಟ್ಟುವ ಹಂಬಲವಿದ್ದಂತೆ ಕಾಣಿಸುತ್ತದೆ. ಕಾವ್ಯಗಳ ಮೂಲಕ ಈ ಹಂಬಲ ಅನಾವರಣಗೊಂಡಿತು. ನಾಡಿನ ಸೀಮೆಯನ್ನು ದಾಖಲಿಸುವುದರ ಮೂಲಕ ಅಂದಿನ ಆಳರಸರುಗಳಿಗೆ ನಾಡಿನ ಭೌಗೋಳಿಕ ವ್ಯಾಪ್ತಿಯನ್ನು ಗುರುತಿಸಿ ಭದ್ರಗೊಳಿಸುವಂತೆ ಸೂಚಿಸುವ ಉದ್ದೇಶವು ಕವಿಗಳಿಗೆ ಇದ್ದಿರಬಹುದು. ಹಾಗಾಗಿ ಬೇರೆ ಬೇರೆ ಸಂಗತಿಗಳ ಮೂಲಕ ನಾಡನ್ನು ಪ್ರತಿನಿಧೀಕರಿಸುವ ಪ್ರಯತ್ನವನ್ನು ಪರಂಪರೆಯ ಕವಿಗಳು ಮಾಡಿದ್ದಾರೆ.

ಜಲಸಿರಿ, ವನಸಿರಿ ಮೊದಲಾದ ಪ್ರಾಕೃತಿಕ ಸಂಪತ್ತು, ಜನರ ನಂಬಿಕೆ-ನಡವಳಿಕೆಗಳು, ಆಚರಣೆ-ಸಂಪ್ರದಾಯಗಳು, ಕೋಟೆ-ಕೊತ್ತಲಗಳು, ಗಾದೆ ಮಾತುಗಳು, ದೇಸಿ ನುಡಿಗಳು ಮುಂತಾದ ಸಂಗತಿಗಳನ್ನು ನಾಡು-ನುಡಿಯ ಭಾಗವೆಂದು ಪರಿಗಣಿಸಿ ಕಾವ್ಯಗಳಲ್ಲಿ ಅವುಗಳನ್ನು ದಾಖಲಿಸಿದ ಬಗೆ ಮತ್ತು ತನ್ಮೂಲಕ ಅಭಿವ್ಯಕ್ತಗೊಳ್ಳುವ ನಾಡು-ನುಡಿಯ ಪ್ರತಿನಿಧೀಕರಣವನ್ನು ಇಲ್ಲಿ ಚರ್ಚಿಸಲಾಗಿದೆ.

'ಮಾರ್ಗ' ಮತ್ತು 'ದೇಸಿ' ಕಾವ್ಯ ಪರಂಪರೆಯಲ್ಲಿ ಕಾಣಿಸಿಕೊಂಡ ಎರಡು ಸಂಪ್ರದಾಯಗಳು. ಇವುಗಳಲ್ಲಿ 'ಮಾರ್ಗ'ವು ಪಂಡಿತರಿಗೆ ಅರ್ಥವಾಗುವ ಸಂಸ್ಕೃತ ಭೂಯಿಷ್ಠವಾದ ಪ್ರೌಢ ರಚನೆ. 'ದೇಸಿ' ಎಂದರೆ ಜನರ ಆಡು ಮಾತಿನಲ್ಲಿ ಶ್ರೀಸಾಮಾನ್ಯನಿಗೂ ಅರ್ಥವಾಗುವ ಜನಮುಖಿಯಾದ ರಚನೆ. ಸಂಸ್ಕೃತದ ಜೊತೆಗೆ ಮುಖಾಮುಖಿಯಾಗುತ್ತಾ ದೇಸಿಯ ವಿಶಿಷ್ಟತೆಯನ್ನು ಉಳಿಸಿಕೊಂಡ ಕವಿಗಳು ಇವೆರಡರ ಸಮನ್ವಯದ ದಾರಿಯಲ್ಲಿ ಕಾವ್ಯರಚನೆ ಮಾಡಿದ್ದನ್ನು ಗಮನಿಸಬಹುದು.

'ಕವಿರಾಜಮಾರ್ಗ'ವು ಸಂಸ್ಕೃತದ ಮುಂದೆ ಕನ್ನಡವನ್ನು ಸಾಹಿತ್ಯಯೋಗ್ಯವಾದ ಭಾಷೆಯನ್ನಾಗಿ ರೂಪುಗೊಳಿಸುವ ಪ್ರಯತ್ನವನ್ನು ಮಾಡಿದೆ. ಪ್ರಾದೇಶಿಕವಾದ ರಾಜಕೀಯ ಮತ್ತು ಸಾಂಸ್ಕೃತಿಕ ಆವರಣವೊಂದನ್ನು ನಿರ್ಮಾಣ ಮಾಡುವ ಉದ್ದೇಶದಿಂದಾಗಿ ರಾಜಾಶ್ರಯವನ್ನು ಪಡೆದುಕೊಂಡಿದ್ದ ಆ ಕಾಲಘಟ್ಟದ ಕವಿಗಳು ಸಂಸ್ಕೃತದಲ್ಲಿ ಪ್ರಭುತ್ವವನ್ನು ಹೊಂದಿದ್ದರೂ, ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಕಾವ್ಯ ರಚನೆಗಾಗಿ ಆಯ್ಕೆ ಮಾಡಿಕೊಂಡದ್ದು ಗಮನಾರ್ಹ ಸಂಗತಿಯಾಗಿದೆ. ಸಂಸ್ಕೃತವನ್ನು ಒಳಗೊಂಡು ಈ ಭಾಷೆಯು ತನ್ನ ಅಸ್ತಿತ್ವವನ್ನು ತೋರಿಸುವ ಪ್ರಯತ್ನಕ್ಕೆ ಮುಂದಾಯಿತು. ಹಾಗಾಗಿ ಕನ್ನಡ ಕವಿಗಳಲ್ಲಿ ದೇಸಿ-ಮಾರ್ಗಗಳ ಸಮನ್ವಯತೆ ಕಾಣಿಸಿಕೊಂಡಿತು. ಮಾರ್ಗಕಾರ ಹಾಕಿಕೊಟ್ಟ ಈ ಸೌಹಾರ್ದತೆಯ ಸಂಬಂಧವನ್ನು ಮುಂದುವರಿಸಿದವನು ಪಂಪ. 'ಆದಿಪುರಾಣ'ದಲ್ಲಿ ಈತ ಮಾರ್ಗ ಪರಂಪರೆಯನ್ನು ನೆಚ್ಚಿಕೊಂಡಂತೆ ಕಂಡರೂ ಎರಡನ್ನೂ ಮೇಳೈಸುವ ಪ್ರಯತ್ನವನ್ನು ಮಾಡಿದ್ದಾನೆ. 'ವಿಕ್ರಮಾರ್ಜುನ ವಿಜಯ'ದಲ್ಲಿ 'ದೇಸಿಯೊಳ್ ಪುಗುವ, ಪೊಕ್ಕ ಮಾರ್ಗದೊಳೆ ತಳ್ವುವ, ಉದ್ದೇಶ ಪಂಪನಿಗಿತ್ತು. ಇಲ್ಲಿ ಇದನ್ನು ಆಗುಮಾಡುವುದಕ್ಕೆ ಕವಿಗೆ ಯಾವುದೇ ಕಟ್ಟಳೆಗಳು ತಡೆಯೊಡ್ಡಲಿಲ್ಲ. ಹಾಗಾಗಿ ದೇಸಿತನಕ್ಕೆ ಪ್ರಾಧಾನ್ಯತೆ ನೀಡುವ ಪ್ರಯತ್ನವನ್ನು ಈತ ಮಾಡಿದ್ದಾನೆ. ರಾಜಾಶ್ರಯವನ್ನು ನೆಚ್ಚದ ನಯಸೇನ ಕವಿಗೆ ಮಾರ್ಗದ ಮನ್ನಣೆಯ ಅನಿವಾರ್ಯತೆ ಇರಲಿಲ್ಲ. ಆದರೆ ಈತ ಮಾರ್ಗದೊಳಗೆ ದೇಸಿಯನ್ನು ಮೆರೆದ ಕವಿ. ಮುಂದೆ

ಆಂಡಯ್ಯ ಸಂಸ್ಕೃತವನ್ನು ನಿರಾಕರಿಸಿ ಅಚ್ಚಗನ್ನಡದಲ್ಲಿ ಕಾವ್ಯ ನಿರ್ಮಾಣದ ಶಪಥತೊಟ್ಟವನು. ಕವಿಗಳ ಸಮನ್ವಯದ ಸಂಗತಿ ಮತ್ತು ಅದರ ನಿರಾಕರಣೆಯ ನೆಲೆಯನ್ನು ಇಲ್ಲಿ ಚರ್ಚಿಸಲಾಗಿದೆ.

**ಕವಿರಾಜಮಾರ್ಗ**

ಮಾರ್ಗಕಾರ ಮಾಡಿದ ಉಲ್ಲೇಖದ ಹಿನ್ನೆಲೆಯಿಂದ ಇವನಿಗಿಂತ ಹಿಂದೆ ಅನನ್ಯವಾದ ಒಂದು ಸಾಹಿತ್ಯ ಪರಂಪರೆ ಸೃಷ್ಟಿಯಾಗಿತ್ತೆಂಬುದು ಸ್ಪಷ್ಟ. ಆದರೆ ಕೃತಿಗಳ ಅಲಭ್ಯತೆ ಅಸ್ಪಷ್ಟತೆಗೆ ಕಾರಣವಾಗಿದೆ. ಮಾರ್ಗಕಾರ ಬಳಸಿರುವ 'ಪುರಾಣಕವಿಗಳ್', 'ಪೂರ್ವಾಚಾರ್ಯರ್' ಮುಂತಾದ ಪದಗಳು ಇದಕ್ಕೆ ಸಾಕ್ಷಿಯಾಗಿವೆ. ಅಚ್ಚಗನ್ನಡ ಕಾವ್ಯಪ್ರಭೇಧಗಳಾದ 'ಬೆದಂಡೆ', 'ಚತ್ತಾಣ'ವನ್ನು ಈ ಕೃತಿಯಲ್ಲಿ ದಾಖಲಿಸಿದ್ದಾನೆ. ಕನ್ನಡ ಎಂಬುದು ದೇಶ-ನಾಡು-ನುಡಿ-ಭಾಷೆ ಮುಂತಾದ ಅರ್ಥಗಳಲ್ಲಿ ಬಳಕೆಗೊಂಡದ್ದು ಈ ಕೃತಿಯಲ್ಲಿ. ಸಾಂಸ್ಕೃತಿಕ, ಸಾಹಿತ್ಯಿಕ, ಚಾರಿತ್ರಿಕ ಮತ್ತು ಲಾಕ್ಷಣಿಕ ಪಠ್ಯವಾಗಿ ಇದು ಹಿರಿಮೆಯನ್ನು ಗಳಿಸಿದೆ. ಕನ್ನಡದ ನೆಲ-ಜಲ-ಜನ-ಭಾಷೆ ಮುಂತಾದ ಸಂಗತಿಗಳನ್ನು ಒಂದು ಲಾಕ್ಷಣಿಕ ಗ್ರಂಥ ನಮ್ಮ ಮುಂದಿಡುತ್ತದೆ ಎನ್ನುವುದು ಅಚ್ಚರಿಯ ಸಂಗತಿ. ಇಲ್ಲಿಯೇ ಮಾರ್ಗಕಾರನ ಕನ್ನಡ ಶ್ರದ್ಧೆಯನ್ನು ಸೂಕ್ಷ್ಮವಾಗಿ ಗುರುತಿಸುವುದಕ್ಕೆ ಅವಕಾಶವಿದೆ. ಅಲ್ಲದೇ ಕನ್ನಡ ಸಮುದಾಯದೊಂದಿಗೆ ಭಾವನಾತ್ಮಕ ಸಂಬಂಧವನ್ನು ನಿರ್ಮಾಣ ಮಾಡಿದ ಸಾಮರ್ಥ್ಯ ಈ ಕೃತಿಯದು. ಕನ್ನಡದ ಸಂದರ್ಭದ ಯಾವುದೇ ಚರ್ಚೆಗಳು ಕವಿರಾಜ ಮಾರ್ಗವನ್ನು ಅನುಲಕ್ಷಿಸಿಯೇ ನಡೆಯುತ್ತಿರುವುದು ಇದಕ್ಕೆ ಸಾಕ್ಷಿ.

ಯಾವುದೇ ಒಂದು ಸಾಹಿತ್ಯ ಕೃತಿ ನಾಡಿನ ಅಭಿಮಾನವನ್ನು ವ್ಯಕ್ತಪಡಿಸುವಾಗ ನಾಡಿನ ಮೋಹ ಅಕ್ಷರ ರೂಪವನ್ನು ಪಡೆದುಕೊಂಡು ಅಲ್ಲಿಯ ಒಳಿತನ್ನು ಮಾತ್ರ ದಾಖಲಿಸುತ್ತದೆ. ಆದರೆ ಮಾರ್ಗಕಾರ ಇಂತಹ ಮೋಹಕ್ಕೆ ಒಳಗಾಗದೇ ತನ್ನ ವಿಮರ್ಶನ ಪ್ರಜ್ಞೆಯನ್ನು ಮೆರೆದಿದ್ದಾನೆ. ಹಾಗಾಗಿ ಸತ್ಕಾವ್ಯದ ಪ್ರಶಂಸೆಯ ಜೊತೆಗೆ ಕುಕವಿ ನಿಂದೆಯನ್ನು ಕೃತಿ ಪ್ರಸ್ತಾಪಿಸುತ್ತದೆ. ಕೃತಿಕಾರನ ಬಗೆಗೆ ವಿದ್ವಾಂಸರಲ್ಲಿ ಚರ್ಚೆ ಇದೆ. ಕೆ.ವಿ. ಸುಬ್ಬಣ್ಣ ಈ ಕುರಿತು ಪ್ರಸ್ತಾಪಿಸುತ್ತಾ ಇದು ಕವಿ ಮತ್ತು ರಾಜ ಕೂಡಿ ನಿರ್ಮಿಸಿದ ಕನ್ನಡತನದ ಮಾರ್ಗ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.(೨೦೦೯ ಪು.೩೯) ಕೃತಿಯ ಹೆಸರೂ ಈ ಅಭಿಪ್ರಾಯಕ್ಕೆ ಪೂರಕವಾಗಿಯೇ ಇದೆ. ಇದು ಕನ್ನಡದ ಮೊದಲ ಶಾಸ್ತ್ರಗ್ರಂಥ. ಕಾವ್ಯಮೀಮಾಂಸೆ, ವ್ಯಾಕರಣಕ್ಕೆ ಸಂಬಂಧಿಸಿದ ಸಂಗತಿಗಳು ಇಲ್ಲಿವೆ. ಕನ್ನಡದ ಆಡುಮಾತು ಕಾವ್ಯಭಾಷೆಯಾಗಿ ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿ ಹುಟ್ಟಿದ ಕೃತಿ ಇದು. ಸಂಸ್ಕೃತದ ಕೃತಿ ಇದರ ಪ್ರೇರಕ ಶಕ್ತಿಯಾದರೂ ಆ

ಹೆಸರನ್ನು ಅನುಕರಿಸದೆ ತನ್ನ ಕೃತಿಗೆ ವಿಶಿಷ್ಟವಾದ ನಾಮಧೇಯ ಒಂದನ್ನು ಕವಿ ನಿರ್ಮಾಣ ಮಾಡಿದ್ದಾನೆ.

ಕವಿರಾಜ ಮಾರ್ಗದ ಮೊದಲ ಪರಿಚ್ಛೇದ ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಮುಖ್ಯವಾದುದು. ಯಾಕೆಂದರೆ, ಕರ್ನಾಟಕದ ಜನಜೀವನ, ಕನ್ನಡದ ಸ್ಥಿತಿಗತಿ, ನಾಡಿನ ಸೀಮೆ, ಸಾಹಿತ್ಯ ಸಾಂಸ್ಕೃತಿಕ ಒಲವು-ನಿಲುವು, ಕಾವ್ಯಲಕ್ಷಣ ಮುಂತಾದ ಸಂಗತಿಗಳು ಇಲ್ಲಿವೆ. ಇದೆಲ್ಲವನ್ನು ಕವಿ ಮಾಡಿರುವುದು ಸಂಸ್ಕೃತವನ್ನು ವಿರೋಧಿಸಿ ಅಲ್ಲ. ಅದರ ಜೊತೆಗೆ ಬೆಳೆಯಬಹುದಾದ ಬಗೆಯನ್ನು ಕಂಡುಕೊಳ್ಳುವುದರ ಮೂಲಕ. ರಾಜನಾದ ನೃಪತುಂಗನ ವ್ಯಕ್ತಿತ್ವ ನಿರೂಪಣೆ, ಆ ಕಾಲದ ರಾಜಕೀಯ ಸ್ಥಿತಿಗತಿಗಳ ಚಿತ್ರಣ, ಭೌಗೋಳಿಕ ವಿಸ್ತಾರದ ಮಾಹಿತಿಯಿಂದಾಗಿ ಕೃತಿಗೆ ಚಾರಿತ್ರಿಕ ಮಹತ್ವ ಪ್ರಾಪ್ತಿಯಾಗುತ್ತದೆ. 'ನೀತಿನಿರಂತರ', 'ಕೃತಕೃತ್ಯಮಲ್ಲ', 'ಅಪ್ರತಿಹತವಿಕ್ರಮ', 'ಅತಿಶಯಧವಳ' ಮುಂತಾದ ಬಿರುದುಗಳೊಂದಿಗೆ ನೃಪತುಂಗನನ್ನು ಕವಿ ಗುರುತಿಸಿದ್ದಾನೆ. ಫಲಶ್ರುತಿಯ ಪದ್ಯದಲ್ಲಿಯೂ ಉದ್ದೇಶ ಪೂರ್ವಕವಾಗಿ ರಾಜನ ಬಿರುದಾವಳಿಯ ಉಲ್ಲೇಖವಿದೆ.

ಕವಿಗಳಿಗೆ ಅಗತ್ಯವಾದ ವ್ಯಾಕರಣ, ಪ್ರಾಸ, ಯತಿ ಅಲಂಕಾರ ಇತ್ಯಾದಿಗಳನ್ನು ನಿರೂಪಿಸುವಲ್ಲಿಯೂ ಕೃತಿಯ ಹಿರಿಮೆ ಮತ್ತು ಕೃತಿಕಾರನ ಶ್ರದ್ಧೆಯಿದೆ. ಕಾವ್ಯ ದೋಷವನ್ನು ಅತ್ಯಂತ ನಾಜೂಕಾಗಿ ಗುರುತಿಸಲಾಗಿದೆ. ವಿದ್ವಾಂಸರಿಗೆ ಪೂರ್ವಶಾಸ್ತ್ರದ ಪರಂಪರೆಯ ಅರಿವಿರಬೇಕೆಂಬುದು ಮಾರ್ಗಕಾರನ ಅಭಿಪ್ರಾಯ. ಕಾವ್ಯದೋಷಗಳನ್ನು ಸರಿಪಡಿಸಿಕೊಂಡು ಕಾವ್ಯ ನಿರ್ಮಾಣವಾಗಬೇಕಾದಂತಹ ಸಾರ್ವಕಾಲಿಕ ಬೋಧನೆಯನ್ನು ಇಲ್ಲಿ ಮಾಡಿದ್ದಾನೆ. ಯಾಕೆಂದರೆ, ಕವಿ ತನ್ನ ದೋಷವನ್ನು ತಾನೇ ಕಾಣಲಾರ.

> ಕಾಣನೇಗೆಯ್ದು ತನ್ನ ದೋಷಮಂ
> ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ
> ಪೂಣಿಗಂ ಆದುದರಿಂ ಪೆರರಿಂ ಜಾಣರ್
> ಓದಿಸಿ ಪೇಳ್ವುದು ಕಬ್ಬಮಂ (೧-೪೫)

ಕಾವ್ಯದೋಷವನ್ನು ಅತ್ಯಂತ ನಾಜೂಕಾಗಿ ಗುರುತಿಸುವ ಪ್ರಯತ್ನ ಇಲ್ಲಿದೆ. ಕಣ್ಣಿಗೆ ಹಚ್ಚಿದ ಕಪ್ಪು ಕಣ್ಣಿಗೆ ಕಾಣುವುದಿಲ್ಲ. ಅಂತೆಯೇ ಕಾವ್ಯದ ದೋಷ ಕವಿಯ ಕಣ್ಣಿಗೆ ಕಾಣಿಸದು. ಕಣ್ಣಿಗೆ ಕಸ ಹೊಕ್ಕರೆ ಹಾನಿಯಾಗುವಂತೆ ಕಾವ್ಯದ ಅತ್ಯಂತ ಸಣ್ಣ ದೋಷವೂ ಅದರ ಸೌಂದರ್ಯವನ್ನು ಕೆಡಿಸುತ್ತದೆ. ಹೀಗಾಗಿ ಎಂತಹ ಕವಿಯೇ ಆಗಿದ್ದರೂ ತನ್ನ ಕಾವ್ಯ ಸುಂದರವಾಗಿರಬೇಕೆಂದು

ಬಯಸಿದರೆ ಬೇರೆಯವರಿಂದ ಓದಿಸಿ ದೋಷಗಳನ್ನು ತಿದ್ದಿಕೊಳ್ಳಬೇಕೆಂಬ ಬೋಧನೆ ಪ್ರಸ್ತುತವೆನಿಸುತ್ತದೆ.

**ಮಾರ್ಗಕಾರ ಗುರುತಿಸಿದ ನಾಡಿನ ನಕ್ಷೆ**

ಕವಿರಾಜಮಾರ್ಗವು ನಾಡು-ನುಡಿ ಜನಪದದ ಬಗ್ಗೆ ಹೇಳುತ್ತದೆ. ಕೃತಿಯಲ್ಲಿ ಕನ್ನಡನಾಡಿನ ಭೌಗೋಳಿಕ ನಕ್ಷೆಯೂ ದಾಖಲಾಗಿದೆ. 'ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್' ಎನ್ನುವುದು ಮಾರ್ಗಕಾರನ ಗಡಿರೇಖೆ. ಕೆ.ವಿ. ಸುಬ್ಬಣ್ಣನವರ ಪ್ರಕಾರ ಇದು 'ಕವಿರಾಜ ಮಾರ್ಗ ಭೂಮಿಕೆಯ ಬೀಜ ಮಂತ್ರ'. (೨೦೦೯ ಪು.೫೨) ಎರಡು ನದಿಗಳ ನಿಶ್ಚಲ ರೇಖೆಗಳಲ್ಲಿ ನಾಡನ್ನು ಗುರುತಿಸುವ ಪ್ರಯತ್ನ ಇಲ್ಲಿದೆ. ಹೊಳೆಗಳನ್ನು ಬಿಟ್ಟು ಬದುಕು ಕಲ್ಪನಾತೀತ. ಕಾವೇರಿಯಿಂದ ಗೋದಾವರಿವರೆಗಿನ ನಾಡು ಎನ್ನುವಲ್ಲಿ ಮಾರ್ಗಕಾರನಿಗೂ ನದಿಗಳ ಮೂಲಕ ನಾಡನ್ನು ನೋಡುವ ಪ್ರಜ್ಞೆಯಿತ್ತು ಎನ್ನುವುದನ್ನು ಕಂಡುಕೊಳ್ಳಬಹುದು.

ಮಾರ್ಗಕಾರನು ಉಲ್ಲೇಖಿಸಿದ ಈ ಗಡಿರೇಖೆಯ ಸಾಲಿನಲ್ಲಿ 'ಇರ್ದ' ಮತ್ತು 'ಭಾವಿಸಿದ' (ಇರ್ದ ನಾಡದಾ ಕನ್ನಡದೊಳ್, ಭಾವಿಸಿದ ಜನಪದಂ) ಎಂಬ ಪದಗಳನ್ನು ಗಮನಿಸಬಹುದು. 'ಇರ್ದ' ಎಂದರೆ ಆ ಕಾಲದಲ್ಲಿ ಇದ್ದವುಗಳು. ಅವು ನಿರಂತರವಾಗಿ ಬದಲಾಗುತ್ತಾ ಬಂದಿವೆ. ಅದಕ್ಕಿಂತ ಮುಖ್ಯವಾದುದು 'ಭಾವಿಸಿದ ಜನಪದಂ' ಎಂಬುದು. ವಿವೇಕ ರೈ ಅವರ ಅಭಿಪ್ರಾಯದಂತೆ, ನಾವು ಯಾವುದೆಲ್ಲವನ್ನು ನಮ್ಮ ಭಾವಲೋಕದಲ್ಲಿ ಕನ್ನಡ ಎಂದು ತಿಳಿದುಕೊಳ್ಳುತ್ತೇವೆಯೋ ಅವೆಲ್ಲವೂ ಕನ್ನಡ ವಿಶ್ವದೊಳಗೆ ಅಡಕವಾಗುತ್ತವೆ. ಹೀಗೆ ಭಾವಿಸಿಕೊಳ್ಳದಿದ್ದರೆ ಕರ್ನಾಟಕದ ಒಳಗಿದ್ದೂ ನಾವು ಕನ್ನಡದವರಾಗಿ ಉಳಿಯುವುದಿಲ್ಲ. ಭೂಮಿ ಎನ್ನುವ ಮಂಡಲದಲ್ಲಿ ಸೇರಿಕೊಂಡಿರುವ ಕನ್ನಡನಾಡು ವಿಶಿಷ್ಟವಾದುದು ಎಂದು ಕವಿ ಹೇಳುವಾಗ ಆ ಕಾಲಕ್ಕಾಗಲೇ ಕನ್ನಡ ಮತ್ತು ಕನ್ನಡ ನಾಡು ತನ್ನದೇ ಆದ ಅನನ್ಯತೆಯನ್ನು, ಸ್ವಂತಿಕೆಯನ್ನು ಹೊಂದಿತ್ತು' (೨೦೧೩ ಪು ೧೩೯) ಎಂಬ ಮಾತು ಗಮನಾರ್ಹ.

ಈ ನಕ್ಷೆಯೊಳಗೆ ಗುರುತಿಸಲಾದ ಕಾವೇರಿ ಮತ್ತು ಗೋದಾವರಿ ನದಿಗಳು ಸಮುದಾಯದ ಮನಸ್ಸಿನ ಭಾವವಾಸ್ತವಗಳು. ಈ ಭಾವವಾಸ್ತವ ಕಲ್ಪಿಸಿಕೊಂಡ ಕರ್ನಾಟಕತ್ವವನ್ನು ಮೀರಿ ನಿಲ್ಲುತ್ತದೆ. ಸಾಮಾನ್ಯವಾಗಿ ಸೀಮೆಯನ್ನು ಗುರುತಿಸುವಾಗ ನಾಲ್ಕು ದಿಕ್ಕುಗಳ ವಿಶೇಷತೆಯನ್ನು ಗುರುತಿಸುವ ರೂಢಿಯಿದೆ. ಹೀಗಿದ್ದಾಗ ಈ ವಾಸ್ತವವನ್ನು ಮೀರಿ ನಿಲ್ಲುವ ಸಾಧ್ಯತೆಗಳು ಕಡಿಮೆ. ಆದರೆ ಮಾರ್ಗಕಾರನು ಕೇವಲ ಎರಡು ನದಿಗಳ ಹೆಸರನ್ನು ಮಾತ್ರ

ಗುರುತಿಸಿದ್ದಾನೆ. ಉಳಿದ ಭಾಗಗಳಲ್ಲಿ ಏನಿದೆಯೆಂಬ ಪ್ರಸ್ತಾಪವಿಲ್ಲ. ಈ ನದಿಗಳ ಯಾವ ಬಿಂದುವನ್ನು ಗಣಿಸಬೇಕೆಂಬ ಯೋಚನೆಯೂ ಇಲ್ಲ. ಅವು ಉದ್ದಕ್ಕೂ ಹರಿಯುವ ನದಿಗಳು. ಈ ಹರಿವಿನೊಳಗೆ ಎಲ್ಲಿಯವರೆಗೆ ಕನ್ನಡದ ಅಸ್ಮಿತೆಯಿದೆಯೆಂಬುದು ದಾಖಲಾಗಿಲ್ಲ. ಆದರೆ ಇದು ಸೀಮೆಯನ್ನು ಮೀರಿ ನಿಂತು ಕನ್ನಡತನ ವ್ಯಾಪಿಸಿಕೊಳ್ಳಬೇಕಾದ ಇರಾದೆಯನ್ನು ವ್ಯಕ್ತಪಡಿಸುತ್ತದೆ. ಕನ್ನಡ ಕಾವ್ಯ ಜಗತ್ತು ಇಂತಹ ವಿಶಾಲವಾದ ನಾಡೊಂದನ್ನು ಪ್ರತಿನಿಧೀಕರಿಸಿದೆ. ಎಲ್ಲಿದ್ದರೂ, ಹೇಗಿದ್ದರೂ, ಎಂದೆಂದಿಗೂ ಕನ್ನಡವಾಗುವ ರೀತಿಯನ್ನು ಕವಿಗಳು ಗುರುತಿಸಿಕೊಟ್ಟಿದ್ದಾರೆ.



ಮಾರ್ಗಕಾರನ ಈ ನಕ್ಷೆಯ ಮೂಲಕ ನಾಡಿನ ವಿಸ್ತಾರವನ್ನು ಗಮನಿಸಿಕೊಳ್ಳುವಾಗ ದಕ್ಷಿಣದ ಗಡಿಯ ವಿಚಾರದಲ್ಲಿ ಗೊಂದಲವಿಲ್ಲ. ಕಾವೇರಿ ಇಲ್ಲಿನ ಬಿಂದು. ಅಲ್ಲಿ ಯಾವುದೇ ಬದಲಾವಣೆಗಳಿಲ್ಲ. ಯಾವುದೇ ನಿರ್ದಿಷ್ಟ ಪ್ರದೇಶದ ಪ್ರಾಚೀನತೆಯನ್ನು ತಿಳಿಯುವುದಕ್ಕೆ ಮುಖ್ಯವಾದ ಆಕರ ಸಾಮಗ್ರಿಯೆಂದರೆ ಶಾಸನಗಳು. ಇವು ಸ್ಥಿರ ದಾಖಲೆಗಳು. ದಕ್ಷಿಣ ಮಹಾರಾಷ್ಟ್ರದ ಶಾಸನಗಳನ್ನು ಅಧ್ಯಯನ ಮಾಡಿದ ವಿದ್ವಾಂಸರ ಪ್ರಕಾರ ಕ್ರಿ.ಶ. ಸುಮಾರು ೧೦ನೇ ಶತಮಾನದ ವರೆಗೆ ಉತ್ತರದ ಗಡಿಯಲ್ಲಿ ಕನ್ನಡದ ಅಥವಾ ಮಾರಾಠಿ ಭಾಷೆಯ ಶಾಸನಗಳಿಲ್ಲ. ಅಲ್ಲಿದ್ದದ್ದು ಸಂಸ್ಕೃತ – ಪ್ರಾಕೃತದ ಶಾಸನಗಳು. ಇದು ಆ ಕಾಲ ಘಟ್ಟದ ರಾಜರ ಆಳ್ವಿಕೆಯ ಫಲಶ್ರುತಿ. ಕಾ.ವೆಂ. ಶ್ರೀನಿವಾಸಮೂರ್ತಿಯವರ ಅಧ್ಯಯನದ ಪ್ರಕಾರ, ಮಹಾರಾಷ್ಟ್ರದಲ್ಲಿ ಕ್ರಿ.ಶ. ೧೯೩೦ರವರೆಗೆ ಗುರುತಿಸಲಾದ ಶಾಸನಗಳ ಸಂಖ್ಯೆ ೯೨೦. ಇದರಲ್ಲಿ ೩೬ ಮರಾಠಿ ಮತ್ತು ೩೨೦ ಕನ್ನಡದಲ್ಲಿದೆ. ಈ ಶಾಸನಗಳು ವಿಶೇಷವಾಗಿ ಹರಡಿರುವುದು ಗೋದಾವರಿಯ ದಕ್ಷಿಣ ಪ್ರದೇಶದಲ್ಲಿ. ಈ ಪ್ರದೇಶದ ಜಿಲ್ಲೆಗಳು ದಕ್ಷಿಣ ಮಹಾರಾಷ್ಟ್ರದ ಕೊಲ್ಲಾಪುರ, ಸಾಂಗ್ಲಿ, ಸೊಲ್ಲಾಪುರ, ಉಸ್ಮಾನಾಬಾದ್ ಮತ್ತು ನಾಂದೇಡಾ ಜಿಲ್ಲೆಗಳಾಗಿವೆ. ಇವು ಕ್ರಮವಾಗಿ ಕರ್ನಾಟಕದ ಬೆಳಗಾವಿ, ಬಿಜಾಪುರ, ಕಲ್ಬುರ್ಗಿ ಮತ್ತು ಬೀದರ್‌ಗೆ ಹೊಂದಿಕೊಂಡಿವೆ. ಈ ಜಿಲ್ಲೆಗಳಿಗೆ ಹೊಂದಿಕೊಂಡ ಗೋದಾವರಿಯ ದಕ್ಷಿಣಭಾಗ ಕ್ರಿ.ಶ. ೧೩ನೇ ಶತಮಾನದವರೆಗೆ ಕನ್ನಡ ಸಂಸ್ಕೃತಿಯನ್ನು ಪೋಷಿಸುತ್ತಿತ್ತು ಎಂಬ ಮಾತು ಚಾರಿತ್ರಿಕವಾಗಿ ದೃಢಪಟ್ಟಿದೆ ಎಂಬುದನ್ನು ಗಮನಿಸಿಕೊಳ್ಳಬಹುದು. (೨೦೦೦ ಪು.೨೩)

**ತಿರುಳ್ಗನ್ನಡದ ನಕ್ಷೆ**

ಅದರೊಳಗಂ ಕಿಸುವೊಳಲಾ
ವಿದಿತಮಹಾಕೊಪಣ ನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪೊಂಕುಂದದ

ಇದು ಮಾರ್ಗಕಾರ ಗುರುತಿಸುವ ಅಚ್ಚಗನ್ನಡದ ಪ್ರದೇಶಗಳು. ಕಿಸುವೊಳಲು, ಕೊಪಣ, ಪುಲಿಗೆರೆ ಮತ್ತು ಒಂಕುಂದ ಎಂಬ ನಾಲ್ಕು ನೆಲಗುರುತುಗಳು ಇಲ್ಲಿವೆ. ಆದಿಶೇಷನೂ ಎಣಿಸಲಾರದಷ್ಟು ದೇಸಿಗಳನ್ನು ಹೊಂದಿರುವ ಕನ್ನಡ ನಾಡಿನ ಭಾಷಿಕ ವೈವಿಧ್ಯತೆಯ ನಡುವಿನ 'ತಿರುಳ್ಗನ್ನಡ'ದ ಪ್ರದೇಶಗಳು. ಇಲ್ಲಿ ತಿರುಳ್ಗನ್ನಡವೆಂದರೆ ಅಚ್ಚಗನ್ನಡವೆಂದು ಅರ್ಥೈಸಬಹುದು. ಇದು ನಿಜವಾದ ಕನ್ನಡ ಅಂದರೆ ಸಂಕರಗೊಳ್ಳದ ಶುದ್ಧವಾದ ಭಾಷೆ. ಮಾರ್ಗಕಾರನು ಕಾವೇರಿಯಿಂದ ಗೋದಾವರಿಯವರೆಗಿನ ನಾಡನ್ನು ಕನ್ನಡನಾಡೆಂದು ಗುರುತಿಸಿ ಈ ನಾಲ್ಕು ಪ್ರದೇಶಗಳನ್ನು ಮಾತ್ರ ತಿರುಳ್ಗನ್ನಡದ ಪ್ರದೇಶಗಳಾಗಿ ಗುರುತಿಸಿದ ಹಿನ್ನೆಲೆಯನ್ನು ಗಮನಿಸಿದಾಗ, ಗಮನಕ್ಕೆ ಬರುವುದು 'ತಿರುಳ್' ಎಂಬ ವಿಶೇಷಣ. 'ತಿರುಳ್' ಎನ್ನುವುದು ವಸ್ತುವಿನ ಒಳಗಿನ ಮುಖ್ಯಭಾಗವನ್ನು ಗುರುತಿಸುತ್ತದೆ. ವಸ್ತುವಿನ ಸತ್ವವಿರುವುದು ತಿರುಳಿನಲ್ಲಿ. ಈ ನಾಲ್ಕು ಪ್ರದೇಶಗಳೂ ಕವಿ ಹೇಳುವ ಕನ್ನಡ ಭಾಷಾ ಗಡಿಗಳ ಮಧ್ಯದಲ್ಲಿದೆ. ಯಾವತ್ತೂ ಭಾಷಾ ಸಂಕರಕ್ಕೆ ಬಹಳ ಬೇಗ ಒಳಗಾಗುವುದು ಗಡಿ ಪ್ರದೇಶಗಳು. ಈ ನಿಟ್ಟಿನಿಂದ ಇಲ್ಲಿ ಗುರುತಿಸಲಾದ ಭಾಗಗಳನ್ನು ಭಾಷಾಸಂಕರದಿಂದ ಮುಕ್ತವಾದ ವಲಯವಾಗಿ ಪರಿಗಣಿಸಬಹುದು. ಈ ಕುರಿತು ಚರ್ಚಿಸಿದ ಜಯಪ್ರಕಾಶ ಶೆಟ್ಟಿಯವರು, 'ಮಾರ್ಗಕಾರನು ಸಂಸ್ಕೃತದ ಸಾಂಸ್ಕೃತಿಕ ವಸಾಹತೀಕರಣದ ವಿರುದ್ಧವಾದ ಕನ್ನಡದ ಎಚ್ಚರದ ಭಾಗವಾಗಿಯೂ ಈ 'ತಿರುಳ'ನ್ನು ಬಳಸಿರಬಹುದು'. (೨೦೧೪ ಪು.೨೮೦) ಎನ್ನುತ್ತಾರೆ. ಯಾಕೆಂದರೆ ಅನ್ಯಭಾಷೆಯ ಯಾಜಮಾನ್ಯವನ್ನು ಕನ್ನಡ ಕಾಲಕಾಲಕ್ಕೆ ಪ್ರತಿರೋಧಿಸುತ್ತಲೇ ಬಂದಿದೆ.

ಮಾರ್ಗಕಾರನು ಸಮನ್ವಯ ದೃಷ್ಟಿಯುಳ್ಳವನು. 'ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ' ಎನ್ನುವುದು ಕವಿಯ ಮಾತು. ಪರವಿಚಾರ ಮತ್ತು ಪರಧರ್ಮವನ್ನು ಸಹಿಸಿಕೊಳ್ಳುವುದಾದರೆ ಅದು 'ಕಸವರ', ಅರ್ಥಾತ್ ಚಿನ್ನ. ಇಂತಹ ಸಹನಾಗುಣ ಆ ಕಾಲದಲ್ಲಿ ಕವಿಕಂಡದ್ದು. ಕವಿಗಳ ಮಾತ್ರವಲ್ಲ ಆಳುವವರ ಮನಸ್ಸು ಕೂಡಾ ಸಮನ್ವಯದೆಡೆಗೇ ಇತ್ತೆಂಬುದನ್ನು ಗುರುತಿಸಿಕೊಳ್ಳಬಹುದು. ಬಹುಧರ್ಮಗಳ ನೆಲೆವೀಡು ನಮ್ಮನಾಡು. ಕೆಲವೊಮ್ಮೆ ಸಂಘರ್ಷಗಳು ಕಂಡುಬಂದರೂ ಮನಸ್ಸು ತಿಳಿಯಾಗಿ ಹೊಂದಾಣಿಕೆಯಿಂದ ಬಾಳುವ ಪರಿ ಗೋಚರವಾಗುವಂತದ್ದು. ಮಾರ್ಗಕಾರನ ಪ್ರಕಾರ, ಪರಧರ್ಮ ಸಹಿಷ್ಣುತೆ ಮತ್ತು ಪರವಿಚಾರ ಸಹಿಷ್ಣುತೆ ಎಂಬುದೇ ಕಸವರ. ಇದು ಕವಿ ಗುರುತಿಸಿದ ನಾಡಿನ ನೀತಿಯೂ ಆಗಿದೆ.

ಕನ್ನಡಿಗರ ಸ್ವಭಾವವನ್ನು ಕವಿರಾಜಮಾರ್ಗ ಗುರುತಿಸಿದೆ. ನಾಡಿನ ಜನರಿಗೆ ಜನ್ಮದತ್ತವಾಗಿಯೇ ಕಾವ್ಯದ ಸಂವೇದನೆಯಿದೆಯೆಂಬ ಅಭಿಪ್ರಾಯ ಇಲ್ಲಿದೆ.

ಪದನರಿದು ನುಡಿಯಲು ನುಡಿ
ದುದನರಿದಾರಯಲು ಮಾರ್ಪರ್ರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ (೧-೩೮)

ಇದು ಕವಿ ಗುರುತಿಸಿದ ಕನ್ನಡಿಗರ ಚಾತುರ್ಯ. ಈ ನಾಡಿನ ಜನರು ಕ್ರಮವರಿತು ನುಡಿಯುವುದರಲ್ಲಿಯೂ, ನುಡಿದುದನ್ನು ತಿಳಿದುಕೊಳ್ಳುವುದರಲ್ಲಿಯೂ ಸಮರ್ಥರು. ಸ್ವಭಾವತಃ ಅವರು ಚದುರರು. ಉದ್ದೇಶ ಪೂರ್ವಕವಾಗಿ ಅಧ್ಯಯನ ಮಾಡದಿದ್ದರೂ, ಕಾವ್ಯ ಪ್ರಯೋಗದಲ್ಲಿ ಪರಿಣತರು. ಮಾರ್ಗಕಾರನ ಈ ಪ್ರಶಂಸೆ ಕನ್ನಡಿಗರು ಹೆಮ್ಮೆ ಪಡುವಂತದ್ದೇ ಆಗಿದೆ. ಹೊಗಳಿಕೆ ಎಲ್ಲ ಕಾಲಕ್ಕೂ ಸಲ್ಲುವಂತದ್ದೇ. ಆದರೆ ಈ ಸ್ವಭಾವ ಚಿತ್ರಣದಲ್ಲಿ ಒಂದು ಸಮುದಾಯದ ಭಾಷೆಯ ವ್ಯಾವಹಾರಿಕ ನೆಲೆ ಮಾತ್ರವಲ್ಲ, ಅದರಾಚೆಗಿನ ಪ್ರಯೋಗ ಸಿದ್ಧಿಯ ನೆಲೆಯನ್ನು ಗುರುತಿಸಲಾಗಿದೆ. ಹಾಗಾಗಿಯೇ ಅವರು 'ಚದುರರ್' ಎಂಬ ಮಾತು. ಮುಂದಿನ ನಾಲ್ಕು ಪದ್ಯಗಳಲ್ಲಿ ಕನ್ನಡಿಗರ ಗುಣಸ್ವಭಾವದ ಚಿತ್ರಣವಿದೆ. ವಿದ್ಯಾವಂತರು ಮಾತ್ರವಲ್ಲ. ಉಳಿದವರೂ ಸಹ ತಮ್ಮ ತಮ್ಮ ಮಾತಿನಲ್ಲಿ ಜಾಣರು. ಚಿಕ್ಕ ಮಕ್ಕಳೂ, ಹುಟ್ಟು ಮೂಗರೂ ಸಹ ವಿವೇಕವನ್ನು ತಿಳಿಸಬಲ್ಲರು. ಜಾಣರಲ್ಲದವರೂ ಕೂಡಾ ಅಭ್ಯಾಸಶೀಲರು. ಕೃತಿಯ ಸಣ್ಣ ದೋಷವನ್ನು ಗುರುತಿಸಿ ಕೃತಿಯನ್ನು ದೂಷಿಸುವವರು. ಸಂಸ್ಕೃತ ಮತ್ತು ಪ್ರಾಕೃತದ ಜ್ಞಾನವುಳ್ಳವರು. ಕನ್ನಡದ ಗುರುಗಳು ಸಂಸ್ಕೃತ – ಪ್ರಾಕೃತ ಪಂಡಿತರಷ್ಟು ಜ್ಞಾನವಂತರಲ್ಲದಿದ್ದರೂ ಕನ್ನಡಕ್ಕೆ ಅವರೇ ಓಜರು. ಇವಿಷ್ಟು ಮಾರ್ಗಕಾರ ಗುರುತಿಸಿಕೊಟ್ಟ ಕನ್ನಡಿಗರ ಗುಣ. ಈ ಸಂಗತಿಗಳೆಲ್ಲ ಒಂದು ಲಕ್ಷಣ ಗ್ರಂಥಕ್ಕೆ ಎಷ್ಟು ಪ್ರಸ್ತುತವೋ ತಿಳಿಯದು. ಆದರೆ ಈ ಪ್ರಶಂಸೆ ಶ್ರೀವಿಜಯನ ನಾಡು-ನುಡಿಯ ಅಭಿಮಾನದಿಂದ ಅನಾವರಣಗೊಂಡದ್ದು ಎಂಬುದರಲ್ಲಿ ಸಂದೇಹವಿಲ್ಲ.

ಮಾರ್ಗಕಾರನಿಗೆ ಸಂಸ್ಕೃತದ ಬಗೆಗೆ ಯಾವುದೇ ತಕರಾರಿಲ್ಲ. ಕನ್ನಡ-ಸಂಸ್ಕೃತದ ಬಾಂಧವ್ಯವನ್ನು ಕುರಿತಾಗಿ ಕವಿ ಪ್ರಸ್ತಾಪಿಸಿದ್ದಾನೆ.

ನುಡಿಗಳೊಡಂಬಡಲ್ ಬಗೆದವೋಲ್ ಬಗೆಯಂ
ಮಿಗಲ್ ಈಯದೊಂದು ನಾಳ್ನುಡಿಯ ಬೆಡಂಗೆ

ಕನ್ನಡದ ಮಾತಿನೊಳಾವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳಂ ಪದಂಪವಣಾಗಿರೆ ಮೆಲ್ಪುವೆತ್ತು (೧- ೧೪೯)

ಕಾವ್ಯರಚನೆಯ ಕ್ರಮದ ವಿವರವಾದ ಗ್ರಹಿಕೆಯನ್ನು ಈ ಸಾಲುಗಳು ಗುರುತಿಸಿಕೊಡುತ್ತವೆ. ಕಾವ್ಯದಲ್ಲಿ ಬಳಸುವ ಪದಗಳಲ್ಲಿ ಹೊಂದಾಣಿಕೆಯಿರಬೇಕು. ಈ ಹೊಂದಾಣಿಕೆಯಿಂದ ಕವಿಯ ಭಾವ ಅರ್ಥಪೂರ್ಣವಾಗಿ ಅನಾವರಣಗೊಳ್ಳಬೇಕು. ಅಂತಹಾ ಕನ್ನಡದ ಮಾತುಗಳಲ್ಲಿ 'ನಾಳ್ನುಡಿಯ ಬೆಡಗೂ' ಇರಬೇಕು. ಇದು 'ಆಡುಮಾತಿ'ನ ಅಥವಾ 'ದೇಸಿ'ಯ ನೆಲೆಯನ್ನು ಗುರುತಿಸುತ್ತದೆ. ಕನ್ನಡ ನುಡಿಯೊಂದಿಗಿನ ಸಂಸ್ಕೃತ ಪದಗಳ ಬಳಕೆ ಕರ್ಕಶವಾಗಿರದೆ 'ಮೆಲ್ಪುವೆತ್ತಿರಬೇಕು'. ಅವುಗಳ ಪ್ರಮಾಣವೂ ಮಿತವಾಗಿರಬೇಕು. ಬಳ್ಳಿಯೊಂದು ಚಿಗುರಿ ವಿಸ್ತಾರಗೊಂಡಂತೆ ಕಾವ್ಯದ ಲಯವಿರಬೇಕು. ಇದು ಮಾರ್ಗಕಾರನ ಅಭಿಮತ.

ಮಾರ್ಗಕಾರನಿಗೆ ಸಂಸ್ಕೃತದ ಬಗೆಗೆ ಅಭಿಮಾನ ಮತ್ತು ಕನ್ನಡದ ಬಗೆಗಿನ ಪ್ರೀತಿಗೆ ಈ ಮೇಲಿನ ಮಾತುಗಳೇ ನಿದರ್ಶನ. ಸಂಸ್ಕೃತವನ್ನು ಬಿಟ್ಟು ಕನ್ನಡ ಬೆಳೆಯಲಾರದು. ಅದರ ಸತ್ವವನ್ನು ತನ್ನಲ್ಲಿ ತುಂಬಿಕೊಂಡು ಬೆಳೆಯುವುದಕ್ಕೆ ಆಕ್ಷೇಪವಿಲ್ಲ. ಜಿ.ಎಸ್. ಶಿವರುದ್ರಪ್ಪ ಅವರು ಈ ಕುರಿತು ಚರ್ಚಿಸುತ್ತಾ, 'ಕನ್ನಡದ ಆರಂಭಕಾಲದ ಕವಿರಾಜಮಾರ್ಗಕಾರನಿಗೆ, ಸಂಸ್ಕೃತದ ಕಾವ್ಯ ಪರಂಪರೆಯ ಹಿನ್ನೆಲೆಯಿಂದ ಕನ್ನಡ ಕಾವ್ಯ ರೂಪು ತಾಳುತ್ತಿದ್ದ ಸಂದರ್ಭದಲ್ಲಿ ತನ್ನ ಸಾಮಾಜಿಕ ಪರಿಸರದಲ್ಲಿ 'ನಾಳ್ನುಡಿ' ಅಥವಾ ಜನರಾಡುವ ಭಾಷೆಯಿದೆ, ಅದರಲ್ಲಿ ಒಂದು 'ಬೆಡಂಗು' ಇದೆ, ಕಾವ್ಯರಚನೆಯಲ್ಲಿ ಈ ಬೆಡಂಗು ಸೇರಬೇಕು ಎನ್ನುವ ಎಚ್ಚರ ಇದ್ದುದು ಮೆಚ್ಚಬೇಕಾದ ಸಂಗತಿ' ಎನ್ನುತ್ತಾರೆ. (೧೯೩ ಪು.೯೬) ಕಾವ್ಯ ಭಾಷೆಯ ಬಗೆಗೆ ಮಾರ್ಗಕಾರನಿಗೆ ಒಂದು ಸ್ಪಷ್ಟತೆಯಿತ್ತು ಹಾಗೂ ಅಲ್ಲಿರುವ ದೇಸೀತನದ ಮೂಲಕ ಅದು ಪಾಂಡಿತ್ಯವಿಲ್ಲದವರನ್ನೂ ತಲುಪಬೇಕೆಂಬ ಆಶಯ ವ್ಯಕ್ತಗೊಂಡದ್ದನ್ನು ಗಮನಿಸಬಹುದು.

ಒಟ್ಟಿನಲ್ಲಿ 'ಕವಿರಾಜಮಾರ್ಗ'ದಲ್ಲಿ ಗಮನಿಸಬಹುದಾದ ಮುಖ್ಯ ಸಂಗತಿಗಳೆಂದರೆ, ಎರಡು ನದಿಗಳ ಮೂಲಕ ನಾಡಿನ ನಕ್ಷೆಯನ್ನು ಬರೆದು, ಭಾಷಾ ಪ್ರಬೇಧಗಳ ಕುರಿತು ಪ್ರಸ್ತಾಪಿಸಿ, ನಾಡು-ನುಡಿಯ ಅಭಿಮಾನವನ್ನು ಗುರುತಿಸಿಕೊಟ್ಟ ಮೊದಲ ಅಲಂಕಾರ ಗ್ರಂಥವಾಗಿ ಇದು ಕನ್ನಡಿಗರ ಮನಸ್ಸನ್ನು ಆವರಿಸಿದೆ ಮತ್ತು ಮನ್ನಣೆಗೆ ಪಾತ್ರವಾಗಿದೆ. ಟಿ.ಆರ್.ಶರ್ಮಾ ಅವರ ಮಾತುಗಳನ್ನು ನೆನಪಿಸಿಕೊಳ್ಳುವುದಾದರೆ, 'ಈ ನೆಲೆ, ಈ ಜನ, ಕಾವ್ಯ ಎಲ್ಲ ಒಂದು ಪ್ರಭಾವಲಯದೊಳಗೆ ಸೇರಿ ಕನ್ನಡ ಸಂಸ್ಕೃತಿಯನ್ನು ಕಟ್ಟುವ ಕ್ರಿಯೆಯನ್ನು ಮಾಡಿವೆ. ಒಬ್ಬ ಕೃತಿಕಾರ ಒಂದು ಭಾಷಾ ಪರಿವಾರವನ್ನು ನಿರ್ಮಿಸಿ ಅದಕ್ಕೊಂದು ಐತಿಹ್ಯ ಕಲ್ಪಿಸಿ, ಒಂದು

ಸಾಹಿತ್ಯ ಚರಿತ್ರೆಯನ್ನು ರಚಿಸಿ, ಭಾಷೆಗೆ ಸಾಂಸ್ಕೃತಿಕ ಸಾರೂಪ್ಯವನ್ನು ನೀಡಿದ ಸಂದರ್ಭವನ್ನು ಇಲ್ಲಿ ಕಾಣಬಹುದು. ಇದೇ ಶ್ರೀವಿಜಯ ಕನ್ನಡ ಸಂಸ್ಕೃತಿಗೆ ನೀಡಿದ ವಿಶಿಷ್ಟ ಕೊಡುಗೆ'ಯೆಂಬುದನ್ನು ಅರ್ಥೈಸಿಕೊಳ್ಳಬಹುದಾಗಿದೆ. (೨೦೦೩ ಪು.೧೯)

**ಆದಿಪುರಾಣ**

ಇದು ಜೀವನ ಪ್ರೀತಿ ಮತ್ತು ವೈರಾಗ್ಯ ಎರಡನ್ನೂ ಗುರುತಿಸಿಕೊಡುವ ಕಾವ್ಯ. ಆದಿಪುರಾಣದಲ್ಲಿ ಕವಿ ನಾಡು-ನುಡಿಯ ಕುರಿತಾದ ಯಾವುದೇ ಉದ್ಘೋಷವನ್ನು ಮಾಡಿಲ್ಲವಾದರೂ ಬೇರೆ ಬೇರೆ ಸಂದರ್ಭಗಳಲ್ಲಿ ಈ ಅಭಿಮಾನ ಪ್ರಕಟಗೊಂಡದ್ದನ್ನು ಕಾಣಬಹುದು. ಸಂಸ್ಕೃತದ ವಾರಿಧಿಯನ್ನು ಈಸುವುದಕ್ಕೆ ಹೊರಟ ಪಂಪ ಪ್ರಾದೇಶಿಕ ಸತ್ವವನ್ನು ಕಾಯ್ದುಕೊಳ್ಳುವಲ್ಲಿ ನಿಷ್ಣಾತನಾಗಿದ್ದನೆಂಬ ಸತ್ಯವನ್ನು ಕಾವ್ಯಗಳ ಓದಿನಿಂದ ತಿಳಿಯಬಹುದು. ಸ್ಥಳೀಯತೆಯನ್ನು ಅರ್ಥೈಸಿಕೊಳ್ಳುವ, ಗ್ರಹಿಸುವ ಮತ್ತು ಅದನ್ನು ತನ್ನ ಕಾವ್ಯದಲ್ಲಿ ಕಂಡರಿಸುವ ಕೆಲಸವನ್ನು ಅನೇಕ ಸಂದರ್ಭಗಳಲ್ಲಿ ಪಂಪ ಮಾಡಿದ್ದಾನೆ. ಧಾರ್ಮಿಕ ಸಂಗತಿಗಳನ್ನು ಹೇಳಹೊರಟ ಕಾವ್ಯ ಇದಾದರೂ ಇಲ್ಲಿ ಪಂಪನ ಕವಿ ಮನಸ್ಸು, ಕಾವ್ಯ ಚೇತನ ಪ್ರಕೃತಿಯ ಸಂಗತಿಗಳಿಗೂ ಮನ್ನಣೆ ನೀಡಿದೆ.

'ಆದಿಪುರಾಣ'ದಲ್ಲಿ ಪಂಪನ ಪುಷ್ಪೋದ್ಯಾನ ಓದುಗರನ್ನು ಮೈಮರೆಸುತ್ತದೆ. ಭೋಗದ ಕತೆಯೊಂದಿಗೆ ಇಣುಕು ಹಾಕುವ ಈ ಪುಷ್ಪೋದ್ಯಾನ ಪಂಪನ ಪರಿಸರ ಪ್ರೇಮಕ್ಕೆ ಸಾಕ್ಷಿಯಾಗುತ್ತದೆ. 'ಆದಿಪುರಾಣ'ದ ಭರತನ ರಾಣಿಯರು ಹೂಗಳನ್ನು ಬಿಡಿಸುತ್ತಾ, ಅವುಗಳ ಜೊತೆ ಸಂವಾದಿಸುತ್ತಾ ಮೈಮರೆತ ಸನ್ನಿವೇಶ ನೂತನವಾದುದು. ವನಲಕ್ಷ್ಮಿಯ ಸರ್ವ ಋತುವಿನ ಸೌಂದರ್ಯವನ್ನು ಸವಿದ ರಾಜ್ಯಲಕ್ಷ್ಮಿಯ ಒಡೆಯ ಆನಂದವನ್ನನುಭವಿಸುವ ಪರಿ ವರ್ಣನಾತೀತ.

ಈ ಸಂದರ್ಭದಲ್ಲಿ ಪಂಪ ಗುರುತಿಸಿಕೊಡುವ ಹೂವುಗಳು ಕನ್ನಡ ಜನರ ಪ್ರೀತಿಯ ಹೂಗಳೇ ಆಗಿವೆ. ಅರಳಿದ ಹೂಗಳ ಸೌಂದರ್ಯಕ್ಕೂ, ಸೌರಭಕ್ಕೂ ಮರುಳಾಗದ ಮಂದಿಯಿಲ್ಲ. ದಿಗ್ವಿಜಯ ಹೊರಟ ರಾಜ ಇಂತಹ ಪ್ರಕೃತಿಯಲ್ಲಿ ತನ್ನ ಪರಿವಾರದ ಜೊತೆಯಲ್ಲಿ ತಲ್ಲೀನನಾಗುವುದೇ ಪಂಪನ ಹೊಸ ಸೃಷ್ಟಿ. ಜಲ ಕೇಳಿಗೆ ಹೊರಟ ಸ್ತ್ರೀಸಮೂಹಕ್ಕೆ ವನವನ್ನು ಪ್ರವೇಶಿಸುವ ಬಯಕೆ. ಇವರನ್ನು ಅಂತಃಪುರದ ಸ್ತ್ರೀಯರು ಎನ್ನುವುದಕ್ಕಿಂತಲೂ ಹೆಚ್ಚಾಗಿ ಸಾಮಾನ್ಯ ಹೆಣ್ಣು ಮಕ್ಕಳೆಂಬ ಗ್ರಹಿಕೆಯಿಂದ ಕಾವ್ಯದ ಈ ಭಾಗವನ್ನು ಓದಿದಾಗ ಹೆಣ್ಣು ಮತ್ತು ಹೂವಿನ ಆತ್ಮೀಯ ಸಂಬಂಧ ಕಾಣಿಸಿಕೊಳ್ಳುತ್ತದೆ.

ಮನುಷ್ಯರು ಒಂದು ಕ್ಷಣ ಎಲ್ಲ ಸಂಕಟಗಳನ್ನು ಮರೆತು ಮೈಮರೆಯುವುದೆಂದರೆ, ಅದು ಪ್ರಕೃತಿಯಲ್ಲಿ. ಬಿಸಿಲನ್ನು ಲೆಕ್ಕಿಸದೆ ಬೆವರಿನಿಂದ ತೊಯ್ದು ಭರತನ ಸ್ತ್ರೀಯರು ಪ್ರಕೃತಿಯಲ್ಲಿ ಬೆರೆತು ಹೋಗುತ್ತಾರೆ. ದಣಿದ ದೇಹಕ್ಕೆ ಆಮೋದ ನೀಡುವಲ್ಲಿ ಅರಮನೆಯ ಉದ್ಯಾನವನಗಳ ಪಾತ್ರ ಹಿರಿದಾದುದು. ಆದರೆ ಇಲ್ಲಿ ದಾರಿಮಧ್ಯದಲ್ಲಿ ವನರಾಶಿ ಆ ಕೆಲಸವನ್ನು ಮಾಡಿದೆ.

ಪ್ರಯಾಣದ ಬಳಲಿಕೆಯಿಂದ ಸ್ತ್ರೀಯರ ನಗೆಮೊಗಗಳು ಸೊರಗಿ ಹೋಗಿದ್ದುವು. ಬಳ್ಳಿಯಂತಿರುವ ದೇಹಗಳು ಬಾಡಿ ಹೋಗಿದ್ದುವು. ತಲೆಯುಡುಗೆಗಳು ಅಸ್ತವ್ಯಸ್ತವಾಗಿದ್ದುವು. ಹೂಮಾಲೆಗಳು ಬಾಡಿ ಕೂದಲುಗಂಟು ಸಡಿಲವಾಗಿತ್ತು. ಬಳಲಿಕೆಯಿಂದ ಸ್ತ್ರೀ ಜನರು ನಿಂತು ನಿಂತು ನಡೆಯುತ್ತಿದ್ದರು. ಯಾವಾಗ ಸಮೃದ್ಧವಾದ ಸಸ್ಯರಾಶಿ ಕಾಣಿಸಿತೋ ಆಗ ಹೆಜ್ಜೆಗಳು ಚುರುಕಾದುವು.

ಅಂತಃಪುರದ ರಾಣಿಯರ ಹೂವಿನ ಬಗೆಗಿನ ಭಿನ್ನರುಚಿ ದಾಖಲಾಗುತ್ತದೆ. ಒಬ್ಬಳಿಗೆ ಚಂಪಕ, ಇನ್ನೊಬ್ಬಳಿಗೆ ಉತ್ಪಲ, ಮತ್ತೊಬ್ಬಳಿಗೆ ಬಕುಳ, ಮಗದೊಬ್ಬಳಿಗೆ ಗೊಜ್ಜುಗೆಯ ಹೂವು. ಈ ಎಲ್ಲ ಸಂಗತಿಗಳ ಜೊತೆ ಅಲ್ಲಿ ಅರಳಿದ ಎಲ್ಲ ಹೂಗಳನ್ನು ಕವಿ ಹೆಸರಿಸುತ್ತಾನೆ. ಪಾದರಿ, ಜಾಜಿ, ಮಲ್ಲಿಗೆ, ಸಂಪಿಗೆ, ಗೊಜ್ಜಗೆ, ಕರ್ಣಿಕಾರ, ಪಾಟಲಿ, ಸುರಹೊನ್ನೆ, ಕೇದಗೆ, ಕನ್ನೈದಿಲೆ, ಮಾತ್ರವಲ್ಲ ಹಲಸು, ಮಾವು, ಬಾಳೆ, ಕಿತ್ತಳೆ, ತೆಂಗು ಇವುಗಳನ್ನೆಲ್ಲಾ ಆಶ್ರಯಿಸಿ ಬರುವ ದುಂಬಿವಿಂಡು, ಕೋಗಿಲೆಗಳ ಸಮೂಹ, ಗಿಳಿಗಳ ಬಳಗ ಅಲ್ಲಿ ಒಂದು ನೂತನ ಪ್ರಪಂಚವನ್ನೇ ನಿರ್ಮಾಣ ಮಾಡಿವೆ. ಇಂತಹಾ ಪ್ರಪಂಚದಲ್ಲಿ ಕವಿ ಮೈಮರೆತು ವರ್ಣಿಸುವುದು ಮಾವು ಮತ್ತು ಮಲ್ಲಿಗೆಯನ್ನು ಪ್ರಮದೆಯೊಬ್ಬಳು ಮಾವಿನ ಮರವನ್ನು ತಬ್ಬಿಕೊಂಡು,

ತಳಿರೊಳ್ ನೀನೆ ಬೆಡಂಗನ್ನೈ
ನನೆಗಳೊಳ್ ನೀಂ ನೀಱನ್ನೈ
ಪುಷ್ಪಸಂಕುಲದೊಳ್ ನೀನೆ ವಿಲಾಸಿಯೈ
ಮಿಡಿಗಳೊಳ್ ನೀಂ ಚೆಲ್ವನ್ನೈ
ಪಣ್ತಪಣ್ಗಳಿನೋವೋ ಪೆಱತೇನೋ ನೀನೇ
ಭುವನಕ್ಕಾರಾಧ್ಯನ್ನೈ, ಭೃಂಗಕೋಕಿಳ
ಚೂತರಾಜಾ ತರುಗಳ್ ನಿನ್ನಂತೆ ಚೆನ್ನಂಗಳೇ (೧೧-೯೮)

ಮನುಷ್ಯರಿಗೆ ಮಾವಿನ ಮರ ನೆನಪಾಗುವುದು ಅದು ಹಣ್ಣು ಬಿಡುವ ಸಂದರ್ಭದಲ್ಲಿ ಮಾತ್ರ. ಮಿಡಿ, ಹಣ್ಣು, ಎಲೆಗಳ (ಶುಭಸಂದರ್ಭಗಳಲ್ಲಿ ಎಲೆಯ ತೋರಣ) ಪ್ರಯೋಜನವನ್ನು

ಪಡೆದ ಮೇಲೆ ಅದರ ನೆನಪಿರುವುದಿಲ್ಲ. ಆದರೆ ಪಂಪನ ಈ ಪದ್ಯವನ್ನು ಓದಿದಾಗ ತಳಿರು, ನೆನೆ, ಹೂ, ಮಿಡಿ, ಕಾಯಿ, ಹಣ್ಣುಗಳಿಂದ ಕೂಡಿದ ಇದು ಉಳಿದ ಮರಗಳಿಗಿಂತ ಶ್ರೇಷ್ಠವಾಗಿ ನಿಲ್ಲುತ್ತದೆ. ಹಾಗಾಗಿಯೇ ಮಾವು 'ಭುವನಕ್ಕೆ ಆರಾಧ್ಯ'ವೆಂಬ ಮತ್ತು 'ತರುಗಳ್ ನಿನ್ನಂತೆ ಚೆನ್ನಂಗಳೇ' ಎಂಬ ಉದ್ಗಾರ.

ನಾಡಿನಲ್ಲಿ ಪಂಪನ ಮೆಚ್ಚುಗೆಗೆ ಪಾತ್ರವಾದ ಹೂವೆಂದರೆ ಮಲ್ಲಿಗೆ. ಈ ಹೂವಿನ ಮಾಧುರ್ಯವನ್ನು ವಸಂತನ ಮೂಲಕ ಕವಿ ಹೇಳಿಸುತ್ತಾನೆ. 'ಕಾಮನೊಡ್ಡೋಲಗದೊಳ್ ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೊಗಳ್ದುಂ ತಣಿಯನೆ ಮದನನುಂ ಮಲ್ಲಿಗೆಯಂ' (೧೧-೩೦) ಇಲ್ಲಿ ಮದನ ಹೂಗಳನ್ನು ವಿಮರ್ಶಿಸುತ್ತಿದ್ದಾನೆ. ಒಂದೊಂದು ಹೂವಿನ ಬಗೆಗೆ ಒಂದೊಂದು ಆರೋಪ. ಜಾಜಿ ಸೊಡರ ಬೆಳಕಿಗೆ ಬಾಡಿ ಹೋಗುತ್ತದೆ. ಸಂಪಿಗೆಯ ಬಗ್ಗೆ ದುಂಬಿಗಳಿಗೆ ಆಕರ್ಷಣೆಯಿಲ್ಲ. ವಸಂತನು ಮಲ್ಲಿಗೆಯನ್ನು ಹೊಗಳಿ ಹೊಗಳಿ ತಣಿಯಲಾರದವನಾಗಿದ್ದಾನೆ. ಎಲ್ಲರ ಮೆಚ್ಚುಗೆಯನ್ನು ಪಡೆಯುವ ಅರ್ಹತೆ ಮಲ್ಲಿಗೆಗಿದೆ. ಸುರಹೊನ್ನೆಯ ಬಗೆಗೂ ಕವಿಗೆ ಪ್ರೀತಿಯಿದೆ. 'ಪೂಗಳೊಳ್ ಏಂ ಸುರಹೊನ್ನೆ ಚನ್ನನೇ' ಎನ್ನುತ್ತದೆ ಕವಿ ಮನಸ್ಸು. ಒಟ್ಟಿನಲ್ಲಿ ಪುಷ್ಪ ಪ್ರಪಂಚ ಆಕರ್ಷಣೆಯ ಕೇಂದ್ರವಾಗಿ ಕಾಣಿಸಿಕೊಂಡಿದೆ.

ಪಂಪ ಪರಿಸರದ ಉನ್ನತಿಯನ್ನು ಬಯಸುವ ಕವಿ. ಹಾಗಾಗಿ ತಮ್ಮ ಆನಂದಕ್ಕಾಗಿ, ಅಲಂಕಾರಕ್ಕಾಗಿ ಚಿಗುರುಗಳನ್ನು, ಹೂಗಳನ್ನು ಕಿತ್ತ ಅಂತಃಪುರದ ಸ್ತ್ರೀಯರು ಕ್ಷಮೆಯಾಚಿಸುವಂತೆ ಮಾಡಿದ್ದಾನೆ. ನಾನಾ ವಿಧದ ಆಟಗಳಿಂದ ಉಪವನ ಕ್ರೀಡೆಯನ್ನು ನಡೆಸಿದ ಸ್ತ್ರೀಯರು, 'ಮರೆಯಿರೆಮ್ಮ ಮದೋತ್ಕಟ ಚೇಷ್ಟಿತಂಗಳಂ' ಎನ್ನುತ್ತಾ ಕ್ಷಮೆಯಾಚಿಸುತ್ತಾರೆ. ಬಾಲಚೂತವನ್ನು ಕುರಿತು 'ಮೊಗ್ಗುಗಳ ಕುಚ್ಚನ್ನೂ, ತಳಿರ ಗೊಂಚಲನ್ನೂ, ಸುಂದರವಾಗಿ ಆಡುತ್ತಿರುವ ಕೊಂಬೆಗಳಲ್ಲಿನ ಮಿಡಿ ಕಾಯಿಗಳನ್ನೂ ಪ್ರೀತಿಸದೆ, ರಕ್ಷಿಸದೆ ಸೊನೆ ಸುರಿಯುವಂತೆ ಹಿಂಸಾಚಾರಗಳಿಂದ ತರಿದು ನೋಯಿಸಿ ಕಾಡಿಸಿದೆವು. ಎಲೆ ಬಾಲಚೂತ! ಈ ಎಲ್ಲ ಅಪರಾಧಗಳನ್ನೂ ಮನಸ್ಸಿಗೆ ತಂದುಕೊಳ್ಳದೆ ನಾವೂ ನೀನೂ ಜೊತೆಯಲ್ಲಿದ್ದುನ್ನು ಮಾತ್ರ ಸ್ಮರಿಸಿಕೋ' ಎನ್ನುವ ಬಗೆಗಿನ ಪಶ್ಚಾತ್ತಾಪದ ಧ್ವನಿ ಮನಸ್ಸನ್ನು ಆರ್ದ್ರಗೊಳಿಸುವಂತಿದೆ. ಪ್ರಕೃತಿನಾಶ ಎಲ್ಲ ಕಾಲಕ್ಕೂ ಕಾಣಿಸಿಕೊಂಡ ಸಂಗತಿ. ಅದರ ಬಗೆಗಿನ ಪಶ್ಚತ್ತಾಪವನ್ನು ದಾಖಲಿಸುವ ಮೂಲಕ ತನ್ನ ಜವಾಬ್ದಾರಿಯನ್ನು ಮೆರೆದ ಕವಿ ಎಲ್ಲ ಕಾಲಕ್ಕೂ ಪ್ರಸ್ತುತನಾಗುತ್ತಾನೆ. ಜಿ.ಎಸ್. ಎಸ್. ಅವರ ಪ್ರಕಾರ 'ಈ ಜೀವ ಹಿಂಸೆಯಭಾವ ಇದು ಜೈನ ಧರ್ಮದ ಗ್ರಂಥವಾದದ್ದರಿಂದ ಬಂದಿರಬಹುದೆಂದು ಊಹಿಸಲು ಅವಕಾಶವಿರುವುದಾದರೂ,

ಇದು ಪಂಪಕವಿಯ ವೈಯಕ್ತಿಕ ಸೌಂದರ್ಯ ಧರ್ಮವೆಂದು ಭಾವಿಸುವುದರಲ್ಲಿ ಆತಂಕವೇನೂ ಇಲ್ಲ' (೧೯೯೩ ಪು.೨೩).

ಮನುಷ್ಯ ಸನ್ಮಾರ್ಗದಲ್ಲಿ ನಡೆಯಬೇಕೆಂಬ ಬೋಧನೆ ಸಾರ್ವಕಾಲಿಕವಾದುದು. ಪಂಪನ 'ಆದಿಪುರಾಣ'ದಲ್ಲಿಯೂ ಇದನ್ನು ಗಮನಿಸಬಹುದು. ಉದಾಹರಣೆಗೆ,

ಕಳಿಪಂ ಕಳ್ಳನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ
ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿ ಕ್ರೂರಾತ್ಮ
ನುಂ ಸಾಧುಸಂ ಕುಳಮಂ ಕಂಡೊಡೆ ಕಾಯ್ವನುಂ ಪಳಿವನುಂ ಧರ್ಮಕ್ಕತಿ ದ್ರೋಹಮಂ
ಖಳನುಂ ಕಳ್ಳುಣಿಯುಂ ಘುಳುಮ್ಮನಿಳಿಗುಂ ಶ್ವಭ್ರಾಂತಮಂ ತಾಪಿನಂ (೫-೮೧)

ಕದಿಯುವುದು, ಕೊಲ್ಲುವುದು ಪರಸ್ತ್ರೀಯರನ್ನು ಬಯಸುವುದು, ಸಾಧು ಸಂತರನ್ನು ನೋಡಿದೊಡನೆ ಸಿಟ್ಟಾಗುವುದು, ಧರ್ಮಕ್ಕೆ ದ್ರೋಹ ಬಗೆಯುವುದು, ಹೆಂಡವನ್ನು ಕುಡಿಯುವುದು ಇವೆಲ್ಲ ಅಧರ್ಮದ ಮಾರ್ಗಗಳು. ಇದನ್ನು ಮಾಡುವವರು ನರಕವನ್ನು ಸೇರುತ್ತಾರೆ ಎನ್ನುವುದು ಈ ಪದ್ಯದ ಭಾವ. ಇಲ್ಲಿ ಅನೇಕ ನರಕಗಳ ಕಲ್ಪನೆಯಿದೆ. 'ನರಕ' ಎನ್ನುವುದು ಯಾರೂ ಬಯಸದ್ದು. ಪಾಪಿಗಳು ನೇರವಾಗಿ ನರಕವನ್ನು ಪ್ರವೇಶಿಸುತ್ತಾರೆಂಬ ನಂಬಿಕೆ. ನರಕ ಇದೆಯೇ ಇಲ್ಲವೋ ತಿಳಿಯದು. ಆದರೆ ಆ ಮೂಲಕ ಮನುಷ್ಯ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವ ಆಲೋಚನೆ ಮನುಷ್ಯ ವರ್ಗದಲ್ಲಿದೆ. ಪಂಪ ಆದಿಪುರಾಣದ ಮೂಲಕ ಇದನ್ನು ಆಗು ಮಾಡಿದ್ದಾನೆ. ಇದು ಸರ್ವಧರ್ಮಕ್ಕೂ ಅನ್ವಯವಾಗುವಂತಹ ವಿಚಾರವಾಗಿದೆ. ಈ ಮೂಲಕ ಸುಳ್ಳಿಲ್ಲದ, ಕೊಲೆಯಿಲ್ಲದ, ಪರಸತಿಯ ಬಗ್ಗೆ ಮೋಹವಿಲ್ಲದ ಒಂದು ಸುಂದರವಾದ ನಾಡಿನ ಗ್ರಹಿಕೆಯನ್ನು ಕವಿ ಮಾಡಿದ್ದಾನೆ. ನಾಡು ಚೆನ್ನಾಗಿರಬೇಕಾದರೆ ಆ ನಾಡಿನ ಜನರ ನಡೆನುಡಿಯೂ ಚೆನ್ನಾಗಿರಬೇಕೆಂಬ ಅಭಿಪ್ರಾಯ ಗಮನಿಸುವಂತದ್ದು.

ಕವಿಯ ಪ್ರತಿಭೆ ಬೇರೆ ಬೇರೆ ರೀತಿಯಲ್ಲಿ ನಾಡಿನ ಅನುಭವಗಳನ್ನು ಗ್ರಹಿಸುತ್ತದೆ. ಪ್ರಾದೇಶೀಕತೆ, ಸ್ಥಳೀಯಪ್ರಜ್ಞೆ ಮಣ್ಣಿನವಾಸನೆ ಮೊದಲಾದುವು ಕಾವ್ಯಾಧ್ಯಯನ ಸಂದರ್ಭದಲ್ಲಿ ಅರ್ಥೈಸಿಕೊಳ್ಳಬೇಕಾದ ಆಧುನಿಕ ಪರಿಭಾಷೆಗಳಾಗಿದ್ದರೂ, ಇವೆಲ್ಲ ಪರಂಪರೆಯ ಕಾವ್ಯಗಳಲ್ಲಿಯೂ ಹಾಸುಹೊಕ್ಕಾಗಿದ್ದುವೆಂಬುದು ಸತ್ಯ. ಇದನ್ನು 'ದೇಸಿ'ಯೆಂಬುದಾಗಿ ಗುರುತಿಸಲಾಗಿದೆ. 'ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದುವೊಂದಿ ದೇಸಿಯೊಳ್ ಪುಗುವುದು' ಇದು ಪಂಪನ ಕಾವ್ಯ ಪದ್ಧತಿ. ಕನ್ನಡದ್ದೇ ಆದ ವಿಶಿಷ್ಟ ಲಕ್ಷಣಗಳನ್ನು 'ದೇಸೀ' ಎಂಬುದಾಗಿ ಶ್ರೀವಿಜಯನೂ ಗುರುತಿಸಿದ್ದಾನೆ. ಪಂಪನು ರಾಜಾಶ್ರಯದಲ್ಲಿದ್ದುಕೊಂಡು ತನ್ನ

ಪರಿಸರದ ಬದುಕನ್ನು ಬಹಳ ಸೂಕ್ಷ್ಮವಾಗಿ ಗಮನಿಸಿಕೊಂಡಿದ್ದಾನೆ. ಸಮಕಾಲೀನ ಬದುಕಿನ ಚಿತ್ರಣ, ಗಾದೆ ಮಾತುಗಳು, ಪದಗಳು, ಪದಸಮುಚ್ಚಯಗಳ ಮೂಲಕ ಅದನ್ನು ಕಂಡುಕೊಳ್ಳಬಹುದು.

'ಆದಿಪುರಾಣ'ದ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಪಂಪನ ಪ್ರಾದೇಶಿಕತೆಯ ಚಿತ್ರಣಕ್ಕೆ ಸಮರ್ಥಉದಾಹರಣೆಯೆಂದರೆ, ಶ್ರೀಮತಿ ವಜ್ರಜಂಘರ ವಿವಾಹದ ಸನ್ನಿವೇಶ. ಈ ಸಂದರ್ಭವನ್ನು ಗಮನಿಸಿದರೆ, ಕನ್ನಡ ಸಂಸ್ಕೃತಿಯ ಸಂದರ್ಭವೊಂದು ಕಾಣಿಸುತ್ತದೆ. ಮದುವೆಯ ನಂತರ ಹೆಣ್ಣನ್ನು ಒಪ್ಪಿಸಿಕೊಡುವ ವಿಶಿಷ್ಟ ಸಂಪ್ರದಾಯವೊಂದಿದೆ. ಅಲ್ಲಿ ತಂದೆ ಅಳಿಯನಿಗೆ ಹೇಳುವ ಮಾತುಗಳು, ತಾಯಿ ತನ್ನ ಮಗಳಿಗೆ ಹೇಳುವ ಮಾತುಗಳು ಇಂದಿಗೂ ಈ ನಾಡಿನ ಹೆತ್ತವರು ತಮ್ಮ ಮಕ್ಕಳಿಗೆ ಹೇಳುವ ಮಾತುಗಳೇ ಆಗಿವೆ.

ಪೊಡಮಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತ ವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ವ ಕೈ
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರ ಜನಸಂಕಟ ಮೊಪ್ಪಿದುದಾ ಪ್ರಯಾಣದೊಳ್ (೪-೫೭)

ಮಗಳು ತಪ್ಪೆಸಗಿದರೆ ಕ್ಷಮಿಸಬೇಕೆಂಬ ತಂದೆಯ ಮನವಿ, 'ನಿಜವಲ್ಲಭನೇನನೆಂದೊಡಂ ಕಿನಿಸದಿರ್' ಎಂಬ ತಾಯಿಯ ಮನವಿ ಅತ್ಯಂತ ಹಿತಕಾರಿಯಾದುದು ಮತ್ತು ಸಾರ್ವಕಾಲಿಕವಾದುದು. ಹೆತ್ತವರು ಮಗಳನ್ನು ಕಳುಹಿಸಿಕೊಡುವ ಸಂದರ್ಭ ಮನಸ್ಸನ್ನು ಆರ್ದ್ರಗೊಳಿಸುವಂತದ್ದು. ತವರನ್ನು ಬಿಟ್ಟು ಹೊರಡುವಾಗ ಮುಂದಿನ ಬದುಕಿಗೆ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಮಗಳನ್ನು ಆತಂಕಕ್ಕೆಡೆಮಾಡುವುದು ಸಹಜ. ಹಾಗಾಗಿಯೇ ಮತ್ತೆ ಮತ್ತೆ ತಾಯಿಯನ್ನು ನೋಡುವ, ನಮಸ್ಕರಿಸುವ, ಕಂಬನಿಸುರಿಸುವ ಚಿತ್ರಣ ಇಂದೂ ನಮ್ಮ ಸಮಾಜದಲ್ಲಿ ಕಾಣುವಂತದ್ದೇ ಆಗಿದೆ. ಇದನ್ನು ಪಂಪ ಆ ಕಾಲದಲ್ಲಿ ಕಂಡದ್ದರಿಂದಲೇ ತನ್ನ ಕಾವ್ಯದಲ್ಲಿ ಕಂಡರಿಸುವುದಕ್ಕೆ ಅವನಿಗೆ ಸಾಧ್ಯವಾಯಿತು. ಹೆಣ್ಣು ಹೆತ್ತವರು ಕನ್ಯಾದಾನ ಮಾಡುವ ಪ್ರಕ್ರಿಯೆ ಮತ್ತು ಆ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಜನರ ನಡವಳಿಕೆ ಸಂಪ್ರದಾಯಗಳೂ ಕೂಡಾ ನಾಡಿನ ಜನರ ಬದುಕಿನ ಭಾಗವೇ ಆಗಿದೆ.

ಪಂಪನ ಕಾವ್ಯದಲ್ಲಿ ಛಂದಸ್ಸಿನಲ್ಲಿ ದೇಸಿಯನ್ನು ಗಮನಿಸಬಹುದು. ಆದಿಪುರಾಣದಲ್ಲಿ ಆತ ತ್ರಿಪದಿಯನ್ನು ಬಳಸಿದ್ದಾನೆ. ಆರನೆಯ ಆಶ್ವಾಸದ ೧೩ನೆಯ ಮತ್ತು ೧೦೦ ನೆಯ ಪದ್ಯಗಳು ತ್ರಿಪದಿಗಳಾಗಿವೆ.

ಯಾಕೆಂದರೆ, ಆತ ಹೋದಲ್ಲೆಲ್ಲ ಕಾಣುವುದು ಅವನ ಪ್ರೀತಿಗೆ ಪಾತ್ರವಾದ ಮಾವು ಮತ್ತು ಮಲ್ಲಿಗೆಯನ್ನು. ಈ ನೆಲ ಅವನ ಕಣ್ಣಿಗೆ ಕಾಣಿಸಿದ್ದು 'ಜಲಜಲ ಎಂದು ಶಬ್ದಿಸುತ್ತಾ ಪ್ರವಾಹವಾಗಿ ಹರಿಯುವ ಕಾಲುವೆಗಳು, ಆ ಕಾಲುವೆಗಳಲ್ಲಿ ಹರಡಿಕೊಂಡಿರುವ ಹೊಸದಾದ ನೆಯ್ದಿಲೆಯ ಹೂವು. ಸುತ್ತಲೂ ವ್ಯಾಪಿಸಿರುವ ಹೊಸನೆಯ್ದಿಲ ಹೂವಿನ ಸುಗಂಧವನ್ನು ಸೂಸಿ ಫಲ ಬಿಟ್ಟಿರುವ ಕೆಂಪು ಗೊಂಚಲಿನ ಜೋತು ಬಿದ್ದಿರುವ ಭತ್ತ, ಆ ಹೊಸ ಭತ್ತಕ್ಕೆ ಹಾಯ್ದು ಬರುವ ಗಿಣಿಗಳ ಗುಂಪು – ಇವು ಕಾಣುತ್ತಿರಲು ಆ ಗದ್ದೆಗಳಿಂದ ಮನೋಹರವಾಗಿ ತೋರುತ್ತಿರುವ ಆ ದೇಶದಲ್ಲಿ ಲಕ್ಷ್ಮೀದೇವಿಯು ಸದಾ ನಲಿದಾಡುತ್ತಿದ್ದಾಳೆ'. ಈ ವರ್ಣನೆಯ ಮೂಲಕ ಸಮೃದ್ಧಿಯ ನಾಡೊಂದನ್ನು ಕವಿ ಗುರುತಿಸುತ್ತಾನೆ. ಮುಂದುವರಿದು,

ಆವಲರುಂ ಪಣ್ಣುಂ ಬೀ
ತೋವವುಗಡ ಬೀಯವಲ್ಲಿ ಮಲ್ಲಿಗೆಗಳುಮಿ
ಮ್ಮಾವುಗಳು ಮೆಂದೊಡಿನ್ ಪೆಱತಾ
ವುದು ಸಂಸಾರಸಾರ ಸರ್ವಸ್ವ ಫಲಂ (೧–೫೫)

ಪಂಪ ವರ್ಣಿಸುವ ನಾಡಿನಲ್ಲಿ ಹೂವು, ಹಣ್ಣು, ಮಲ್ಲಿಗೆಗಳು ಯಾವ ಕಾಲಕ್ಕೂ ಇರುವಂತವುಗಳು. ಇದಕ್ಕಿಂತ ಮಿಗಿಲಾದ ಸಂಸಾರಸಾರ ಸರ್ವಸ್ವ ಫಲ ಯಾವುದು? ಆಕರ್ಷಕವಾದ ಹೂಗಳು, ರಸಯುಕ್ತವಾದ ಹಣ್ಣುಗಳನ್ನು ವರ್ಣಿಸುವಾಗ ಕವಿಯ ನಾಡಿನ ಪ್ರಜ್ಞೆ ಪುಟಿದೇಳುತ್ತದೆ.

ಪಂಪನ ನಾಡಿನ ಬಗೆಗಿನ ಪ್ರೇಮ ಕೆನೆಗಟ್ಟುವುದು ಆತ ಮಾಡಿರುವ ಬನವಾಸಿಯ ವರ್ಣನೆಯಲ್ಲಿ. ಬನವಾಸಿ ಪಂಪನ ನಾಡೇ ಎನ್ನುವುದರ ಕುರಿತು ವಿದ್ವಾಂಸರು ಚರ್ಚಿಸಿ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಪಂಪನ ಊರು ಯಾವುದೇ ಆಗಿದ್ದರೂ ಆತ ಬನವಾಸಿಯಲ್ಲಿ ತನ್ನ ಬದುಕಿನ ದಿನಗಳನ್ನು ಕಳೆದಿದ್ದ ಎನ್ನುವುದನ್ನು ಅವನ ವರ್ಣನೆಯಿಂದ ಅರ್ಥೈಸಿಕೊಳ್ಳಬಹುದು. ನಾಲ್ಕನೆಯ ಆಶ್ವಾಸದ ನಾಲ್ಕು ಪದ್ಯಗಳಲ್ಲಿ ಕವಿ ಬನವಾಸಿಯನ್ನು ಮೈಮರೆತು ವರ್ಣಿಸಿದ್ದಾನೆ. ಕಾವ್ಯದ ನಾಯಕ ಅರ್ಜುನನನ್ನು ಬನವಾಸಿಗೆ ಕರೆತಂದು ಅವನ ಮೂಲಕ ಹೇಳಿಸಿದ ಮಾತುಗಳು ಪಂಪನ ಮಾತುಗಳೇ ಆಗಿವೆ.

ಸೊಗಯಿಸಿ ಬಂದ ಮಾಮರನೆ ತಲ್ತೆಲೆವಳ್ಳಿಯೆ ಪೂತಜಾತಿ ಸಂ
ಪಗೆಯ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆ ಮೊಗದೊಳ್ ಪಳಂಚಲೆಯ ಕೂಡುವ ನಲ್ಲರೆ ನೊಳ್ಪೊಡಾವ ಬೆ

ಟ್ಟುಗಳೊಳಮಾವ ನಂದನ ವನಂಗಳೊಳಂ ಬನವಾಸಿ ದೇಶದೊಳ್

(೪-೨೮)

'ಬನವಾಸಿಯಲ್ಲಿ ಎಲ್ಲಿ ನೋಡಿದರೂ ಸೊಗಸಾಗಿ ಫಲಬಿಟ್ಟಿರುವ ಮಾವಿನ ಮರಗಳು, ಚಿಗುರಿದ ಎಲೆಯ ಬಳ್ಳಿಗಳು, ಹೂ ಬಿಟ್ಟ ಜಾತಿ ಸಂಪಗೆ, ಧ್ವನಿಗೈಯುವ ಕೋಗಿಲೆ, ಹಾಡುವ ದುಂಬಿ, ಪ್ರೇಯಸಿಯರು, ನಗುಮುಖದಲ್ಲಿ ಪ್ರತಿಭಟಿಸಿ ಕೂಡುವ ನಲ್ಲರೇ' ಎನ್ನುವಲ್ಲಿ ಬನವಾಸಿಯ ಹಸಿರು ಸಮೃದ್ಧಿಯನ್ನು ಅಲ್ಲಿಯ ಪ್ರೇಮಿಗಳ ಬದುಕಿನ ಸೊಬಗನ್ನು ಪಂಪ ವರ್ಣಿಸಿದ್ದಾನೆ. ಇಲ್ಲಿಯೂ ಆತ ಮಾಮರವನ್ನು ಮರೆತಿಲ್ಲ. ಅಲ್ಲಿಯ ಜನರ ಸನ್ನಡತೆ, ಚಾರಿತ್ರ್ಯವನ್ನು ಮುಂದಿನ ಪದ್ಯದಲ್ಲಿ ಗುರುತಿಸಿದ್ದಾನೆ.

'ಚಾಗದಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್' (೪-೨೯) ಇದು ಕವಿ ಗುರುತಿಸಿದ ಬನವಾಸಿಯ ವಿಲಾಸ. ತ್ಯಾಗದ, ಭೋಗದ ಅಕ್ಷರದ, ಗಾನದ, ಗೋಷ್ಠಿಗಳ ಸವಿಗೆ ನೆಲೆಯಾದ ಮನುಷ್ಯರೇ  ಮನುಷ್ಯರು. ಇವರು ಪುಣ್ಯವಂತರು. ಇಂತಹ ನಾಡಿನಲ್ಲಿ ಮನುಷ್ಯನಾಗಿ ಹುಟ್ಟು ಅಸಾಧ್ಯವಾದರೂ ಮರಿದುಂಬಿಯಾಗಿ ಅಥವಾ ಕೋಗಿಲೆಯಾಗಿ ಹುಟ್ಟಬೇಕೆನ್ನುವುದು ಕವಿಯ ಅಪೇಕ್ಷೆ. ಬನವಾಸಿಯು ತ್ಯಾಗಕ್ಕೆ, ಭೋಗಕ್ಕೆ, ವಿದ್ಯಾವಂತಿಕೆಗೆ, ಗೋಷ್ಠಿಗೆ ಪ್ರಸಿದ್ಧವಾಗಿ ಆಕರ್ಷಣೀಯವಾದ ನಾಡಾಗಿತ್ತು.. ಇಂತಹ ಆಕರ್ಷಣೆಯೇ ಅಲ್ಲಿ ಹುಟ್ಟುವ ಅಪೇಕ್ಷೆಯನ್ನು ಮೂಡಿಸಿರುವುದು. ಬೇರೆ ನಾಡುಗಳಿಂದ ಶ್ರೇಷ್ಠವಾದ ನಾಡಾಗಿ ಬನವಾಸಿ ಕಾಣಿಸಿಕೊಂಡಿದೆ. ಅಂತಹಾ ನಾಡಿನಿಂದ ಕವಿ ಪಡೆದ ಪ್ರಾಕೃತಿಕ ಸುಖದ ನಿರೂಪಣೆ ಮುಂದಿನ ಪದ್ಯದಲ್ಲಿದೆ.

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಂ<br>
ಇಂಪನಾಳ್ದ ಗೇಯಂಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಂ<br>
ಆದಕೆಂದಲಂಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಂ<br>
ಏನನೆಂಬೆನಾರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ  (೪-೩೦)

ಕವಿಯು ತಾನು ಅನ್ಯ ಪ್ರದೇಶಲ್ಲಿದ್ದು ಬನವಾಸಿಯನ್ನು ನೆನಪಿಸಿಕೊಳ್ಳುವ ರೀತಿಯಲ್ಲಿದೆ ಈ ಸಾಲುಗಳು. ಎಲ್ಲೇ ಇದ್ದರೂ, ದಕ್ಷಿಣದ ಗಾಳಿ ಸೋಕಿದಾಗ, ಒಳ್ಳೆಯ ಮಾತನ್ನು ಕೇಳಿದಾಗ, ಮಧುರವಾದ ಹಾಡು ಕಿವಿಗೆ ಬಿದ್ದಾಗ, ಬಿರಿದ ಮಲ್ಲಿಗೆಯನ್ನು ಕಂಡಾಗ, ಸಂತೋಷವನ್ನು ಅನುಭವಿಸಿದಾಗ ಬನವಾಸಿಯ ನೆನಪಾಗುತ್ತದೆಂಬ ಭಾವ ಇಲ್ಲಿದೆ. 'ಮಧುಮಹೋತ್ಸವ'ವು ಬನವಾಸಿಯ ಒಂದು ಉತ್ಸವವನ್ನು ಗುರುತಿಸುತ್ತದೆ. ಬನವಾಸಿಯ ನೆನಪೇ ಕವಿಗೆ ಸುಖಾನುಭೂತಿಯನ್ನು ನೀಡುವಂತದ್ದು. 'ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ

ದೇಶಮುಂ' ಎಂಬ ಮಾತು ಇದನ್ನೇ ಹೇಳುತ್ತದೆ. ಇದು ಪಂಪನ ನಾಡವಾತ್ಸಲ್ಯದ ನೆನಪುಗಳು. ಈ ವರ್ಣನೆಯನ್ನು ಗಮನಿಸಿದರೆ ಬನವಾಸಿ ಸುಖಕ್ಕೂ ಸಮೃದ್ಧಿಗೂ ಮೂಲವಾಗಿತ್ತು ಎಂಬುದು ವೇದ್ಯವಾಗುವ ಸಂಗತಿ.

ಖಾಂಡವವನದಹನ ಪ್ರಸಂಗದಲ್ಲಿ ಪಂಪನಿಗೆ ಪ್ರಕೃತಿಯ ಬಗೆಗಿದ್ದ ಅರಿವು ವ್ಯಕ್ತವಾಗುತ್ತದೆ.ಅಲ್ಲಿ ಕಾಣುವ ಮರಗಳು ಕೆಂಪುಮತ್ತಿ, ಅಶೋಕ, ಕದಂಬ, ಮಾತುಲುಂಗ, ಅರೆನೆಲ್ಲಿ, ಜಳಿಯ ಅತ್ತಿ, ಕರ್ಪೂರ, ಲವಂಗ, ಮಾದಲ, ತಾಳೆ, ಹೊಂಗೆಯ ಬಳ್ಳಿ, ಶುಂಠಿ ಇವೆಲ್ಲ ವೃಕ್ಷರಾಶಿಗಳ ಬಗೆಗೆ ಕವಿಗಿರುವ ಜ್ಞಾನಕ್ಕೆ ನಿದರ್ಶನ. ಅರಣ್ಯವನ್ನು ಬದುಕಿನ ಅವಿಭಾಜ್ಯ ಅಂಗವೆಂಬಂತೆ ಕವಿ ವರ್ಣಿಸುತ್ತಾನೆ. ಮಳೆಗಾಲ ಕಳೆದು ಶರತ್ಕಾಲ ಕಾಣಿಸಿಕೊಂಡ ಬಗೆಯನ್ನು ಪಂಪ ಸುಂದರವಾಗಿ ವರ್ಣಿಸುತ್ತಾನೆ.

ಅಳಿ ಜಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತಪೂ
ಗೊಳದೊಳೆ ರಾಗಿಸುತ್ತಿರೆ ಶುಕಾವಳಿ ಬಂಧುರ ಗಂಧ ಶಾಳಿ ಸಂ
ಕುಳದೊಳೆ ಪಾಯ್ದುಪಾಯ್ದು ನಲಿಯುತ್ತಿರೆ ಸಾರೆ ಚಕೋರಮಿಂದು
ಮಂಡಳ ಗಳಿತಾಮೃತಾಸವ ಮನುಂಡುಸುರುತ್ತಿರೆ ಚೆಲ್ವು ಶಾರದಂ (೫-೩೦)

ವರ್ಷಾಕಾಲ ಕಳೆದು ಶರತ್ಕಾಲವು ಪ್ರಾಪ್ತವಾದಾಗ ಕದಂಬ ಪುಷ್ಪಗಳ ವಾಸನೆ ಕಡಿಮೆಯಾಗಿ ಜಾಜಿಯ ವಾಸನೆ ಹೆಚ್ಚಿತು. ನವಿಲಿನ ವೈಭವ ನಿಂತಿತು. ಹಂಸದ ವೈಭವ ಕಾಣಿಸಿತು. ಮೋಡಗಳ ಕಪ್ಪು ದೂರ ಸರಿಯಿತು. ಚಂದ್ರ ಮಂಡಲದ ಕಪ್ಪು ಮಚ್ಚೆಯು ಪ್ರಕಾಶಮಾನವಾಯಿತು. ಪ್ರಾಕೃತಿಕ ಬದಲಾವಣೆಗಳನ್ನು ಕವಿ ಚೆನ್ನಾಗಿ ಬಲ್ಲವನಾಗಿದ್ದನೆಂಬುದಕ್ಕೆ ಈ ವರ್ಣನೆ ಸಾಕ್ಷಿ. ಇಂತಹ ಸುಂದರವಾದ ಪ್ರಕೃತಿ ವರ್ಣನೆಯ ಮೂಲಕ ಪ್ರಕಟಗೊಳ್ಳುವ ಪಂಪನ ಪರಿಸರ ಪ್ರಜ್ಞೆಯೊಡನೆ ನಾಡಿನ ಅಭಿಮಾನ ಅನಾವರಣಗೊಂಡಿದೆ.

ಮತ್ಸ್ಯಗಂಧಿ, ದ್ರೌಪದಿಯರು ಕನ್ನಡ ಸಂಸ್ಕೃತಿಯಲ್ಲಿ ಗೌರವಕ್ಕೆ ಪಾತ್ರವಾದ ವ್ಯಕ್ತಿತ್ವಗಳೇ ಆಗಿವೆ. ಬಿ.ಎನ್. ಸುಮಿತ್ರಾಬಾಯಿ ಅವರು ಆದಿಪುರಾಣದಲ್ಲಿ ಸ್ತ್ರೀ ಪ್ರಪಂಚದ ಬಳಕೆಯ ಕುರಿತು ಮಾತನಾಡುತ್ತಾ, 'ಪಂಪನು ಚಿತ್ರಿಸಿದ ಬದುಕಿನ ಸುಖ, ಸಮೃದ್ಧಿ, ಭೋಗ ಪರಾಕಾಷ್ಠೆಯ ಪರಿಕಲ್ಪನೆಗಳೆಲ್ಲ ಗಂಡಿನ ದೃಷ್ಟಿಯನ್ನು ಕೇಂದ್ರವಾಗಿಟ್ಟು ಹೊರಟಿರುವುದರಿಂದಲೇ ಅವೆಲ್ಲಕ್ಕೂ ಮೂಲವಿಧಿಯೆಂಬಂತೆ ಆತ ಹೆಣ್ಣನ್ನು ಗುರುತಿಸುತ್ತಾನೆ. ಕಾವ್ಯದ ಹೊರಮೈಯಲ್ಲಿ ಇವನು ಕಲ್ಪಿಸುವ, ಸ್ತ್ರೀ ಲೋಕದಲ್ಲಿ ಎದುರಾಗುವ ನೂರಾರು ಕಾಂತೆಯರು, ವನಿತೆಯರು, ಅಂಗನೆಯರು, ಕಾಮಿನಿಯರು, ಅರಸಿಯರು ನಾಯಕರ ಬದುಕಿನ ಶರೀರಕ್ಕೂ ಸಂಗಾತಿಗಳಾಗಿ

ಅತ್ಯಂತ ಲೌಕಿಕ ನೆಲೆಯನ್ನು ಪ್ರತಿನಿಧಿಸುವವರು. ನಾಯಕರ ಸಾಹಸ ಗಾಥೆಯ ಮೆರವಣಿಗೆಯಲ್ಲಿ ಕಲಶ ಕನ್ನಡಿ ಹಿಡಿದವರೂ, ಅವರ ವಿಜಯ ಸಾಧನೆಗೆ ಸೇಸೆಯನ್ನಿಕ್ಕಿ ಹಾರೈಸುವವರೂ ಆಗಿರುವ ಸ್ತ್ರೀ ಸಂಕುಲದ ಬಹುಮುಖ್ಯ ಸಾರ್ಥಕ್ಯವಿರುವುದು ಪುರುಷವರ್ಗದ ಸೇವೆಯಲ್ಲಿ ಹಾಗೂ ರಂಜನೆಯಲ್ಲಿ ಎಂಬುದು ನಿಜವಾಗಿದ್ದರೂ, ಪಂಪನು ಸ್ತ್ರೀಯರನ್ನು ಕುರಿತು ತೋರುವ ವಿಶೇಷವಾದ ಒಲವು ಪರಂಪರಾಗತ ಶಿಷ್ಟಮಹಾಕಾವ್ಯಗಳನ್ನೇ ಅನುಸರಿಸಿಯೂ, ಅವೆಲ್ಲಕ್ಕೂ ಭಿನ್ನವಾಗಿಯೇ ಕಾಣಿಸುತ್ತದೆ' (೨೦೦೯ ಪು.೭೮) ಎಂಬ ಮಾತು ಒಪ್ಪಿಕೊಳ್ಳುವಂತದ್ದು.

ಶಂತನು ಮತ್ಸ್ಯಗಂಧಿಯನ್ನು ನೋಡಿದ ಸಂದರ್ಭ. ಬಂದಿರುವ ಉದ್ದೇಶ ಬೇಟೆ. ನೋಡಿದ್ದು ಯೋಜನಗಂಧಿಯನ್ನು. ಆ ಪರಿಮಳ ದೂರದಿಂದ ಅವನನ್ನು ಆಕರ್ಷಿಸಿದೆ. 'ಮಧುಪಂಬೋಲ್' ಸೋತು ಹೋದ ಶಂತನು ಅವಳ ಕೈ ಹಿಡಿದು 'ನೀನ್ ಬಾ ಪೋಪಂ' ಎಂದಾಗ ಆ ಕನ್ಯೆ ನಾಚಿ 'ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ' ಎನ್ನುತ್ತಾಳೆ. (೧–೩೦) ಆಕೆಯೂ ಅವನತ್ತ ಆಕರ್ಷಿತಳಾಗಿದ್ದಾಳೆಂಬುದನ್ನು ಈ ಮಾತು ಸೂಚಿಸುತ್ತದೆ. ಹಾಗಾಗಿಯೇ ತನ್ನ ತಂದೆಯನ್ನು ಕೇಳಿರೆಂಬ ಬೇಡಿಕೆ. ಮತ್ಸ್ಯಗಂಧಿಯ ಈ ನಡೆ ಕನ್ನಡ ಸಂಸ್ಕೃತಿಗೆ ಒಂದು ಕಿರುಗನ್ನಡಿ ಎಂಬುದು ಶಿವರಾಮಯ್ಯ ಅವರ ಅಭಿಪ್ರಾಯ (೨೦೧೪ ಪು.೬೪) ಯೋಜನಗಂಧಿ ಸತ್ಯವತಿಯಾಗುವುದು ಅರಮನೆ ಸೇರಿ ಸಂಸ್ಕೃತೀಕರಣಕ್ಕೆ ಒಳಗಾಗುವುದು ಮುಂದಿನ ಹಂತ. ಪ್ರಸ್ತುತ ಕಾಲಘಟ್ಟದಲ್ಲಿ ಮನೆಯವರ ಅಂಕೆಗೊಳಗಾಗಲು ಇಷ್ಟಪಡದೆ ಓಡಾಡುವ ಅದೆಷ್ಟೋ ಹೆಣ್ಣು ಮಕ್ಕಳ ಬದುಕು ದುರಂತದಲ್ಲಿ ಪರ್ಯವಸಾನಗೊಳ್ಳುವುದನ್ನು ಕಾಣುತ್ತೇವೆ. ಸ್ವಚ್ಛಂದವೇ ಸ್ವಾತಂತ್ರ್ಯವೆಂಬ ತಪ್ಪು ತಿಳುವಳಿಕೆಗೊಳಗಾಗಿ ಬಣ್ಣದ ಬದುಕಿಗೆ ಮರುಳಾಗುವ ಹೆಣ್ಣು ಎಲ್ಲಾ ಕಾಲದಲ್ಲೂ ಕಾಣಿಸಿಕೊಂಡಿದ್ದಾಳೆ. ಯೋಜನಗಂಧಿಯಂತಹ ಹೆಣ್ಣು ಮಗಳೂ ಎಲ್ಲಾ ಕಾಲದಲ್ಲೂ ಇದ್ದಾಳೆ ಎಂಬುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಇಂತಹಾ ವರ್ತನೆಯ ಮೂಲಕ ಈ ಪಾತ್ರದ ಗೌರವವನ್ನು ಪಂಪ ಹೆಚ್ಚಿಸಿದ್ದಾನೆ. ಮಾತ್ರವಲ್ಲ ವಿವಾಹ ಪೂರ್ವದಲ್ಲಿ ಕನ್ನಡನಾಡಿನ ಹೆಣ್ಣು ಮಗಳು ಹೆತ್ತವರ ಮತ್ತು ಹಿರಿಯರ ಒಪ್ಪಿಗೆಯನ್ನು ಪಡೆಯಲು ಆಶಿಸುತ್ತಾಳೆಂಬುದನ್ನು ಗಮನಿಸಬಹುದು. ಇಂತಹ ಸಂಪ್ರದಾಯಗಳು ನಾಡಿನ ಹಿರಿಮೆಯನ್ನು ಗುರುತಿಸಿಕೊಡುತ್ತವೆ.

ಪಂಪನ ಕೃತಿಯಲ್ಲಿ ಗುರುತಿಸಬಹುದಾದ ಇನ್ನೊಂದು ಪಾತ್ರ ದ್ರೌಪದಿಯದು. ಈಕೆ ಪಂಚವಲ್ಲಭೆಯೆನ್ನುವುದನ್ನು ಒಪ್ಪಿಕೊಳ್ಳುವುದಕ್ಕೆ ಕವಿ ಮನಸ್ಸು ಹಿಂಜರಿಯುತ್ತದೆ. ಬಹುಶಃ ಅಂದಿನ ಯುಗಧರ್ಮವನ್ನು ಅರ್ಥೈಸಿಕೊಳ್ಳುವುದಾದರೆ ಹೆಣ್ಣು, ಹೊನ್ನು, ಮಣ್ಣು ಆಳುವ ರಾಜನಿಗೆ ಸಲ್ಲುವಂತವು. ಪಂಚವಲ್ಲಭೆಯಾದ ಅವಳನ್ನು ಅರ್ಜುನನಿಗೆ ಮದುವೆ ಮಾಡಿಸಿ

ಅವಳ ಪಾತ್ರಕ್ಕೆ ಗೌರವವನ್ನು ಸಲ್ಲಿಸಿದ್ದಾನೆ. ದುಶ್ಯಾಸನನು ತನ್ನಣ್ಣನ ಆಜ್ಞೆಯಂತೆ ಪ್ರಾತಿಕಾಮಿಯನ್ನು ಜೊತೆ ಸೇರಿಸಿಕೊಂಡು ಅವಳನ್ನು ಸಭೆಗೆ ಎಳೆದೊಯ್ಯುವಾಗ, 'ಉಟ್ಟುದುವರಂಕೆಯ್ದಂದು ದುಶ್ಯಾಸನಂ ತನಗಂ ಮೆಲ್ಲನೆ ಮೃತ್ಯಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ' (೩-೫) ಎನ್ನುವ ಮಾತನ್ನು ಗಮನಿಸಿದರೆ ಪಂಪನು ಹೆಣ್ಣಿಗೆ ನೀಡಿದ ಗೌರವದ ಅರಿವಾಗುತ್ತದೆ. ಶಿವರಾಮಯ್ಯ ಅವರ ಪ್ರಕಾರ, 'ಈ ಸಂದರ್ಭದಲ್ಲಿ ಪಂಪ ತೆಗೆದುಕೊಂಡ ಸ್ವಾತಂತ್ರ್ಯ, ನಿಲುವು ಪ್ರಶಂಸನೀಯ. ನಮ್ಮ ಯುಗಯಾತ್ರೀ ಸಂಸ್ಕೃತಿಯ ಘನತೆವೆತ್ತ ಕವಿ ನಾಗರಿಕತೆಯ ಜಗತ್ಸಂಸ್ಕೃತಿಯ ಒಂದು ದಾಖಲೆಯಾಗಿ ದ್ರೌಪದಿಯ ವಸ್ತ್ರಾಪಹರಣ ಪ್ರಸಂಗವನ್ನು ನಿರ್ವಹಿಸುತ್ತಾನೆ' (೨೦೧೮ ಪು.೬೭)

ವೀರ ಮತ್ತು ತ್ಯಾಗ ಪಂಪನ ಕಾಲದ ಪರಮ ಮೌಲ್ಯಗಳು. ಸಂದರ್ಭೋಚಿತವಾಗಿ ಪಂಪ ಇದನ್ನು ಗುರುತಿಸುವ ಪ್ರಯತ್ನ ಮಾಡಿದ್ದಾನೆ. ಖಾಂಡವವನದಹನದ ಪ್ರಸಂಗದಲ್ಲಿ ವೀರನಗುಣವನ್ನು ಕವಿ ವ್ಯಾಖ್ಯಾನಿಸಿದ್ದಾನೆ.

ಒತ್ತಿ ತಱಿಂಬಿನಿಂದರಿಪುಭೂಜಸಮಾಜದ ಬೇರ್ಗಳಂ ನಭ
ಕ್ಕೆತ್ತದೆಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ
ಚ್ಚೊತ್ತದೆ ಮಾಣ್ದು ಬಾಳ್ವ ಪುಳುವಾನಸನೆಂಬನಜಾಂಡಮೆಂಬುದೊಂ
ದತ್ತಿಯ ಪಣ್ಣೊಳಿರ್ಪ ಪುಳುವಲ್ಲದೆ ಮಾನಸನೇ ಮುರಾಂತಕ (೫-೭೫)

ಕಥಾನಾಯಕನ ಮೂಲಕ ಆಶ್ರಯದಾತ ದೊರೆಯ ಉದಾತ್ತಗುಣವನ್ನು ಪ್ರಕಟಿಸುವ ನೆಲೆ ಇಲ್ಲಿ ಕಾಣುತ್ತದೆ. ರಾಜ ಯಾವತ್ತೂ ವಚನಭ್ರಷ್ಟನಾಗಬಾರದು. ಸತ್ಯಸಂಧತೆ ಅವನ ಬದುಕಿ ಗಂಟಿಕೊಂಡಿರಬೇಕಾದ ಗುಣ. ಇಂತಹ ಗುಣಗಳ ಪ್ರಕಟನೆಗಳಿಗೆ ಈ ಸಾಲುಗಳನ್ನು ಕವಿ ನಿರ್ಮಾಣ ಮಾಡಿದ್ದಾನೆ. ಇಲ್ಲಿ ಇಂದ್ರ ಮತ್ತು ಅರ್ಜುನನ ಮುಖಾಮುಖಿಯಾಗುವುದಕ್ಕಿದೆ. ಇದನ್ನರಿತ ಗುಣಾರ್ಣವ ಹೇಳುವ 'ಮೇಲೆ ಬಿದ್ದು ಅಡ್ಡಗಟ್ಟಿ ನಿಂತ ಶತ್ರುಗಳೆಂಬ ಮರಗಳ ಸಮೂಹದ ಬೇರುಗಳನ್ನು ಮೂಲೋತ್ಪಾಟನೆ ಮಾಡದೆ ತನಗೆ ಶರಣಾಗತರಾದವರನ್ನು ರಕ್ಷಿಸದೆ, ತ್ಯಾಗದ ಒಳ್ಳೆಯ ಗುಣವನ್ನು ಮುದ್ರಿಸದೆ, ತಪ್ಪಿ ಬಾಳುವ ಹುಳುವಿಗೆ ಸಮಾನವಾದ ಮನುಷ್ಯನು ಬ್ರಹ್ಮಾಂಡವೆಂಬ ಅತ್ತಿಯ ಹಣ್ಣಿನಲ್ಲಿರುವ ಹುಳುವಲ್ಲದೆ ಮನುಷ್ಯನೇ' ಎಂಬ ಮಾತುಗಳು ಅಂತಹ ಪರಾಕ್ರಮಿಯ ಬಗೆಗಿನ ಗೌರವವನ್ನು ಹೆಚ್ಚಿಸುತ್ತದೆ.

ತ್ಯಾಗದ ಮೂಲಕ ಗುರುತಿಸಲಾಸದ ವ್ಯಕ್ತಿತ್ವ ಕರ್ಣನದು. 'ನನ್ನಿ'ಗೆ ಈತ ಪ್ರಸಿದ್ಧ ಯಾರು ಏನೇ ಕೇಳಿದರೂ ಕೊಡುವ ಗುಣ ಇವನದು.

ಎಂದುಂ ಪೋಗೆಂದನೆ ಮಾ
ಣೆಂದನೆ ಪೆಱತೊಂದನೀವೆನೆಂದನೆ ನೊಂದಃ
ಎಂದನೆ ಸೆರಗಿಲ್ಲದೆ ಪಿಡಿ
ಯೆಂದನಿದೇಂ ಕಲಿಯೊ ಚಾಗಿಯೊ ರವಿತನಯಂ (೧-೧೦೨)

ಇದು ಕರ್ಣನಗುಣ. ದಾನಕ್ಕಾಗಿ ಬಂದವರನ್ನು ಮುಂದಕ್ಕೆ ಕಳುಹಿಸಿದವನಲ್ಲ. ಕೇಳಿದ ದಾನಕ್ಕೆ ಪರ್ಯಾಯವಾಗಿ ಇನ್ನೊಂದನ್ನು ನೀಡಿದವನಲ್ಲ. ಕೊಟ್ಟ ಮೇಲೆ ಅಯ್ಯೋ ಎಂದು ಮರುಗಿದವನಲ್ಲ. ಕರ್ಣನಂತಹ ದಾನಿ ಇರದೇ ಹೋದರೂ ದಾನಿಗಳನ್ನು ಕರ್ಣನ ಹೆಸರಿನಲ್ಲಿ ಗುರುತಿಸುವ ಕ್ರಮ ಇವತ್ತಿಗೂ ಸಮಾಜದಲ್ಲಿದೆ.

ಯುದ್ಧದ ಸಂದರ್ಭದಲ್ಲಿಯೂ ವೀರಯೋಧರ ಮಾತುಗಳ ನಡುವೆ ನಾಡಿನ ಅಭಿಮಾನ, ಅನ್ನದ ಋಣದ ಯೋಚನೆಗಳು ಇಣುಕು ಹಾಕುವುದನ್ನು ಗಮನಿಸಬಹುದು. ಆಶ್ರಯ ನೀಡಿದ ನಾಡು ಮತ್ತು ಬದುಕು ಕೊಟ್ಟ ಪ್ರಭುವಿನ ಬಗೆಗೆ ಪ್ರೀತಿ ಮತ್ತು ಗೌರವ ಈ ವೀರ ಯೋಧರ ಮಾತುಗಳಲ್ಲಿ ವ್ಯಕ್ತಗೊಳ್ಳುತ್ತದೆ. ಒಬ್ಬ ಯೋಧನ ಮಾತು ಹೀಗಿದೆ.

ನಾಳೆ ವಿರೋಧಿ ಸಾಧನ ಘಟಾಘಟಿತಾಹವದಲ್ಲಿ ನಿನ್ನಕ
ಟ್ಟಾಳಿರೆ ಮುಂಚಿ ತಾಗದೊಡಳ್ಕುಱಿ ತಾಗಿ ವಿರೋಧಿ ಸೈನ್ಯ ಭೂ
ಪಾಳರನೊಂದೆ ಪೊಯ್ಯದೊಡಮೀ ತಲೆ ಪೋದೊಡಮಟ್ಟೆಯಟ್ಟಿ ಕ
ಟ್ಟಾಳನೆ ಮುಚ್ಚಿ ತಳ್ತಿಱಿಯ ದಿರ್ದೊಡಮಂಜಿದೆನಾಂ ಮಹೀಪತಿ (೧೦- ೩೯)

ತನ್ನ ತಲೆ ಉರುಳಿ ಬಿದ್ದರೂ ಮುಂಡದಲ್ಲೇ ಹೋರಾಡುವೆನೆಂಬ ವೀರಾವೇಶ ಈ ಮಾತುಗಳಲ್ಲಿ ವ್ಯಕ್ತಗೊಳ್ಳುತ್ತದೆ. ಈತನ ಮನಸ್ಥೈರ್ಯ, ಮಾತಿನತೀಕ್ಷ್ಣತೆ ಮೆಚ್ಚುವಂತದ್ದು. 'ಶತ್ರುರಾಜರ ಆನೆಯ ದಂತದ ತಕ್ಕಡಿಯಲ್ಲಿ ನನ್ನನ್ನು ನಾನೇ ತೂಗಿ ತೋರಿಸುತ್ತೇನೆ' ಎಂಬ ಇನ್ನೊಬ್ಬ ಯೋಧನ ನುಡಿಯಲ್ಲಿ ವೀರಾವೇಶದ ಕೆಚ್ಚಿರುವುದನ್ನು ಕಾಣಬಹುದು. ಯುದ್ಧದಲ್ಲಿ ಗೆದ್ದರೆ ಜಯವನಿತೆಯ ಸುಖ, ಸತ್ತರೆ ದೇವಾಂಗನೆಯರ ಸಖ್ಯ ಎಂಬುದನ್ನು ತಿಳಿದ ಆ ಭಟರು ವೀರಯುಗದ ಪ್ರತಿನಿಧಿಗಳು.

ಯೋಧರ ಪತ್ನಿಯರ ಮಾತುಗಳಲ್ಲಿಯೂ ವೀರಾವೇಶದ ಕೆಚ್ಚು ಇದೆ. ಉದಾಹರಣೆಯ ಮೂಲಕ ಸ್ತ್ರೀಯರ ವೀರಾಲಾಪದ ಮಾತುಗಳನ್ನು ಗಮನಿಸಬಹುದು. 'ತಾಂಗಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲಿ ಮಾಣ್ದಾಂ ಗಡಮಿರ್ಪೆನಂತನಿತು ಬೆಳ್ಪೆನೆ ಮುನ್ನಮೆ

ಪೋಗಿ ನಲ್ಮೆಗೆಲ್ಲಂಗೊಳೆ ದೇವಲೋಕದೊಳಧೀಶನನಾನಿದಿರ್ಗೊಳ್ವೆನೋವೋ ಸಗ್ಗಂಗಳೊಳಿರ್ಪ ದೇವಡಿತಿ ತೊಳ್ತರೊಳಳ್ತಿಯ ನಾಗಲೀವೆನೇ' (೧೦-೪೫)

ಯುದ್ಧವೆಂದರೆ ಯೋಧರಿಗೆ ಹೇಗೆ ಭಯವಿಲ್ಲದ ಸಂಗತಿಯೋ ಹಾಗೆಯೇ ಯೋಧರ ಪತ್ನಿಯರಿಗೂ ಕೂಡಾ. ವೀರನ ಮಡದಿಯೊಬ್ಬಳ ಮಾತಿನಲ್ಲಿ ಕನ್ನಡದ ವೀರಮಹಿಳೆ ನಂಬಿದ 'ಮಹಾಸತಿ' ಪುಣ್ಯದ ಹಂಬಲವಿದೆ. ಈಕೆ ತನ್ನ ಗಂಡನಿಗಿಂತ ಮೊದಲೇ ಹೋಗಿ ದೇವಾಂಗನೆಯರಿಗೆ ಅವನ ಸೇವೆ ಮಾಡಲು ಅವಕಾಶ ಕೊಡದಂತೆ ತಾನೇ ದಾರಿಕಾಯುತ್ತೇನೆಂಬ ಆಲೋಚನೆಯನ್ನು ಮುಂದಿಡುತ್ತಾಳೆ. ಆತ ದೇವತಾ ಸ್ತ್ರೀಯರಿಗೆ ಸಿಗದೆ ತನಗೇ ಸಿಗುತ್ತಾನೆಂಬ ಖಚಿತ ನಿಲುವು ಈಕೆಯದು. ಇಂತಹ ಕನ್ನಡದ ಹೆಣ್ಣು ಮಕ್ಕಳ ಪಾತಿವ್ರತ್ಯ, ಪತಿಪ್ರೇಮ, ಧೈರ್ಯ, ಸಾಹಸಗಳು, ಪುರುಷರನ್ನು ನಾಡಿನ ಪರವಾಗಿ ಯುದ್ಧಕ್ಕೆ ಸಿದ್ಧಗೊಳಿಸುವ ನೆಲೆಯನ್ನು ಇಲ್ಲಿ ಕಾಣಬಹುದು. ತನ್ನ ಪತಿಯ ತೋಳ್ಬಲದ ಆಧಿಕ್ಯವನ್ನು ನಂಬಿದವಳೊಬ್ಬಳು ಹೀಗೆನ್ನುತ್ತಾಳೆ, 'ಜಳಧಿಯೊಳಾದ ಮುತ್ತುಗಳೇಂ ಪೊಸತಾದುವೆ? ನಿನ್ನ ತೋಳ ಬಾಳೊಳೆ ಬಲಗರ್ವದಿಂ ತೆಗೆದುಗ್ರ ವಿರೋಧಿ ಮದೇಭ ಮಸ್ತಕ ಸ್ಥಳ ಜಳರಾಶಿಯೊಳ್ ಬಳೆದ ನಿರ್ಮಲ ನಿರ್ವ್ರಣ ವೃತ್ತಮೌಕ್ತಿಯಾವಳಿಯನೆ ತರ್ಪುದು' (೧೦-೪೬) ಸಾಗರದ ಮುತ್ತುಗಳು ಆಕೆಗೆ ಹೊಸತಲ್ಲ. ಅವಳಿಗೆ ಬೇಕಾದುದು ಅವನ ಶಕ್ತಿಯಿಂದ ಶತ್ರುರಾಜರ ಆನೆಗಳ ಕುಂಭಸ್ಥಳವೆಂಬ ಸಾಗರದಲ್ಲಿ ಬೆಳೆದಿರುವ ಶುದ್ಧವಾದ ಮೌಕ್ತಿಕಾವಳಿ. ಇದು ಆತ ತರಬೇಕಾದ ಅಪೂರ್ವ ಉಡುಗೊರೆ. ಇಂತಹ ಸಾಮರ್ಥ್ಯವನ್ನು ಅವನಲ್ಲಿ ಗುರುತಿಸಿಕೊಟ್ಟು ಶಕ್ತಿ ತುಂಬಿ ಯುದ್ಧಕ್ಕೆ ಪ್ರೇರೇಪಿಸುವ ಬಗೆ ಹೆಮ್ಮೆ ಪಡುವಂತದ್ದು. ಇಂತಹ ಶಕ್ತಿ ಸೂಚಕವಾದ ವೀರಾಲಾಪಗಳ ಮೂಲಕವೂ ಪಂಪ ನಾಡ ಅಭಿಮಾನವನ್ನು ಅನಾವರಣಗೊಳಿಸುತ್ತಾನೆ. ನಾಡಿಗಾಗಿ ಮಡಿಯುವುದು, ಸ್ವಾಮಿಕಾರ್ಯಕ್ಕಾಗಿ ಹೋರಾಡುವುದು ಬದುಕಿನ ಪುರುಷಾರ್ಥವೆಂದು ಭಾವಿಸಿದ ವೀರರ ಚಿತ್ರಣ ಇಲ್ಲಿದೆ.

ಪಂಪನ ಭಾಷೆಯ ಬಗೆಗೆ ಹೇಳುವುದಾದರೆ ಆತನು ಬಳಸಿದ್ದು ಇಂದು ನಾವು ಹಳಗನ್ನಡವೆಂದು ಹೇಳುವ ಅವನ ಸಮಕಾಲೀನ ಭಾಷೆ. ಪಂಪನ ಕಾಲಕ್ಕೆ ಎಲ್ಲರಿಗೂ ಅದು ಅರ್ಥವಾಗುವ ಭಾಷೆಯಾಗಿದ್ದಿರಬಹುದು. ಕಾವ್ಯ ಭಾಷೆಯ ಬಗೆಗೆ ಪಂಪ ಮಾರ್ಗಕಾರನನ್ನು ಅನುಮೋದಿಸಿದಂತೆ ಕಾಣುತ್ತದೆ. ಮಾರ್ಗಕಾರ ಸಂಸ್ಕೃತಕಾವ್ಯ ಪರಂಪರೆಯ ಹಿನ್ನೆಲೆಯಿಂದ ಕನ್ನಡ ಕಾವ್ಯ ಆಕಾರವನ್ನು ಪಡೆದುಕೊಳ್ಳುತ್ತಿದ್ದ ಸಂದರ್ಭದಲ್ಲಿ 'ನಾಳ್ನುಡಿಯ ಬೆಡಗು' ಕಾವ್ಯ

ಭಾಷೆಯಲ್ಲಿ ಸೇರಬೇಕೆಂಬ ಅಭಿಪ್ರಾಯ ಹೊಂದಿದವನಾಗಿದ್ದನು. ಹಾಗಾಗಿ ಪಂಪ ಬಳಸಿದ್ದು ಸಾಜದ ಪುಲಿಗೆರೆಯ ತಿರುಳ್ಗನ್ನಡವನ್ನು,

> ರಾಜದ್ರಾಜಕಮೆನಿಸಿದ
> ಸಾಜದ ಪುಲಿಗೆಱೆಯ ತಿರುಳಕನ್ನಡದೊಳ್‌ನಿ
> ರ್ವ್ಯಾಜದೆಸಕದೊಳೆ ಪುದಿದೊಂ
> ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ (೧೪-೨೮)

ಪುಲಿಗೆರೆ ಈಗಿನ ಧಾರವಾಡದ ಒಂದು ಪ್ರದೇಶ. ಪಂಪನ ಮಾತಿನಂತೆ ಅದು ಕನ್ನಡನಾಡಿನ ಹೃದಯಭಾಗವಾಗಿದ್ದು ಅಲ್ಲಿನ ತಿರುಳ್ಗನ್ನಡವನ್ನು ಆತ ಕಾವ್ಯಭಾಷೆಯಾಗಿ ಬಳಸಿಕೊಂಡಿದ್ದಾನೆ. ಸಂಸ್ಕೃತದ ಬಗೆಗೆ ಪಂಪನಿಗೆ ಗೌರವ ಮತ್ತು ಕನ್ನಡದ ಬಗೆಗೆ ಪ್ರೀತಿ. ಹಾಗಾಗಿಯೇ ತನ್ನ ಕಾವ್ಯ ಧೋರಣೆಯನ್ನು ಕುರಿತು ಹೇಳುವಾಗ 'ದೇಸಿಯೋಳ್ ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು' ಎನ್ನುತ್ತಾನೆ. ರಾಜಕೀಯ, ಧಾರ್ಮಿಕ ಚಿಂತನೆ, ಪರಿಸರದ ಆಲೋಚನೆಗಳು, ಯುಗಧರ್ಮ ಮತ್ತು ಮೌಲ್ಯಗಳು ಎಲ್ಲ ಸಂಗತಿಗಳನ್ನು ಹೇಳುವುದಕ್ಕೆ ಕನ್ನಡ ಭಾಷೆಯನ್ನು ಆತ ರೂಪುಗೊಳಿಸಿದ್ದು ಮಹತ್ತಾದ ಸಂಗತಿಯಾಗಿದೆ.

**ಸಾಹಸಭೀಮವಿಜಯ**

ತನ್ನ ಕಾವ್ಯ ಶಕ್ತಿಯ ಆತ್ಮವಿಶ್ವಾಸವಿದ್ದಂತಹ ಕವಿ ರನ್ನ. ಪಂಪನ ಸಮಕಾಲೀನನಾಗಿ ಆತ ಹಾಕಿಕೊಟ್ಟ ಕಾವ್ಯ ಮಾರ್ಗವನ್ನು ಅನುಸರಿಸಿ ಕೃತಿ ರಚನೆ ಮಾಡಿದ ಹಳಗನ್ನಡದ ಕವಿ. ಈತನ ಕೃತಿಯಾದ 'ಸಾಹಸ ಭೀಮವಿಜಯ'ದಲ್ಲಿ ನಾಡು ನುಡಿಯ ಸಂವೇದನೆ ಪ್ರಕಟಗೊಂಡ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

ತನ್ನ ಆಶ್ರಯದಾತನನ್ನು ನಿರ್ಮಲವಾದ ಪವಿತ್ರ ಗುಣವುಳ್ಳವನೆಂಬುದಾಗಿ ಗುರುತಿಸಿ 'ತ್ರಿಮೂರ್ತಿರೂಪ'ನೆಂದು ಕೊಂಡಾಡಿದ್ದಾನೆ. ವೀರ ಮತ್ತು ದಾನಗುಣವನ್ನು ತನ್ನ ಒಡೆಯನಲ್ಲಿ ಕಂಡವನು ರನ್ನ. ಪಂಪನಂತೆಯೇ ರನ್ನ ಕವಿ ಮತ್ತು ಕಲಿ ಎರಡೂ ಆಗಿದ್ದ. ಇದಕ್ಕೆ ಕಾವ್ಯದಲ್ಲಿ ಸಾಕ್ಷಿಯಿದೆ. ತನ್ನ ಕೃತಿಯ ಮತ್ತು ತನ್ನ ಕಾವ್ಯ ಸಾಮರ್ಥ್ಯದ ಬಗೆಗೆ ರನ್ನನೇ ಹೇಳಿಕೊಂಡಿದ್ದಾನೆ. 'ತಾನು ವಾಗ್ದೇವಿಯ ಭಂಡಾರದ ಬೀಗಮುದ್ರೆಯನ್ನು ಮುರಿದವನು', 'ಸುಂದರವಾರ ದೇಸೀಯ ನುಡಿಗಟ್ಟುಗಳನ್ನು ಸೇರಿಸಿ ಕಾವ್ಯ ನಾವೀನ್ಯವನ್ನುಂಟು ಮಾಡಿದವನು', 'ಶೀಲವೆಂಬ ರತ್ನ ಜಲಧಿಯಲ್ಲಿ ಜನಿಸಿದ ಅನರ್ಘ್ಯ ರತ್ನ' ತನ್ನ ಕಾವ್ಯವು ಫಣಿ ಪತಿಯ ಫಣಾರತ್ನದಂತೆ' 'ತಾನು ವನಿತೆಯರ ನಾಯಕ ರತ್ನದಂತೆ' ಮುಂತಾದುವು ರನ್ನ ತನ್ನ ಮತ್ತು ತನ್ನ ಕಾವ್ಯದ ಬಗೆಗೆ

ಹೇಳಿಕೊಂಡ ಮಾತುಗಳು. ಇವನ್ನೆಲ್ಲ ಗಮನಿಸುವಾಗ ಕವಿಯ ಆತ್ಮವಿಶ್ವಾಸದ ಮಟ್ಟವನ್ನು ಗಮನಿಸಿಕೊಳ್ಳಬಹುದು.

ಕಾವ್ಯವಿಮರ್ಶಕರ ಯೋಗ್ಯತೆಯನ್ನು ಕುರಿತು ರನ್ನ ಪ್ರಸ್ತಾಪಿಸುತ್ತಾನೆ.

ಗುಣಮನೆ ತೋರ್ಪಂ ದೋಷದ
ಗುಣಂಗಳನೆ ನೆಗಳ್ದು ತೋರ್ಪ ದುರ್ಜನನುಮದೇಂ
ಗುಣಗಣನೆಗೆ ತೋರ್ಪಂಕೃತಿ
ಗುಣದೋಷ ಪರೀಕ್ಷೆಗಾರನಾರ್ ಬಾಱಪರೋ (೧-೪೮)

ಕಾವ್ಯವನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಶೀಲಿಸುವವನು ನಿಜವಾದ ವಿಮರ್ಶಕ ಎನ್ನುವುದು ರನ್ನನ ಅಭಿಪ್ರಾಯ. ಇದು ಒಪ್ಪತಕ್ಕ ಸಂಗತಿಯೇ ಆಗಿದೆ. ಪರಂಪರೆಯ ಸಾಹಿತ್ಯವನ್ನು ಗಮನಿಸಿದಾಗ, ಕವಿ ಸ್ವತಃ ವಿಮರ್ಶಕನೂ ಆಗಿದ್ದನೆಂಬುದನ್ನು ಗಮನಿಸುವುದಕ್ಕೆ ಅವಕಾಶವಿದೆ. ಇದಕ್ಕೆ ಸಮರ್ಥ ಉದಾಹರಣೆ 'ಕವಿರಾಜ ಮಾರ್ಗ'. ರನ್ನ ಸಮಕಾಲೀನ ಸಮಾಜವನ್ನು ಸೂಕ್ಷ್ಮವಾಗಿ ಗಮನಿಸಿದವನು. ಹಣ ಗಳಿಕೆಯ ಆಸೆಯಿಂದ ಕಾವ್ಯರಚನೆ ಮಾಡುವಂತಹ ಕವಿಗಳನ್ನು ಆತ ಅಲ್ಲಿ ಕಂಡಿರಬೇಕು. ಇದನ್ನು ಕವಿ ಖಂಡಿಸುತ್ತಾನೆ. ದ್ರವ್ಯಾರ್ಜನೆಗಾಗಿ ಸಾಹಿತ್ಯರಚನೆ ಮಾಡುವುದೆಂದರೆ ಸರಸ್ವತಿಗೆ ದ್ರೋಹ ಬಗೆದಂತೆ ಎಂದು ಕಟುವಾಗಿ ಟೀಕಿಸುತ್ತಾನೆ. ಇದು ಎಲ್ಲ ಕಾಲದ ಸಮಾಜಕ್ಕೂ ಅನ್ವಯವಾಗುವ ಮಾತೇ ಸರಿ.

ತನ್ನ ಕಾಲದ ಮೌಲ್ಯವಾದ 'ವೀರ'ವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಗುರುತಿಸಿದ್ದಾನೆ.

ತುಱುಗೋಳೊಳ್ ಪೆಣ್ಬುಯ್ಯಲೊ
ಳಱುವೆಸದೊಳ್ ನಂಟನೆಡರೊಳೂರಳಿವಿನೊಳಂ
ತಱುಸಂದು ಗಂಡು ತನಮನೆ
ನೆಱಪದವಂ ಗಂಡನಲ್ಲನೆಂತುಂ ಷಂಡಂ (೨-೨೪)

ರನ್ನನ ಯುಗಧರ್ಮ ಕ್ಷಾತ್ರ. ಕಾಲ ವೀರಯುಗ. ಸಂದರ್ಭೋಚಿತವಾಗಿ ಕವಿ ಆ ಕಾಲದ ವೀರಜೀವನವನ್ನು ಅಭಿವ್ಯಕ್ತಗೊಳಿಸಿದ್ದಾನೆ. ಮೇಲಿನ ಪದ್ಯವನ್ನು ಆ ಹಿನ್ನೆಲೆಯಿಂದ ಗಮನಿಸಬಹುದು. ಸಾಮರ್ಥ್ಯದ ಪ್ರಕಟಣೆಯ ಸಂದರ್ಭದಲ್ಲಿ ಹೇಡಿಯಂತೆ ಓಡಿ ಹೋಗುವವನು ಸಮಾಜದ ತಿರಸ್ಕಾರಕ್ಕೆ ಗುರಿಯಾಗುತ್ತಿದ್ದ. ಆ ಕಾಲದ ಹೆಣ್ಣು ಮಕ್ಕಳೂ ಕೂಡಾ,

ಮಣಿಕನಕವಸ್ತು ವಿಭೂ
ಷಣಂಗಳಂಕೊಟ್ಟು ಪೆಂಡಿರೊಲ್ವರೆ ಗಂಡರ್
ಗುಣಮನೆ ಮೆರೆವುದು ಶಸ್ತ್ರ

ವ್ರಣಮಂ ನಿನ್ನಂತೆ ಮೆಱೆವುದಿಱೆವಬೆಡಂಗಾ (೨-೫)

ರತ್ನ, ಸ್ವರ್ಣ, ಆಭರಣ ಇದಾವುದೂ ಆ ಕಾಲದ ಸ್ತ್ರೀಗೆ ಬೇಕಾಗಿರಲಿಲ್ಲ. ಇವೆಲ್ಲ ಅವರಿಗೆ ಪ್ರಿಯವಾದ ವಸ್ತುಗಳಾಗಿದ್ದರೂ, ಇದನ್ನು ಮೀರಿ ಅವರ ಬಯಕೆಗಳಿದ್ದುವು. 'ಶತ್ರುಗಳ ಮೈಯಲ್ಲಿ ಶಸ್ತ್ರಗಳಗಾಯ' ಇದು ಆ ಕಾಲಕ್ಕೆ ಮುಖ್ಯವಾಗಿತ್ತು.

ದುರ್ಯೋಧನನ ಮೂಲಕವೂ ರನ್ನ ಕೆಲವು ವೀರೋಚಿತವಾದ ಮಾತುಗಳನ್ನು ಆಡಿಸುತ್ತಾನೆ. 'ಸಮರ ಜಯಂ ದೈವಾಯತ್ತಂ ಅದಱಿಂ ಪುರುಷಕಾರಂ ಎಮಗಾಯ್ತು' ಎಂಬಲ್ಲಿ 'ಯುದ್ಧದಲ್ಲಿ ಜಯಾಪಜಯಗಳು ದೈವೇಚ್ಛೆ, ಪುರುಷ ಪ್ರಯತ್ನ ನಮ್ಮ ಅಧೀನ' ಎನ್ನುವುದರ ಮೂಲಕ ವೀರನಾದವನು ಜಯಾಪಜಯಗಳ ಗೊಡವೆಯಿಲ್ಲದೆ ಹೋರಾಡಬೇಕೆಂಬ ನೆಲೆಯನ್ನು ವ್ಯಕ್ತಪಡಿಸಿದ್ದಾನೆ. ಯುದ್ಧದ ನೀತಿಯನ್ನು ರನ್ನ ಕೃತಿಯಲ್ಲಿ ಗುರುತಿಸಿದ್ದಾನೆ. 'ಲಿಂಗಮಂ ಅಪ್ಪುಕೈದು ಪಿಂಗದೆ ನಿಲೆ, ನೀರನೋಡಿ ಪುಗೆ, ಪೆಣ್ಣುಡೆ ಉಟ್ಟಿರೆ' 'ಪುತ್ತನ್ ಏಜೆ' ಈ ನಾಲ್ಕು ಸಂದರ್ಭಗಳಲ್ಲಿ ಶತ್ರುವನ್ನು ಕೊಲ್ಲಬಾರದಂತೆ. ಶಿವಲಿಂಗವನ್ನು ತಬ್ಬಿಕೊಂಡವನನ್ನು, ಓಡಿ ಹೋಗಿ ನೀರನ್ನು ಹೊಕ್ಕವನನ್ನು, ಸೀರೆಯುಟ್ಟವನ್ನು, ಹುತ್ತವನ್ನು ಹತ್ತಿದವನನ್ನು ಕೊಲ್ಲಬಾರದು. (೧-೨೨) ಇದನ್ನು ತನ್ನ ಆಶ್ರಯದಾತ ಸತ್ಯಾಶ್ರಯ ಪಾಲಿಸಿದನೆಂಬ ಹೆಮ್ಮೆ ರನ್ನನದು. ಜೊತೆಗೆ ಅಂದಿನ ರಾಜಧರ್ಮವನ್ನು 'ಈಯಲ್, ಇರಿಯಲ್, ಶರಣ್ಬುಗೆ ಕಾಯಲ್ ಕ್ಷತ್ರಿಯರೆ ಬಲ್ಲರ್' ಎಂಬಲ್ಲಿಯೂ ಗುರುತಿಸಿದ್ದಾನೆ.

ಯಾವುದೇ ನಾಡನ್ನು ಅಧಃಪತನಕ್ಕೆ ತಳ್ಳುವುದು ಸಂಪತ್ತಿನ ಮೋಹ. ಕೀರ್ತಿಯ ಹಾಗೆ ಐಶ್ವರ್ಯ ಶಾಶ್ವತವಾಗಿ ನಿಲ್ಲುವುದಿಲ್ಲ. 'ಇತ್ತ ಧನಮೇನದು ನಿಲ್ವುದೆ! ಮುನ್ನ ಮಿತ್ತರೆಲ್ಲಿದರ್? ಅವರೀಯೆ ಪೆತ್ತವರುಮೆಲ್ಲಿದರ್? ಆ ಧನಮೆಲ್ಲಿ? ಇಂದ್ರಜಾಲದ ಸಿರಿಗೇಕೆ ಮೆಲ್ಪಡುವಿರಿ?' (೧-೨೫) ಎನ್ನುತ್ತಾ, ಕಣ್ಣುಕಟ್ಟಿದ ಅಥವಾ ಮೋಸದ ಸಂಪತ್ತನ್ನು ಬಯಸಬಾರದೆಂದು ಬೋಧಿಸಿದ್ದಾನೆ. ಎಲ್ಲಾ ಕಾಲಘಟ್ಟದಲ್ಲೂ ಮನುಷ್ಯರು ಧನದಾಹಿಗಳು ಆಗಿದ್ದರೆಂಬುದು ಅರ್ಥೈಸಿಕೊಳ್ಳಬೇಕಾದ ಸಂಗತಿ. ಮಾಯೆಯ ಐಶ್ವರ್ಯಕ್ಕೆ ಮರುಳಾಗದ ಮಾನವನಿಲ್ಲ. ಯಾವ ಬೋಧನೆಗಳು ಮನುಷ್ಯರನ್ನು ಬದಲಾಯಿಸುತ್ತದೆ ಎನ್ನುವುದು ಗೊತ್ತಿಲ್ಲ. ಆದರೆ ಇಲ್ಲೆಲ್ಲ ಸಮಾಜವನ್ನು ಎಚ್ಚರಿಸುವುದು ಒಬ್ಬ ಕವಿಯ ಜವಾಬ್ದಾರಿಯೆನಿಸುತ್ತದೆ. 'ರೊಕ್ಕ ಎರಡಕ್ಕು ದುಃಖ' ಎಂಬ ದಾಸವರೇಣ್ಯರ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಹಣದ ಆಸೆಯಿಂದ ಸಂಬಂಧಗಳನ್ನೇ ಕಳಚಿಕೊಳ್ಳುತ್ತಿರುವ ಪ್ರಸ್ತುತ ಸಮಾಜಕ್ಕೆ ಇದು ತುರ್ತಾಗಿ ರವಾನೆಯಾಗಬೇಕಾದ ಸಂದೇಶವಾಗಿದೆ.

ಸಹೋದರ ವಾತ್ಸಲ್ಯ ಮತ್ತು ಗೆಳೆತನ ಅಚ್ಚುಕಟ್ಟಾಗಿ 'ಸಾಹಸಭೀಮವಿಜಯ'ದಲ್ಲಿ ವ್ಯಾಖ್ಯಾನಿಸಲ್ಪಟ್ಟಿದೆ. ಇದು ಮಡುಗಟ್ಟುವುದು ಯುದ್ಧಭೂಮಿಯಲ್ಲಿ. ದುರ್ಯೋಧನ ಸಂಜಯನ ಜೊತೆ ಹೆಜ್ಜೆಯಿಡುವಾಗ ದುಶ್ಶಾಸನ ಮತ್ತು ಕರ್ಣನ ಶವವನ್ನು ನೋಡಿ ದುರ್ಯೋಧನ ಪ್ರಲಾಪಿಸುವ ಬಗೆ ಮನಸ್ಸನ್ನು ಆರ್ದ್ರಗೊಳಿಸುತ್ತದೆ. ಭ್ರಾತೃತ್ವದ ಮತ್ತು ಗೆಳೆತನದ ಮಾದರಿಯೊಂದನ್ನು ರನ್ನ ನಿರ್ಮಾಣ ಮಾಡಿದ್ದಾನೆ. ಶತ್ರುವಿನ ಮಗ ಮಡಿದು ಬಿದ್ದುದನ್ನು ನೋಡಿ ಮರುಗುವ, 'ನಿನ್ನ ಸಾಮರ್ಥ್ಯ ಮತ್ತು ನಿನಗೆ ಬಂದಂತಹ ಮರಣ ನನಗೆ ಬರಲಿ' ಎಂಬ ನಿವೇದನೆ ಮಾನವಂತಿಕೆಗೆ ಸಾಕ್ಷಿಯಾಗುತ್ತದೆ. ಕೌರವನಿಗೆ ಅಭಿಮನ್ಯುವಿನ ಮೇಲಿರುವ ಅಭಿಮಾನಕ್ಕೆ ಈ ಕೆಳಗಿನ ಮಾತು ಅತ್ಯುತ್ತಮ ನಿದರ್ಶನ.

> ಪಸಿವಿನೊಳನ್ನಮಂ ಪಸಿದು ಬಂದವರ್ಗಿಕ್ಕುವ ಯುದ್ಧರಂಗದೊಳ್
> ಕುಸಿಯದೆ ಸೂರೆಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವಮಾ
> ನಸಿಕೆಯ ನಾಲ್ವರುಂ ನಮಗೆ ವಂದ್ಯರವಂದಿರೊಳೀತನಲ್ತೆ ಸಾ
> ಹಸಧನನೆಂದು ಕೆಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ (೪-೬೦).

ತಾನು ಹಸಿದಿರುವಾಗ ಹಸಿವೆಯಿಂದ ಬಳಲಿ ಬಂದವರಿಗೆ ಉಣಬಡಿಸಿ ತೃಪ್ತಿಪಡಿಸುವ, ರಣರಂಗದಲ್ಲಿ ಹಿಂಜರಿಯದ, ಅನ್ಯರ ಸೊತ್ತನ್ನು ಸುಲಿಗೆ ಮಾಡದ, ಯುದ್ಧದಲ್ಲಿ ಧರ್ಮವನ್ನು ಅಂಗೀಕರಿಸುವ ಉದಾತ್ತ ಮನೋಭಾವನೆಯುಳ್ಳ ನಾಲ್ವರು ಗೌರವಾರ್ಹರೆ. ಈ ನಾಲ್ವರಲ್ಲಿ ಅಭಿಮನ್ಯುವೇ ಸಾಹಸಧನ ಎನ್ನುವುದು ಈ ಪದ್ಯದ ಭಾವ. ಈ ಮೂಲಕ ನಾಡಿನ ಜನರ ಗುಣವನ್ನು ಕವಿ ಪ್ರತಿನಿಧಿಸುತ್ತಾನೆ. ಕನ್ನಡ ನಾಡು ಅತಿಥಿ ಸತ್ಕಾರಕ್ಕೆ ಹೆಸರಾದುದು. ಹಸಿದು ಬಂದವರಿಗೆ ಉಣಬಡಿಸುವ ಗುಣವುಳ್ಳ ಜನರ ನಾಡು ಎಂಬ ಅಭಿಮಾನ ಇಲ್ಲಿದೆ. ರನ್ನ ಬಳಸುವ ನಾಣ್ನುಡಿಗಳ ಮೂಲಕ ಅವನ ದೇಸಿ ಪ್ರಜ್ಞೆಯನ್ನು ಕಂಡುಕೊಳ್ಳಬಹುದು. 'ಬಡಿಗೊಂಡು ಗೋಣಿಪಣ್ಣಂ ಬಡಿವಂತಿರೆ', 'ಪೆಂಕುಳಿನಾಯಂ ಬಡಿವಂತಿರೆ', 'ಪಾಳುಡುವಂ ಬಡಿವಂತಿರೆ' (೩-೧೧) ಹುಚ್ಚುನಾಯಿ ಕೆಟ್ಟ ಉಡು, ಅಪಾಯಕಾರಿಗಳು. ಇಲ್ಲಿ ಮಾನವಂತಿಕೆಗೆ ಬೆಲೆಯಿಲ್ಲ ಎಂಬುದನ್ನು ಈ ಸಾಲುಗಳು ಸೂಚಿಸುತ್ತವೆ. 'ಕಯ್ಪೆ ಸೋರೆಯ ಕುಡಿಯೆಂ ಮಿಡಿಯೇಂ' (೩-೬೧) ಮೀನ್‌ಮೀನಂ ತಿಂಬಂತೆ (೪-೪೧) ಮುಂತಾದುವು ಅವನ ದೇಸೀತನವನ್ನು ಗುರುತಿಸುವ ಸಾಲುಗಳು.

ರನ್ನ ಉಭಯ ಭಾಷಾ ಸಂಪನ್ನನು. ಆದರೂ ಕನ್ನಡ ಭಾಷೆಯ ಬಗೆಗೆ ಈತನಿಗೆ ಅಭಿಮಾನವಿದೆ.

ಕನ್ನಡಮೆರಡುನೂರರ
ಕನ್ನಡಮಾತಿರುಳ ಕನ್ನಡಂ ಮಧುರವ್ಯೋ
ತ್ಪನ್ನಂ ಸಂಸ್ಕೃತಮನೆ ಸಂ
ಪನ್ನಂ ನೆಗಳ್ದುಭಯ ಕವಿತೆಯೊಳ್ ಕವಿರನ್ನಂ (೧-೪೨)

ಬೆಳ್ವೊಲ ಮುನ್ನೂರು ಪುಲಿಗೆರೆ ಮುನ್ನೂರು ಸೇರಿ ಆದ ಆರುನೂರು ಗ್ರಾಮಗಳಲ್ಲಿ ರೂಢವಾಗಿರುವ ತಿರುಳ್ಗನ್ನಡದಲ್ಲಿ ಸಂಸ್ಕೃತದ ಸಂಕರದಿಂದ ಈತನ ಕಾವ್ಯ ಭಾಷೆ ನಿರ್ಮಾಣವಾಗಿದೆ. ವೀರರಸದ ನಿರೂಪಣೆಗೆ ಸಂಸ್ಕೃತ ಪದ್ಯಗಳನ್ನೇ ಕವಿ ಬಳಸಿದ್ದಾನೆ. ವೃಷಸೇನನ ಶೌರ್ಯವನ್ನು ಹೇಳುವಾಗ,

ಮದವದರಿಹಸ್ತಿ ಮಸ್ತಕ
ಭಿದುರಂ (ಭಯ) ವಿಧುರನನ್ಯಬಾಣಚ್ಛಿದುರಂ
ಮದಪತ್ಯ ನಿರ್ವಿಶೇಷಂ
ಮದವದ್ದೋರ್ಲಲಿತನೆತ್ತಣಂ ವೃಷಸೇನಂ (೪-೬೪)

ಸಂಸ್ಕೃತ ಭೂಯಿಷ್ಠವಾದ ಈ ಸಾಲುಗಳಲ್ಲಿ 'ಎತ್ತಣಂ' ಎಂಬುದು ಕನ್ನಡಪದ. ಕೇವಲ ಅನುಕರಣ ಶಬ್ದಗಳ ಮೂಲಕ ಯುದ್ಧದ ಭೀಕರತೆಯನ್ನು ರನ್ನ ಗುರುತಿಸಿದ್ದಾನೆ.

ಥಪ್ಪರಿಥಟ್ಟುಂ ಪೊಟ್ಟೆನೆ
ಧೊಪ್ಪಧೊಗಪ್ಪೆನೆ ದಿಧಿಲ್ ಬುಧಿಲ್ಲೆನೆ ಗದೆಗಳ
ಸೊಪ್ಪು ಸೊವಡಪ್ಪಿನಂ ಸೂ
ಳ್ತಪ್ಪದೆ ಕಡುಕೆಯ್ದುಪೊಯ್ದರೊರ್ವರನೊರ್ವರ್ (೮-೧೧)

ಭೀಮ ದುರ್ಯೋಧನರ ಗದಾಯುದ್ಧದ ಸಂದರ್ಭದಲ್ಲಿ, ದೇಹದ ಯಾವ ಅಂಗಗಳಿಗೆ ಹೊಡೆದುಕೊಂಡರು ಎಂಬುದನ್ನು ಹೇಳುವಾಗ ಅಚ್ಚಗನ್ನಡ ಪದಗಳೇ ನೆನಪಾಗಿವೆ ರನ್ನನಿಗೆ. 'ಅಡಿಯಂ ಕಿಱುದೊಡೆಯಂ, ಪೆರ್ದೊಡೆಯಂ, ಪೊಱವಾಱನುಡಿಯನ್, ಉರಮಂ, ಮುಯ್ವಂ, ಮುಡುಪಂ, ಬೆನ್ನಂ, ಕೊರಲಂ, ನಡುನೆತ್ತಿಯನೆತ್ತಿ ಪೊಯ್ವರ್' (೮-೧೫) ಇಲ್ಲಿ 'ಉರಮಂ' ಎಂಬುದು ಸಂಸ್ಕೃತ ಪದ. ಉಳಿದುದೆಲ್ಲಾ ಕನ್ನಡ ಪದಗಳು.

ಪಂಪನ ಹಾಗೆ ರನ್ನನಲ್ಲಿ ಪ್ರಕೃತಿಯ ವರ್ಣನೆಯಿಲ್ಲ. ಸಂದರ್ಭೋಚಿತವಾಗಿ ಯಾವುದೋ ಮರ, ಯಾವುದೋ ಹಕ್ಕಿ ಮುಂತಾದವು ಕಾಣಿಸಿಕೊಂಡಿವೆ ಹೊರತು ವರ್ಣನೆಗಾಗಿ ಕವಿ ಬರವಣಿಗೆಯನ್ನು ಮೀಸಲಿಟ್ಟಿಲ್ಲ. ಭೀಮ ದುರ್ಯೋಧನರ ಗದಾಯುದ್ಧ ಕಾವ್ಯದ ಕೇಂದ್ರ ಬಿಂದುವಾಗಿದ್ದದ್ದರಿಂದ ಇಂತಹ ಅವಕಾಶಗಳಿಗೆ ಆತ ಅನುವು ಮಾಡಿಕೊಟ್ಟಿಲ್ಲ.

‘ಸಾಹಸಭೀಮವಿಜಯ’ದಲ್ಲಿ ಎಲ್ಲಿಯೂ ಆತ ನಾಡು ನುಡಿಯ ಘೋಷಣೆಯನ್ನು ಮಾಡಿಲ್ಲ. ಆದರೆ ಕಾವ್ಯದ ಕೆಲವು ಸಂಗತಿಗಳ ಆಧಾರದಿಂದ ನಾಡು ನುಡಿಯ ಒಳಗೆ ಅಂತರ್ಗತಗೊಳ್ಳಬಹುದಾದ ಕೆಲವು ವಿಚಾರಗಳನ್ನು ಗುರುತಿಸಿಕೊಟ್ಟಿದ್ದಾನೆ. ಈತ ಸ್ವತಃ ಬಳೆಗಾರ ವಂಶದವನು. ಆದರೆ ಕುಲದ ಸಂಸ್ಕೃತಿಗೆ ಸಂಬಂಧಪಟ್ಟ ಯಾವುದೇ ಸಂಗತಿಗಳೂ ಇವನ ಕಾವ್ಯದಲ್ಲಿ ಗೋಚರಿಸುವುದಿಲ್ಲವೆಂಬುದು ಅಚ್ಚರಿಯ ಸಂಗತಿ.

**ಧರ್ಮಾಮೃತ**

ಧರ್ಮದ ಉದ್ಧಾರಕ್ಕಾಗಿ ಸೃಷ್ಟಿಯಾದ ಕೃತಿ ನಯಸೇನನ ‘ಧರ್ಮಾಮೃತ’. ಈತನ ಏಕೈಕ ಕೃತಿಯಾದ ಧರ್ಮಾಮೃತದೊಳಗೆ ಒಂದು ವಿಶಿಷ್ಟ ಕಥನ ಪ್ರಪಂಚ ನಿರ್ಮಾಣವಾಗಿದೆ. ಇವನಲ್ಲಿ ಸಂಸ್ಕೃತ ಪಾಂಡಿತ್ಯಕ್ಕೆ ಕೊರತೆ ಇರಲಿಲ್ಲ. ಆದರೂ ಈತ ಕನ್ನಡದಲ್ಲೇ ಕೃತಿ ರಚನೆ ಮಾಡಿದ್ದು ಕವಿಯ ಕನ್ನಡ ಪ್ರಜ್ಞೆಗೆ ಸಾಕ್ಷಿ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕಥನಕಲೆಯ ಪರಂಪರೆ ಇದೆ. ಅದು ಕಲಾತ್ಮಕವಾಗಿ ಕಾಣುವುದು ನಯಸೇನನಲ್ಲಿ.

ಕೃತಿಯಲ್ಲಿ ಒಟ್ಟು ೧೪ ಕಥೆಗಳಿವೆ. ಕಥೆ ಹೇಳುವವರು ಗೌತಮ ಗಣಧರರು. ಕೇಳುವವನು ಶ್ರೇಣಿಕ ಮಹಾರಾಜ. ಇಲ್ಲಿ ಬೇರೆ ಬೇರೆ ಕಥನ ತಂತ್ರಗಳನ್ನು ಉಪಯೋಗಿಸಲಾಗಿದೆ. ಜೈನ ಮತದ ತತ್ವಗಳನ್ನು ಮತ್ತು ಅದರ ಹಿರಿಮೆಯನ್ನು ತಿಳಿಸಲು ವಿಭಿನ್ನ ಕಥೆಗಳನ್ನು ಕಂಡರಿಸಿದ್ದಾರೆ. ನರೇಂದ್ರಸೇನಾಮುನಿಪ ಈತನ ಗುರು. ನಯಸೇನ ಪಂಡಿತ ಮುನಿ. ಈತನ ಕೃತಿ ಜನತೆಗಾಗಿ ಬರೆದ ಮೊದಲ ‘ಜೈನಪುರಾಣ’ವೆಂಬ ಹಿರಿಮೆಗೆ ಪಾತ್ರವಾಗಿದೆ. ಹದಿನಾಲ್ಕು ಆಶ್ವಾಸಗಳಿದ್ದು ಒಂದೊಂದರಲ್ಲೂ ಒಂದೊಂದು ಕಥೆಯಿದೆ. ಜಿನಮತದ ಸಾರವನ್ನು ತನ್ನ ಕೃತಿಯಲ್ಲಿ ತೋರಿದ್ದಾನೆ. ಕಥೆಯನ್ನು ಹೇಳುತ್ತಲೇ ಮಧ್ಯೆ ಮಧ್ಯೆ ಕಾಣಿಸಿಕೊಳ್ಳುವ ಸಾದೃಶ್ಯ ಮಾಲಿಕೆಗಳಿವೆ.

‘ನಾಣ್ನುಡಿ ದೇಸೀವೆತ್ತ ಪೊಸನುಡಿ ಮಾರ್ಗಂ’ ಇದು ಕವಿಯ ಶೈಲಿಯ ಆದರ್ಶ. ‘ಮಿಸುಕದ ಸಕ್ಕದ’ವನ್ನು ಬಳಸುವವರನ್ನು ಕಡೆಗಣಿಸಿ ‘ಸುದ್ಧಕನ್ನಡ’ವನ್ನು ಬಳಸಬೇಕೆಂಬುದು ನಯಸೇನನ ಅಭಿಮತ ಹಾಗೂ ಔಚಿತ್ಯಪ್ರಜ್ಞೆ. ಕವಿಗಳು ಎದುರಿಸಿದ ಭಾಷಿಕವಾದ ಸಮಸ್ಯೆಯೊಂದನ್ನು ಕವಿ ಇಲ್ಲಿ ಪ್ರಸ್ತಾಪಿಸಿದಂತಿದೆ. ಈತ ಸಂಸ್ಕೃತವನ್ನು ಅರಿತ ಕವಿಯಾದರೂ ಆ ಭಾಷೆಯ ವ್ಯಾಮೋಹದಿಂದಾಗುವ ಅನಾಹುತದ ಕಲ್ಪನೆ ಈತನಿಗಿತ್ತು. ಹಾಗಾಗಿಯೇ,

ಸಕ್ಕದಮಂ ಪೇಳ್ವೊಡೆ ನೆರೆ
ಸಕ್ಕದಮಂ ಪೇಱ್ಗೆ; ಸುದ್ಧ ಕನ್ನಡದೊಳ್ ತಂ

ದಿಕ್ಕುವುದೆ ಸಕ್ಕದಮಂ?

ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (೧-೪೨)

ಎನ್ನುವ ಈತನ ಮಾತುಗಳಲ್ಲಿ ಭಾಷಾ ಸಂಕರಕ್ಕೆ ಒಪ್ಪದ ಗಟ್ಟಿ ನಿಲುವು ವ್ಯಕ್ತವಾಗುತ್ತದೆ. ತುಪ್ಪ ಮತ್ತು ಎಣ್ಣೆಯ ಬೆರಕೆ ಈತನಿಗೆ ಒಪ್ಪದ ಸಂಗತಿ. ಹೀಗಾಗಿ ಜನಸಾಮಾನ್ಯರ ಸವಿಗನ್ನಡದಲ್ಲಿ ಈತ ಕಾವ್ಯ ರಚಿಸಿದ್ದಾನೆ. ಜೈನದರ್ಶನದ ಎಂಟು ಅಂಗಗಳಿಗೆ ಎಂಟು ಕಥೆಗಳು, ಪಂಚಾಣು ವ್ರತಗಳ ವಿವರಣೆಗೆ ಐದು ಕಥೆಗಳನ್ನು ಹೇಳುತ್ತಾನೆ. ಉಪಮೆಗಳ ಸರಮಾಲೆಯನ್ನೇ ಪೋಣಿಸುತ್ತಾ ಹೋಗುತ್ತಾನೆ. ಇವನ್ನೆಲ್ಲ ತೆಗೆದರೆ ಕಾವ್ಯದಲ್ಲಿ ಉಳಿಯುವುದು ಕೇವಲ ಧರ್ಮದ ಸಂಗತಿಗಳು ಮಾತ್ರ. ತಾನು ಕಾವ್ಯ ರಚನೆ ಮಾಡುವುದು ಧರ್ಮವನ್ನು ಉದ್ಧರಿಸಲು ಮಾತ್ರ ಎಂಬ ನಿಲುವು ಅವನಲ್ಲಿ ಇತ್ತು.

ಕೃತಿಯ ಪ್ರತಿಯೊಂದು ಆಶ್ವಾಸವೂ 'ಶ್ರೀಮನ್ನಯಸೇನದೇವ ವಿರಚಿತಮಪ್ಪ ಧರ್ಮಾಮೃತ' ಎಂದೇ ಮುಕ್ತಾಯಗೊಳ್ಳುವುದು ಈತ ಮುನಿಯಾಗಿದ್ದನೆಂಬ ಸಂಗತಿಗೆ ಹೆಚ್ಚು ಪುಷ್ಟಿ ನೀಡುತ್ತದೆ. ತಾನೊಬ್ಬ ತರ್ಕಶಾಸ್ತ್ರಜ್ಞನೆಂಬ ಹಿರಿಮೆಯೂ ಜೊತೆಗಿದೆ. ಆದರೂ ತನಗಿಂತ ಹಿರಿಯ ಕವಿಗಳನ್ನು ನೆನಪಿಸಿಕೊಳ್ಳುತ್ತಾ ಅವರ ಕಾವ್ಯಗಳ ವಿಶೇಷ ಗುಣಗಳು ತನ್ನ ಕಾವ್ಯದಲ್ಲಿಯೂ ನೆಲೆಸಲೆಂದು ಪ್ರಾರ್ಥಿಸುತ್ತಾನೆ.

ಕಾವ್ಯದೊಳಗೆ ಆತ ನೀಡುವ ಜನ ಜೀವನದ ಚಿತ್ರಣವೂ ಕನ್ನಡಕ್ಕೆ ಆತನ ವಿಶಿಷ್ಟ ಕೊಡುಗೆಯೆಂದರೆ ತಪ್ಪಾಗದು. ಆಸೆ ಬುರುಕ ವಸುಭೂತಿ, ಪ್ರಜೆಗಳನ್ನು ಪೀಡಿಸುವ ಗುಣವುಳ್ಳವನಾದ ಲಲಿತಾಂಗನೆಂಬ ಅರಸು ಕುಮಾರ ಮುಂತಾದ ಪಾತ್ರಗಳ ವರ್ಣನೆಯನ್ನು ಈತ ಮಾಡಿದ್ದಾನೆ. ಸೌರಾಷ್ಟ್ರದ ವರ್ಣನೆಯ ಸಂದರ್ಭ, 'ಉನ್ನತಿವೆತ್ತ ತೆಂಕನಾಡು' ಮೊದಲಾದೆಡೆಗಳಲ್ಲಿ ನಾಡಿನ ಅಭಿಮಾನದ ಎಳೆಗಳು ಕಾಣಿಸಿಕೊಳ್ಳುತ್ತವೆ.

ನುಡಿ ಬಳಕೆಯ ದೃಷ್ಟಿಯಿಂದ 'ಧರ್ಮಾಮೃತ'ವನ್ನು ವಿಶೇಷವಾಗಿ ಗಮನಿಸಬಹುದು. ಧರ್ಮಪ್ರಚಾರ ಕವಿಯ ಮುಖ್ಯ ಉದ್ದೇಶವಾಗಿದ್ದುದರಿಂದ ಇವನಲ್ಲಿ ಜನ ಭಾಷೆ ಕಾವ್ಯಭಾಷೆಯಾಗುತ್ತದೆ. ಜನ ಬಳಕೆಯ ಆಡು ಮಾತುಗಳು, ಗಾದೆ, ನುಡಿಗಟ್ಟು, ಉಪಮೆಗಳು ಸಂದರ್ಭಾನುಸಾರ ಕಾಣಿಸಿಕೊಂಡು ಅವನ ದೇಸಿತನದ ಪ್ರೇಮಕ್ಕೆ ನಿದರ್ಶನಗಳಾಗುತ್ತವೆ. ಲೋಕಾನುಭವದ ಮಾತುಗಳು, ವೃತ್ತಿ ಸಂಬಂಧವಾದ ವಸ್ತುವಿವರಗಳು, ನಂಬಿಕೆ, ನಡವಳಿಕೆಗಳು, ಆಚರಣೆಗಳು, ಕೃಷಿ ಜ್ಞಾನದ ಕುರಿತಾದ ಸಂಗತಿಗಳೂ ಕಾವ್ಯದಲ್ಲಿ ಕಾಣಿಸಿಕೊಂಡಿವೆ.

ನಯಸೇನ ತನ್ನ ಕಾವ್ಯದಲ್ಲಿ ನಿರ್ಮಾಣ ಮಾಡಿರುವ ಅಲಂಕಾರ ಪ್ರಪಂಚ ವಿನೂತನವಾದುದು. ಈ ಪ್ರಪಂಚದೊಳಗೆ ಸಸ್ಯ, ಪ್ರಾಣಿ, ಪಶು, ಪಕ್ಷಿ, ಕ್ರಿಮಿ-ಕೀಟಗಳು ಜಾಗ ಪಡೆದುಕೊಂಡಿವೆ. ಉದಾಹರಣೆಗೆ, 'ಮದ್ದು ಗಣಿಕೆಯಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣವಾಗಿ ತೋರ್ಪಂತೆ' (೧-೯೮), 'ಎಣ್ಣೆ ಮುಟ್ಟಿದ ಕುಂಬಳಕಾಯಂತೆ ಒಳಗೊಳಗೆ ಕೊಳೆತು' (೩-೧೮) 'ಬಿದಿರೆಳೆಯೊಳ್ ರಸಮನರಸುವ, ಕಳ್ಳಿಯಪಾಲೊಳ್ ಬೆಣ್ಣೆಯನರಸುವ' (೧೨-೧೪) 'ಕುರಿವಿಂಡಂ ತೋಳಂ ಪೊಕ್ಕಂತೆ, ಗರ್ಭಿಣಿಯನೆಮ್ಮೆ ತಗುಳ್ದಂತೆ' (೨-೭೧) 'ಸುಂಟಿತಿಂದ ಕೋಡಗದಂತೆ' (೧ - ೧೧೪), ಮೇಲಿನ ಉದಾಹರಣೆಗಳಿಂದ ಕವಿಯು ತನ್ನ ಸುತ್ತಲ ಸಮಾಜವನ್ನು ಮತ್ತು ಅಲ್ಲಿಯ ಸೂಕ್ಷ್ಮ ಸಂಗತಿಗಳನ್ನು ಗಮನಿಸಿದ ಬಗೆಯನ್ನು ಅರಿತುಕೊಳ್ಳಬಹುದು.

'ಧರ್ಮಾಮೃತ'ದಲ್ಲಿ ಜೋಡಿ ಪದಗಳ ಬಳಕೆ ಗಮನ ಸೆಳೆಯುತ್ತದೆ. 'ಖೇಚರಿಯಲ್ಲೆ ನಾಂ ಗೀಚರಿಯೆಂ' (೩-೨೬), 'ಅಜ್ಜಂ ಪಜ್ಜಂ'. (೧-೩೧) ಲೋಕಾನುಭವದ ಮಾತುಗಳು ಕವಿಯು ಲೋಕವನ್ನು ಗ್ರಹಿಸಿದ್ದಕ್ಕೆ ಸಾಕ್ಷಿಯಾಗುತ್ತದೆ. ಲೋಕದ ಜನರ ನಡವಳಿಕೆಯು ಈ ಕೃತಿಯಲ್ಲಿ ದಾಖಲಾಗಿದೆ. "ಲೋಗರ್ ಪಿಲಿಯಂ ಪಿಡಿದೊಡಮದೇಂ ಬಿಡೆಂಬರ್ತಾಮೊಂದಿಲಿಯಂ ಪಿಡಿದೊಡಮದು ಪೆರ್ಬುಲಿಯೆಂಬರ್' (೧-೧೩೩), ಪಿಂಗದು ಡೊಂಕೆಂಬ ನಾಯ ಬಾಲದ ತೆರದಿಂ(೨-೫೮), 'ಕಡುಗಾಯ್ದುಂ ನೀರ್ ಮನೆಯಂ ಸುಡಲರಿಗುಮೆ' (೨-೬೩) ಇಂತಹ ಅನೇಕ ನಿದರ್ಶನಗಳು ಕೃತಿಯಲ್ಲಿವೆ. ಹೀಗೆ ದೇಸೀಯತೆಯನ್ನು ಮೆರೆದಿರುವ ಧರ್ಮಾಮೃತವು ಸಂಸ್ಕೃತದ ಮುಷ್ಟಿಯಿಂದ ಕನ್ನಡವನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡಿದೆ. ಅದಕ್ಕಾಗಿಯೇ ಇಲ್ಲಿ ಪಂಡಿತಮಂಡಳಿಗೆ ಮಾತ್ರ ಅರ್ಥವಾಗುವಂತಿದ್ದ ಸಮಾಸಭೂಯಿಷ್ಠವಾದ ಶೈಲಿಯನ್ನು ಬಿಟ್ಟು ಸಾಮಾನ್ಯ ಶ್ರಾವಕವರ್ಗ ಓದುವಂತಹ ಸರಳವಾದ ಕಥನಕಲೆಯನ್ನು ಅಳವಡಿಸಿಕೊಳ್ಳಲಾಗಿದೆ.

ನಯಸೇನನು ಜನ ಭಾಷೆಯ ಹರಿಕಾರ. ಇವನ ಕಾವ್ಯದ ಭಾಷೆ 'ಸುದ್ಧಗನ್ನಡ'ದ ಒಂದು ಯಶಸ್ವಿ ಪ್ರಯೋಗ. ಇವನ ದೃಷ್ಟಿ ಸಾಹಿತ್ಯ ರಚನೆಗಿಂತ ಮಿಗಿಲಾಗಿ ಧರ್ಮ ಪ್ರಸಾರದ ಕಡೆಗಿದ್ದುದರಿಂದ ಇವನ ಬರವಣಿಗೆಯ ಭಾಷೆ ಜನರಿಗೆ ಸುಲಭದಲ್ಲಿ ಅರ್ಥವಾಗುವ ಜನವಾಣಿಯಾಯಿತು. ಕನ್ನಡದಲ್ಲಿ ಚಿಂತಿಸಿ ಸಂಸ್ಕೃತದಲ್ಲಿ ಹೇಳುವವನು ಕವಿಯೆ? ಎನ್ನುವ ಸವಾಲಿನೊಂದಿಗೆ ಕಾವ್ಯ ರಚನೆಗೆ ಕೈಯಿಕ್ಕಿ, ಹಳೆಯ ಕತೆಗಳೊಂದಿಗೆ ಸಮಕಾಲೀನ ನೆಲೆಗಟ್ಟಿನ

ಲೋಕಾನುಭವವನ್ನು ಕಟ್ಟಿಕೊಡುವ ಕೆಲಸವನ್ನು ಯಶಸ್ವಿಯಾಗಿ ಮಾಡಿದ್ದೇ ಇವನ ಹಿರಿಮೆಯಾಗಿದೆ.

**ಕಬ್ಬಿಗರಕಾವ**

ಆಧುನಿಕ ಪೂರ್ವದ ಕಾವ್ಯ ಸಂದರ್ಭವನ್ನು ನಾಡು –ನುಡಿಯ ಪ್ರತಿನಿಧೀಕರಣದ ದೃಷ್ಟಿಯಿಂದ ಪರಿಭಾವಿಸುವಾಗ ಗಮನ ಸೆಳೆಯುವವನು ಆಂಡಯ್ಯ. ಎಲ್ಲರಿಗೂ ಒಪ್ಪಿತವಾಗಿರುವ ಭಾಷಾನೆಲೆಯಲ್ಲಿ ಬದಲಾವಣೆಯನ್ನು ಮಾಡಿ, ಸಂಸ್ಕೃತದ ಭಾರಕ್ಕೆ ತೂಗಿದ ಕನ್ನಡವನ್ನು ಆ ಭಾರದಿಂದ ಕಳಚಿ ಸ್ವತಂತ್ರವಾಗಿ ನಿಲ್ಲಿಸುವ ಪ್ರಯತ್ನ ಮಾಡಿದ ಕವಿ ಈತ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಈತ ಕಾಣಿಸಿದ್ದು ವಿಶಿಷ್ಟ ಸಂದರ್ಭದಲ್ಲಿ. ಯಾಕೆಂದರೆ, ಹತ್ತರಿಂದ ಹನ್ನೆರಡನೆ ಶತಮಾನ 'ಹಳಗನ್ನಡದ ಸುವರ್ಣಯುಗ'ವೆನಿಸಿದ ಕಾಲ. ಸಂಸ್ಕೃತದ ಪ್ರಭಾವ ಗಾಢವಾಗಿದ್ದ ಈ ಕಾಲ ಘಟ್ಟದಲ್ಲಿ ಆ ಭಾಷೆಯ ನೆರವಿಲ್ಲದೆ ಕಾವ್ಯ ರಚನೆ ಅಸಾಧ್ಯವೆಂಬ ಮನಸ್ಥಿತಿ ಮೂಡಿತ್ತು. ಇಂತಹಾ ಮನಸ್ಥಿತಿಯನ್ನು ನಿರಾಕರಿಸಿ ಕಾವ್ಯ ರಚನೆಗೆ ಮುಂದಾದ ಕವಿ ಆಂಡಯ್ಯ.

ಪ್ರಕೃತ ಕವಿಯ ಕಾಲ–ಊರು–ಕೃತಿಯ ಹೆಸರು ಬಹು ಚರ್ಚೆಗೆ ಒಳಗಾಗಿದೆ. ಮಾಡಿರುವ ನಾಡಿನ ವರ್ಣನೆಯ ಆಧಾರದಿಂದ ಬನವಸೆ ಈತನ ಊರಾಗಿರಬೇಕೆಂದೂ, ಕಾಮ ಮತ್ತು ಕದಂಬ ಕಾಮನ ಸಮೀಕರಣ ಕಾವ್ಯದಲ್ಲಿ ಗೋಚರಿಸಿದ್ದರಿಂದ ಅಲ್ಲಿ ಈತ ಆಶ್ರಯ ಪಡೆದಿದ್ದರಬಹುದೆಂದು ಊಹೆಯಿದೆ. ಕೃತಿಯ ನಾಮಧೇಯದಲ್ಲಿಯೂ ಸಂದೇಹಕ್ಕೆಡೆಯಿದೆ. ಇಲ್ಲೆಲ್ಲ ಊಹೆಗಳೇ ಕೆಲಸ ಮಾಡಿವೆ ಹೊರತು ನಿಶ್ಚಿತವಾದ ಆಧಾರಗಳ ಅಲಭ್ಯತೆಯಿದೆ. ಒಟ್ಟಿನಲ್ಲಿ ಕವಿಯ ಹೆಸರು ಆಂಡಯ್ಯ; ಕೃತಿಗೆ ಅವನೇ ನೀಡಿರುವ ಹೆಸರು 'ಕಾವನಗೆಲ್ಲ'.

'ಕಬ್ಬಿಗರಕಾವ'ದ ಕಥೆಯನ್ನು ಸಂಕ್ಷಿಪ್ತವಾಗಿ ಹೀಗೆ ಗ್ರಹಿಸಿಕೊಳ್ಳಬಹುದು. 'ಪೂವಿನ ಪೊಳಲಿನ ರಾಜನಾದ ನನೆಯಂಬನು ವಿನೋದಾರ್ಥವಾಗಿ ತನ್ನ ಕರುಮಾಡದ ಬಳಿಯ ತೋಟದಲ್ಲಿ ಸುತ್ತಾಡುತ್ತಿರುವಾಗ ಅಪ್ಸರೆಯೊಬ್ಬಳನ್ನು ಗಮನಿಸುತ್ತಾನೆ. ಆ ಅಪ್ಸರೆ ತನ್ನ ಪೂರ್ವ ಕತೆಯನ್ನು ನೆನಪಿಗೆ ತಂದು, ಕಂಪಿನಪೊಳಲಿಗೆ ಅರಸನಾಗಿದ್ದ ನೀನು ಮುಕ್ಕಣ್ಣನೊಡನೆ ಯುದ್ಧಮಾಡಿ ಅವನನ್ನು ಅರೆವೆಣ್ಣಾಗಿಸಿದುದರಿಂದ, ನೀನು ಎಲ್ಲಾದರೂ ತಲೆ ಮರೆಸಿಕೊಂಡು ಹೋಗು, ಹೆಂಡತಿಯನ್ನು ಅಗಲಿ, ನಿನ್ನ ಕಾಮನೆಂಬ ಹೆಸರನ್ನೇ ಮರೆತು ಹೋಗು ಎಂದು ಶಿವನಿಂದ ಶಾಪ ಹೊಂದಿದ. ನನ್ನ ಈ ಮಾತನ್ನು ಕೇಳಿದಾಗಲೇ ಆ ಶಾಪದ ಪ್ರಭಾವ ಮುಗಿದು ಹೋಯಿತು' ಎಂದು ತಿಳಿಸಿ ಹೊರಟು ಹೋಗುತ್ತಾಳೆ. ಆ ಸಮಾಚಾರವನ್ನು ತಿಳಿದು ಇಚ್ಛೆಗಾರ್ತಿ

ಅವನನ್ನು ಕರೆದೊಯ್ದು ಇಬ್ಬರೂ ಮೊದಲಿನಂತೆ ಸುಖದಲ್ಲಿರುವರು. ಇದು ಪೌರಾಣಿಕ ಪರಂಪರೆಯ ಶಿವ ಮತ್ತು ಕಾಮನ ಕಥೆಗಿಂತ ಭಿನ್ನವಾಗಿದೆ. ಶಿವಪಾರಮ್ಯದ ದೃಷ್ಟಿಕೋನ ಮತ್ತು ಕಾಮಾತೀತ ದಾಂಪತ್ಯ ಲೋಕಹಿತದ ಕಲ್ಯಾಣವಾಗುವ ಸಂಗತಿಯನ್ನು ಪೌರಾಣಿಕ ಪರಂಪರೆ ತಿಳಿಸಿ ಕೊಟ್ಟಿದೆ. ಆಂಡಯ್ಯನ ಕೃತಿಯಲ್ಲಿ ಇದು ಸ್ವಲ್ಪ ಭಿನ್ನತೆಯನ್ನು ತಾಳುತ್ತದೆ. ಕಾಮನ ಕೈಯಲ್ಲಿ ಶಿವ ಸೋಲುತ್ತಾನೆ. ಇದು ಬಹುಶಃ ಕದಂಬ ಕಾಮದೇವನ ವಿಜಯವನ್ನು ಪರ್ಯಾಯವಾಗಿ ಸೂಚಿಸಿದ್ದೂ ಇರಬಹುದೆಂಬ ಅಭಿಪ್ರಾಯವಿದೆ.

ಆರಂಭದಲ್ಲೂ ತನ್ನ ಕಾವ್ಯಶಕ್ತಿಗೆ ಪ್ರೇರಕವಾದ ಶಕ್ತಿಯ ಸ್ತುತಿಯೊಂದಿಗೆ, ಕಾವ್ಯ ಸತ್ವವನ್ನು ಪರಿಚಯಿಸುತ್ತಾ, 'ಕನ್ನಡದೊಳ್ಪಿನ ನುಡಿಯಂ ಮುನ್ನಿದರೊಳೆ ನೋಡಿ ತಿಳಿದುಕೊಳ್ವುದು ಚದುರಂ'. (ಕಬ್ಬಿಗರ ಕಾವ ಪು.೮) ಎನ್ನುತ್ತಾ, ಚತುರರು ಕನ್ನಡದ ಒಳ್ಳೆಯ ನುಡಿಗಟ್ಟನ್ನು ಇದರಲ್ಲಿ ನೋಡಿ ತಿಳಿದುಕೊಳ್ಳಲಿ ಎನ್ನುತ್ತಾನೆ. ಚತುರರಿಗೆ ತೆರೆದಿಟ್ಟ ಕಾವ್ಯವಿದು. ಮಾತ್ರವಲ್ಲ, ತಾನು ಅಚ್ಚಗನ್ನಡದಲ್ಲಿ ಈ ಕಾವ್ಯವನ್ನು ಹೇಳಿದ್ದಕ್ಕೆ ಕಾರಣವನ್ನು ವಿವರಿಸುತ್ತಾನೆ.

'ಸೊಗಯಿಪ ಸಕ್ಕದಂ ಬೆರೆಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಳಲಾರರಿನಿತುಂ ಸಲೆ ಮುನ್ನಿನ ಪಂಪನಾಳ್ದ ಕಬ್ಬಿಗನದು ಮಾತನಾಡಿದವೊಲಂದಮನಾಳ್ದಿರೆ ಬಲ್ಲು ನೆಟ್ಟಗೆ ದೊರೆಕೊಂಡು ದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ'. (ಪುಟ – ೧೫) ಸೊಗಸಾದ ಸಂಸ್ಕೃತದ ನೆರವಿಲ್ಲದೆ ಕನ್ನಡದಲ್ಲಿಯೂ ಅಷ್ಟೇ ಸೊಗಸಾದ ಕಾವ್ಯ ರಚನೆ ಸಾಧ್ಯ ಎಂಬುದನ್ನು ಕವಿ ಗುರುತಿಸಿದ್ದಾನೆ. ಸಂಸ್ಕೃತದ ಕತೆಯನ್ನು ಕನ್ನಡದ ಕತೆಯಾಗಿಸಿ, ಕಾವ್ಯ ನಾಯಕನಾದ ಮನ್ಮಥನನ್ನು ಕನ್ನಡಿಗನನ್ನಾಗಿಸಿದ್ದಾನೆ. ಸುಮಾರು ೧೦ ರಿಂದ ೧೫ ಪದ್ಯಗಳಲ್ಲಿ ನಾಡು– ನುಡಿಯ ಅಭಿಮಾನ ಅನಾವರಣಗೊಂಡದ್ದು ವಿನೂತನ ಸಂಗತಿಯಾಗಿದೆ. ನಾಡಿನೊಳಗಡೆ ಸೇರಿ ಹೋಗುವ ಎಲ್ಲ ಸಂಗತಿಗಳೂ ಆಕರ್ಷಕವಾಗಿ ವರ್ಣನೆಗೊಳಗಾಗಿವೆ.

'ಪಲವುಂ ನಾಲಗೆಯುಳ್ಳವಂ ಬಗೆವೊಡದು ಬಣ್ಣಿಸಲ್ಕಾರನಾನೆಲನಂ' ಎನ್ನುತ್ತಾ, ಆದಿಶೇಷನಿಗೆ ವರ್ಣನೆಗೆ ಅಸಾಧ್ಯವಾದ ಕನ್ನಡ ನಾಡಿನ ಸಿರಿ ಸೊಬಗನ್ನು ತಾದಾತ್ಮ್ಯತೆಯಿಂದ ದಾಖಲಿಸಿದ್ದಾನೆ. ನಾಡ ಸೌಂದರ್ಯಕ್ಕೆ ಅಕ್ಷರ ರೂಪವನ್ನು ಕೊಟ್ಟು ನಾಡನ್ನು ಪ್ರತಿನಿಧೀಕರಿಸಿದ ಆಂಡಯ್ಯನ ಅನನ್ಯ ಶ್ರದ್ಧೆ ಶ್ಲಾಘನೀಯವಾದುದು. ಈ ಸಂಭ್ರಮದಲ್ಲಿ ಕವಿಗೆ 'ಕಂಪಿನ ಪೊಳಲು' ನಾಮ ಮಾತ್ರವಾಗಿ ಧಮನಿಗಳಲ್ಲಿ ಕನ್ನಡನಾಡೇ ತುಂಬಿ ಹೋಗುತ್ತದೆ. ಈ ಸಂದರ್ಭದಲ್ಲಿ ಮೂಡಿ ಬಂದ ಉತ್ಕೃಷ್ಟ ಸಾಲುಗಳು ನಾಡಿನ ಬಗೆಗಿನ ಭಾವಗೀತೆಗಳೆಂದರೆ ಉತ್ಪ್ರೇಕ್ಷೆಯಿಲ್ಲ. ಕವಿಯ ಅಂತರಂಗ – ಬಹಿರಂಗ ಜಾಗ್ರತವಾಗಿದ್ದಾಗ ಮಾತ್ರ ಇದು ಸಾಧ್ಯ. ಇಲ್ಲಿಯ

ಮಂದಮಾರುತ, ಅರಳಿದ ಹೂಗಳ ಚಿತ್ತಾರ, ಬಾಗಿನಿಂತ ಮೋಡದ ಹಿಂಡು, ಚೆಲುವಿನ ಕೆಂದೆಂಗು, ಮಾವು, ಅಡಕೆ ಇವೆಲ್ಲವೂ ನಾಡಿನ ಕಟ್ಟುವಿಕೆಯಲ್ಲೂ ಅಂತರ್ಗತಗೊಳ್ಳುತ್ತವೆ.

ರಾಜನ ವರ್ಣನೆಯಲ್ಲಿಯೂ ಕವಿಯ ಅಭಿಮಾನ ಪುಟಿದೇಳುತ್ತದೆ. ಆ ಕಾಲದ ಮೌಲ್ಯಗಳಾದ ವೀರ, ತ್ಯಾಗ, ಸತ್ಯವಂತಿಕೆ ಮುಂತಾದುವನ್ನು ಕಾಮದೇವನ ಮೂಲಕ ಅನಾವರಣಗೊಳಿಸುತ್ತಾನೆ. ಬದುಕಿನ ನೀತಿಯ ಜೊತೆಗೆ ಯುದ್ಧದ ನೀತಿಯೂ ಕಾವ್ಯದಲ್ಲಿದೆ. 'ತನಗೆ ಸವನಪ್ಪವಂ ಪೊಣರ್ದನೆ ಕಾದುವುದಜ್ಜನಪ್ಪವಂಗೆರಗುವುದು' ಸಮಬಲರಲ್ಲಿ ಹೋರಾಟ, ಹಿರಿಯರಿಗೆ ಶರಣಾಗತಿ ಎಂಬ ನೀತಿಯ ಮಾತು ಪ್ರಕಟಗೊಂಡಿದೆ. ಪುರಾಣದಲ್ಲಿ ಶಿವನ ಗೆಲುವಾದರೆ, ಇಲ್ಲಿ ಕಾಮನ ಗೆಲುವು. ಇದು ರಾಜನ ಬಗೆಗೆ ಕವಿಯ ಅಭಿಮಾನದ ಪ್ರಕಟನೆ.

ಆಂಡಯ್ಯನ ನುಡಿಯ ಬಗೆಗಿನ ಅಭಿಮಾನವನ್ನು ಗಮನಿಸುವುದಾದರೆ, ಕವಿಯ ಕಾಲ ಕ್ರಿ.ಶ. ಸು. ೧೩ನೇ ಶತಮಾನದ ಹಳಗನ್ನಡದ ಸುವರ್ಣಯುಗ ಮುಗಿಯುತ್ತಲಿರುವ ಕಾಲ ಘಟ್ಟ. ಸಂಸ್ಕೃತದ ಪ್ರಭಾವವನ್ನು ನಿಧಾನವಾಗಿ ಕಳಚಿಕೊಂಡು ಕನ್ನಡ ಮೈಕೊಡವಿ ನಿಲ್ಲಬೇಕಿತ್ತು. ಇಂತಹ ಸಂದರ್ಭದಲ್ಲಿ ಅಚ್ಚಗನ್ನಡವನ್ನು ಕಾವ್ಯ ಭಾಷೆಯಾಗಿ ವಿನ್ಯಾಸಗೊಳಿಸಿಕೊಂಡವನು ಆಂಡಯ್ಯ. ಕಾವ್ಯದ ಉದ್ದೇಶ 'ಅಚ್ಚಗನ್ನಡದಿಂ ಬಿಗಿವೊಂದಿರೆ' ಕಾವ್ಯ ರಚಿಸುವುದು. ಹೊಸ ಪರಂಪರೆಯನ್ನು ಸೃಷ್ಟಿಸುವ ಉದ್ದೇಶವಾಗಲಿ, ಧರ್ಮವನ್ನು ಎತ್ತಿ ಹಿಡಿಯುವ ನೆಲೆಯಾಗಲಿ ಈ ಕವಿಯಲ್ಲಿ ಇದ್ದಂತಿಲ್ಲ. ಸಂಸ್ಕೃತ ಬೆರಕೆ ಇಲ್ಲದೆಯೇ ಕನ್ನಡದಲ್ಲಿ ಮನೋಹರವಾಗಿ ಕಾವ್ಯ ರಚಿಸಲು ಹಿರಿಯ ಕವಿಗಳು ಸಮರ್ಥರಾಗಲಿಲ್ಲ. ಮಾತನಾಡಿದ ಹಾಗೆ ಸೊಗಸಾಗಿ ಹೇಳುವ ಸಾಮರ್ಥ್ಯ ಈತನಿಗೆ ಲಭಿಸಿದೆ ಎಂದು ತಿಳಿದವರು ಹೇಳಿದ್ದರಿಂದ ಅವರ ಇಚ್ಛೆಯನ್ನು ಈಡೇರಿಸಬೇಕೆಂದು ಅಚ್ಚಗನ್ನಡ ಬಂಧದಲ್ಲಿ ಕಬ್ಬಿಗರಕಾವನ ಅನುಗ್ರಹದಿಂದ ತಾನು ಹೇಳಿದೆ ಎಂಬುದು ಕವಿಯ ಕಾವ್ಯೋದ್ದೇಶ. ಈ ನೆಲೆಯಿಂದ ಕಾಮನ ಶೌರ್ಯವನ್ನು ಮೆಚ್ಚಿ ಹೊಗಳಿದವನು ಆಂಡಯ್ಯ. ಇವನ ಕೃತಿಗೆ ಒಂದು ಖಂಡಕಾವ್ಯದ ಪರಿಮಿತಿಯಿದೆ. ಹೇಳಹೊರಟಿರುವ ಕತೆಯೂ ಈ ಚೌಕಟ್ಟಿನಲ್ಲಿಯೇ ಪೂರ್ಣಗೊಳ್ಳುವಂತದ್ದು. ಧರ್ಮದ ವಿಡಂಬನೆಯಿಲ್ಲದೆ, ಕಾಮನ ಕತೆಯಾಗಿದ್ದರೂ ಅಸಹ್ಯವೆನಿಸುವ ಶೃಂಗಾರದ ವರ್ಣನೆಗಳಿಲ್ಲದೆ ತನ್ನ ಮೆಚ್ಚುಗೆಯ ಅರಸನ ರಾಜಕೀಯ ಚರಿತ್ರೆಯನ್ನು ಈ ಕೃತಿಯಲ್ಲಿ ದಾಖಲಿಸಿದ್ದಾನೆ. ಪ್ರಕೃತಿಯ ಎಲ್ಲಾ ಅಂಶಗಳನ್ನು ಕಾವ್ಯದ ಪಾತ್ರಗಳಾಗಿ ಅಂತರ್ಗತಗೊಳಿಸಿಕೊಂಡದ್ದು ಕಾವ್ಯಕ್ಕೆ ಮೆರಗು ನೀಡಿದೆ.

ಈ ಮೂಲಕ ಆಂಡಯ್ಯ ಮಹತ್ತರವಾದುದನ್ನು ಸಾಧಿಸಿದ್ದಾನೆ. ಆದರೆ ಅವನು ನಿರ್ಮಾಣ ಮಾಡಿದ ಈ ಹೊಸ ಕಾವ್ಯ ಮಾರ್ಗಕ್ಕೆ ಯಾವ ಉತ್ತರಾಧಿಕಾರಿಯೂ ಕಾಣಲಿಲ್ಲ.

ಭಾಷೆಯ ಒಡಲಿನಲ್ಲಿ ನಡೆದ ಪರಿವರ್ತನೆಗೆ ಈತ ಕಾರಣವಾದನೇ ಹೊರತು ಪಂಪನಂತೆ ಹೊಸತೊಂದು ಪರಂಪರೆಗೆ ಕಾರಣನಾಗಲಿಲ್ಲ.

# ಅಧ್ಯಾಯ –೨

## ಕನ್ನಡ ಕಾವ್ಯಗಳಲ್ಲಿ ಪ್ರಯೋಗಗಳ ಮಾದರಿ

೨:೧ ವಚನಕಾರರು ಮತ್ತು ನಾಡು–ನುಡಿ

೨:೨ ಗಿರಿಜಾಕಲ್ಯಾಣ

೨:೩ ಹರಿಶ್ಚಂದ್ರ ಕಾವ್ಯ

೨:೪ ಕರ್ಣಾಟ ಭಾರತ ಕಥಾಮಂಜರಿ

೨:೫ ಪ್ರಭುಲಿಂಗಲೀಲೆ

೨:೬ ರಾಮನಾಥ ಚರಿತೆ

೨:೭ ಜೈಮಿನಿ ಭಾರತ

೨:೮ ಕಂಠೀರವ ನರಸರಾಜ ವಿಜಯ

೨:೯ ಸರ್ವಜ್ಞನ ನಾಡು–ನುಡಿಯ ಸ್ವರೂಪ

೨:೧೦ ಅನುಭವಾಮೃತ

೨:೧೧ ರಾಮಾಶ್ವಮೇಧ

## ಅಧ್ಯಾಯ –೨

### ಕಾವ್ಯಗಳಲ್ಲಿ ಪ್ರಯೋಗಗಳ ಮಾದರಿ

ಮಧ್ಯಕಾಲೀನ ಕನ್ನಡ ಕವಿಗಳು ಪ್ರಯೋಗಗಳ ಸಾಧಕರು. ದೇಸೀಛಂದಸ್ಸಿನಲ್ಲಿ ಕಾವ್ಯ ರಚಿಸಿ ಅದು ಹಾಡುಗಬ್ಬದ ರೂಪದಲ್ಲಿ ಜನಮಾನಸದಲ್ಲಿ ನೆಲೆಸುವಂತೆ ಮಾಡಿದ್ದು ಇವರ ಸಾಧನೆ. ಇದು ಕವಿ–ಕಾವ್ಯ–ಸಹೃದಯ ಸಂಬಂಧವನ್ನು ಗಟ್ಟಿಗೊಳಿಸಿತು. ಹಾಗಾಗಿ ಶ್ರೀಸಾಮಾನ್ಯನೂ ಓದಿ ಅಥವಾ ಕೇಳಿಸಿಕೊಂಡು ಸಾಹಿತ್ಯವನ್ನು ಅಸ್ವಾದಿಸುವ, ಅರ್ಥೈಸಿಕೊಳ್ಳುವ ಅವಕಾಶ ಇದರಿಂದ ಲಭ್ಯವಾಯಿತು. ಇದು ಆ ಕಾಲಘಟ್ಟದ ಸಾಹಿತ್ಯಿಕ ಸಾಧನೆ. ನಡುಗನ್ನಡ ಕಾಲಘಟ್ಟದಲ್ಲಿ ನುಡಿ ಪ್ರಯೋಗಕ್ಕೆ ಮಹತ್ವದ ಸ್ಥಾನ ನೀಡಲಾಯಿತು. ಈ ಯುಗದ ಕವಿಗಳಿಗೆ ಭೌಗೋಳಿಕ ನಕ್ಷೆಯ ಬಗೆಗೆ ಆತಂಕವಿರಲಿಲ್ಲ. ಅದನ್ನು ಈಗಾಗಲೇ ಪ್ರಾಚೀನ ಕವಿಗಳು ಗುರುತಿಸಿದ್ದರು. ಇವರ ಕಣ್ಣ ಮುಂದೆ ಸುರಕ್ಷಿತವಾದ ನಾಡು ಇತ್ತು. ಪಂಡಿತಮಂಡಳಿಗೆ ಸೀಮಿತವಾಗಿದ್ದ ಕಾವ್ಯಗಳನ್ನು ಜನಪರವಾಗಿ ಮಾಡುವುದಕ್ಕಾಗಿ ಛಂದಸ್ಸಿನ ವಿವಿಧ ಪ್ರಯೋಗಗಳನ್ನು ಇವರು ಮಾಡಿದರು. ಕಾವ್ಯ ರಚನೆಯ ವಿವಿಧ ಮಾದರಿಗಳನ್ನು ನೆಲದ ಸತ್ವದಿಂದ ಪಡೆದು ಕನ್ನಡ ನುಡಿಗೊಂದು ಮನ್ನಣೆಯನ್ನು ಒದಗಿಸಿದರು. ವಿವಿಧ ದೇಸೀ ಛಂದಸ್ಸುಗಳಲ್ಲಿ ಕಾವ್ಯ ರಚನೆಗೆ ಕನ್ನಡವನ್ನು ಅಣಿಗೊಳಿಸಿದ ಹಿರಿಮೆಗೆ ಈ ಕವಿಗಳು ಕಾರಣರಾದರು. ಸಂಸ್ಕೃತದಿಂದ ಬಿಡುಗಡೆಗೊಂಡು ಕಾವ್ಯವು ಜನಮುಖಿಯಾಗಬೇಕೆಂಬ ಹಂಬಲ ಇಲ್ಲಿ ವ್ಯಕ್ತವಾಗುತ್ತದೆ. ಕಾಲ ಧರ್ಮಕ್ಕನುಗುಣವಾಗಿ ಭಕ್ತಿ ಪರಂಪರೆಯನ್ನು ನಾಡಿನೆಲ್ಲೆಡೆ ವಿಸ್ತರಿಸಲು ಇವರಿಗೆ ಸಾಧ್ಯವಾಯಿತು.

ಇದು ಕಾವ್ಯದ ವಸ್ತು, ಭಾಷೆಯಲ್ಲಿ ಬದಲಾವಣೆಯಾದಂತೆ ಕೆಲವು ರಂಗಗಳಲ್ಲಿ ಮೌಲ್ಯಗಳ ಪರಿವರ್ತನೆಯ ಕಾಲವೂ ಆಯಿತು. ಆವರೆಗೆ ಮೌಲ್ಯವಾಗಿದ್ದ 'ವೀರ'ತ್ವವು ಪಲ್ಲಟಗೊಂಡು ಸಹನೆ, ಸಹಜೀವನಕ್ಕೆ ಬೆಲೆ ಬಂದಿತು. ಅಹಿಂಸೆ, ಮಾನವೀಯತೆಗೆ ಮನ್ನಣೆ

ದೊರೆಯಿತು. ಸತ್ಯವೆಂಬುದು ಹರ, ಹರನೆಂಬುದು ಸತ್ಯ ಎಂಬ ತತ್ವವನ್ನು ಬಿಂಬಿಸಲು ರಾಘವಾಂಕನು 'ಹರಿಶ್ಚಂದ್ರ ಕಾವ್ಯ'ವನ್ನು ಬರೆದರೆ, ತ್ಯಾಗ-ಭೋಗಗಳ ಸಮನ್ವಯವನ್ನು 'ಭರತೇಶ ವೈಭವ' ಗುರುತಿಸಿಕೊಟ್ಟಿತು. ಸಂಚಿಯ ಹೊನ್ನಮ್ಮ 'ಹದಿಬದೆಯ ಧರ್ಮ'ದ ಮೂಲಕ ಲಿಂಗ ಭೇದದ ನೆಲೆಯ ಶೋಷಣೆಯನ್ನು ಎತ್ತಿ ತೋರಿ ಸಮಾನತೆಯ ಸಂದೇಶ ಸಾರಿದ್ದಾರೆ. ಅಶಾಶ್ವತವಾದ ಮತ್ತು ಇಹ-ಪರ ಎರಡಕ್ಕೂ ದುಃಖಕಾರಿಯಾದ ಸಂಪತ್ತಿನ ಅನಾಹುತವನ್ನು ದಾಸವರೇಣ್ಯರು ಪರಿಚಯ ಮಾಡಿಕೊಟ್ಟರು. ಹಾಗಾಗಿ ಈ ಕಾಲ ಘಟ್ಟವು ಕನ್ನಡ ಭಾಷೆಯ ಸಹಜ ಬಳಕೆ, ಸಮರ್ಥ ಅಭಿವ್ಯಕ್ತಿಯ ಕಾರಣದಿಂದ ಚಾರಿತ್ರಿಕ ಮಹತ್ವ ಪಡೆದಿದೆ.

**ವಚನಕಾರರು ಮತ್ತು ನಾಡುನುಡಿ**

ಕಾವ್ಯ ಜಗತ್ತು ರಾಜಕೇಂದ್ರಿತವಾಗದೆ ಸಾಮಾನ್ಯ ಮನುಷ್ಯ ಕೇಂದ್ರಿತವಾಗಬೇಕೆಂಬ ಆಶಯದೊಂದಿಗೆ ಕಾಣಿಸಿಕೊಂಡದ್ದು ಮಧ್ಯಕಾಲೀನ ಸಾಹಿತ್ಯ. ಹನ್ನೆರಡನೆಯ ಶತಮಾನ ಸಾಹಿತ್ಯಿಕ ಬೆಳವಣಿಗೆ ಮತ್ತು ಬದಲಾವಣೆಯ ದೃಷ್ಟಿಯಿಂದ ಗಮನಾರ್ಹವಾದುದು. ಈ ಕಾಲಘಟ್ಟದ ಕವಿಗಳಿಗೆ ಪಂಡಿತರನ್ನು ಮೆಚ್ಚಿಸುವ ಒತ್ತಡವಿರಲಿಲ್ಲ. ರಾಜಸತ್ತೆಯನ್ನು ಒಬ್ಬ ಕವಿ ಮೀರಿನಿಲ್ಲುವ ಛಲ-ಬಲವನ್ನು ತುಂಬಿದವರು ಶರಣರು. 'ನಿನಗೆ ಕೇಡಿಲ್ಲವಾಗಿ ಆನೊಲಿದಂತೆ ಹಾಡುವೆ' ಎಂಬುದು ಕವಿ ಸ್ವಾತಂತ್ರ್ಯದ ಅಭಿವ್ಯಕ್ತಿಗೆ ಸಾಕ್ಷಿಯೆನಿಸುತ್ತದೆ. ವಚನಕಾರರದು ವೈಯಕ್ತಿಕ ಪ್ರಯತ್ನವಾಗದೆ ಸಾಂಘಿಕ ಪ್ರಯತ್ನವಾಯಿತು. ಕನ್ನಡ ಪರವಾದ ಚಿಂತನೆ ಈ ಕಾಲಘಟ್ಟದ ಅನೇಕ ಕವಿಗಳಲ್ಲಿ ಮತ್ತು ವಚನಕಾರರಲ್ಲಿಯೂ ಮೂಡಿ ಬಂದಿದೆ. ಶರಣರ 'ಸೂಳ್ನುಡಿ' ಈ ಕಾಲದ ಬೆಲೆ ಕಟ್ಟಲಾಗದ ದೊಡ್ಡ ನಿಧಿಯಾಗಿದೆ. ಧರ್ಮ ಎಲ್ಲರಿಗೂ ತೆರೆದ ಬಾಗಿಲಾಗಿ ಪರಿಣಮಿಸಿದ್ದು ವಚನಗಳ ಕಾಲಘಟ್ಟದಲ್ಲಿ. ಜಾತಿ, ವರ್ಗ, ಲಿಂಗ ಭೇದಗಳ ನಿವಾರಣೆಗೆ ಪಣತೊಟ್ಟವರು ಇವರು.

ವಚನಕಾರರ ನಾಡಿನ ಕಲ್ಪನೆ ವಿಶಿಷ್ಟವಾದುದು. ಇವರು ಎಲ್ಲಿಯೂ 'ನಾಡು' ಮತ್ತು 'ನುಡಿ'ಯ ಬಗೆಗೆ ಯಾವುದೇ ಉದ್ಘೋಷಣೆಯನ್ನು ಮಾಡದೆ ಕನ್ನಡ ನಾಡನ್ನು ಕಟ್ಟಿದವರು. ವಚನಕಾರರ ಹೆಸರಿನ ಜೊತೆಗೆ ನಾಡಿನ ಗ್ರಹಿಕೆಯೂ ಇದೆ. ನಾಡಿನ ಕಲ್ಪನೆ ಮುಖ್ಯವಾಗಿ ವ್ಯಕ್ತಗೊಂಡದ್ದು 'ಕಲ್ಯಾಣ'ದ ಮೂಲಕವಾದರೂ, ಪ್ರಾದೇಶಿಕತೆಯೆ ಇಲ್ಲಿ ಎದ್ದು ಕಾಣುತ್ತದೆ. ಬಸವಣ್ಣನ ಕೂಡಲಸಂಗಮ, ಕಲ್ಲಯ್ಯನ ಹಾವಿನಹಾಳ, ಮಾಚಯ್ಯನ ಗೊಬ್ಬೂರು ಮುಂತಾದವು ಉದಾಹರಣೆಗಳು. ಈ ರೀತಿಯಾಗಿ ವಚನಗಳ ಮೂಲಕ ಪ್ರಾದೇಶಿಕತೆಯ ಅಸ್ಮಿತೆಯನ್ನು, ಅನನ್ಯತೆಯನ್ನೂ ಉಳಿಸಿಕೊಂಡವರು ವಚನಗಾರರು.

ಐಹಿಕ ಮತ್ತು ಪಾರಮಾರ್ಥಿಕ ಜೀವನವನ್ನು ಸಮನ್ವಯಗೊಳಿಸುತ್ತಾ, ದಯೆಯೇ ಧರ್ಮದ ಮೂಲವೆಂದು ಸಾರುತ್ತಾ, ಕಾಯಕವೇ ಕೈಲಾಸವೆಂದು ನಂಬಿ ನಡೆ-ನುಡಿ ಒಂದಾಗಿ ಬಾಳಿದವರು ವಚನಕಾರರು. ಇಲ್ಲಿ ಸಮಾಜದ ವಿವಿಧ ಸ್ತರದಿಂದ ಬಂದವರು ಜಾತಿ ಭೇದವಿಲ್ಲದೆ ಸಾಹಿತ್ಯಾಭಿವ್ಯಕ್ತಿಯಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದು ವಚನ ಚಳುವಳಿಯ ಪ್ರಮುಖ ಸಾಧನೆ. ಅತ್ಯಂತ ಸರಳ ಭಾಷೆ, ಸರಳ ಬದುಕಿನ ಮೂಲಕ ಸಾರ್ಥಕ್ಯದ ಬದುಕನ್ನು ಬದುಕಿದವರು ವಚನಕಾರರು. ಸ್ತ್ರೀ-ಪುರುಷರ ನಡುವಿನ ಅಂತರವನ್ನು ಅಳಿಸಿ ಹಾಕಿ ವಿಪ್ರ ಹಾಗೂ ಅಂತ್ಯಜರನ್ನು ಸಮಾನತೆಯ ಚೌಕಟ್ಟಿನಲ್ಲಿರಿಸಿ ಎಲ್ಲರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟದ್ದು ಇವರ ಹಿರಿಮೆ. ಇವರ ಸಾಮಾಜಿಕ ಚಿಂತನೆಯ ಪ್ರತಿಪಾದನೆ ಎಲ್ಲರನ್ನು ಎಚ್ಚರಿಸುವಂತದ್ದು.

ವಚನ ಕಾಲಘಟ್ಟದಲ್ಲಿ ಸಾಮಾಜಿಕ ಪರಿವರ್ತನೆಯ ಜೊತೆಗೆ ಸಾಹಿತ್ಯಿಕ ಪರಿವರ್ತನೆಯೂ ಕಾಣಿಸಿತು. ರಾಜನನ್ನು, ಪಂಡಿತ ಮಂಡಳಿಯನ್ನು ತೃಪ್ತಿಪಡಿಸಬೇಕಾದ ಅರಮನೆಯ ವರ್ಣನೆಗಳು, ಅತಿರಂಜಿತವಾದ ಅಷ್ಟಾದಶ ವರ್ಣನೆಗಳು ಬದಿಗೆ ಸರಿದವು. ರಾಜ ಕೇಂದ್ರಿತ ಮತ್ತು ಅಧಿಕಾರ ಕೇಂದ್ರಿತವಾದ ಕಾವ್ಯ ಜಗತ್ತು ಮನುಷ್ಯ ಕೇಂದ್ರಿತವಾಯಿತು. ಧಾರ್ಮಿಕ ಜೀವನದಲ್ಲಿ ಎಲ್ಲರಿಗೂ ಸಮಾನ ಅವಕಾಶ, ಅಂತರಂಗದ ಶುದ್ಧಿಯ ಮಹತ್ವ, ಕಾಯಕ ತತ್ವ, ಸದಾಚಾರ, ಸದ್ಭಕ್ತಿ, ಸಮರಸದ ಜೀವನವನ್ನು ಬೋಧಿಸಿದ ಬಸವಣ್ಣ ವಿಶಿಷ್ಟವಾದ ನಾಡನ್ನು ಕಟ್ಟುವ ಪ್ರಯತ್ನ ಮಾಡಿದ್ದಾನೆ. ಇವನ ವಚನಗಳ ಭಾಷೆ ಪರಿಪಕ್ವ ಹೃದಯದ, ಮಾಗಿದ ಅನುಭವದ ಪ್ರತೀಕ. ಲೋಕ ಜೀವನದ ವಿಪುಲ ಅನುಭವಗಳು ಇಲ್ಲಿವೆ.

'ಕೊಲ್ಲೆನಯ್ಯಾ ಪ್ರಾಣಿಗಳ ಮೆಲ್ಲೆನಯ್ಯಾ ಬಾಯಿಚ್ಚೆಗೆ, ಒಲ್ಲೆನಯ್ಯಾ ಪರಿಸತಿಯ ಸಂಗವ' ಜೀವದಯೆ ಸ್ತ್ರೀ ಗೌರವ ಮುಂತಾದ ಪರಿಶುದ್ಧ ಮನಸ್ಸಿಗೆ, ಸಾರ್ಥಕತೆಯ ಬದುಕಿಗೆ ಈ ಸಾಲುಗಳೇ ನಿದರ್ಶನ. ನಡೆ-ನುಡಿ ಒಂದಾದ ಬದುಕಿಗೆ ಮಾದರಿ ವಚನಕಾರರು. 'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು' ಎನ್ನುವುದು ವಚನಕಾರರ ನುಡಿ ಪ್ರತಿಜ್ಞೆ, ಇಂತಹ ಅರ್ಥಪೂರ್ಣವಾದ ಮಾತುಗಳು ಸರ್ವ ದೇಶದ ಸರ್ವ ಕಾಲದ ಜನರ ಕೈ ದೀವಿಗೆಗಳಾಗಿವೆ. ಅಂತೆಯೇ ಕಾಯಕತತ್ವ, ತನ್ನ ಅನ್ನವನ್ನು ತಾನೇ ಸಂಪಾದಿಸಿ ಬಾಳುವ ಆರೋಗ್ಯಪೂರ್ಣ ಸಮಾಜ ವ್ಯವಸ್ಥೆಯ ಆಶಯ ಇಲ್ಲಿ ಕಾಣುತ್ತದೆ.

ಇವರಾರೂ ಸಾಹಿತ್ಯ ರಚನೆಯ ಹಂಬಲವುಳ್ಳವರಾಗಿರಲಿಲ್ಲ. ತಾವು ಹೇಳಬಹುದಾದ ವಿಶಿಷ್ಟ ವಿಚಾರಗಳನ್ನು ದೇವರ ದಾಸಿಮಯ್ಯನಿಂದ ಪ್ರಾರಂಭಗೊಂಡಿದ್ದ 'ವಚನ'ವೆಂಬ ಬಂಧದಲ್ಲಿ ಅನಾವರಣಗೊಳಿಸಿದರು. 'ಪರಿಸರ ಪ್ರಜ್ಞೆ' ನಾಡನ್ನು ಕಟ್ಟುವ ಅಥವಾ ಪ್ರತಿನಿಧೀಕರಿಸುವ ಅಂಗವೇ ಆಗಿದ್ದು, ಈಗಾಗಲೇ ಪರಂಪರೆಯ ಕವಿಗಳ ಪ್ರಕೃತಿ ಪ್ರೇಮ ಅಥವಾ ಪರಿಸರ ಪ್ರಜ್ಞೆಯ ಕುರಿತು ಚರ್ಚಿಸಲಾಗಿದೆ. ವಚನಕಾರರೂ ಪ್ರಕೃತಿಗೆ ಸ್ಪಂದಿಸಿದವರೇ. ಇವರು ತಮ್ಮ ಸುತ್ತಲಿನ ಒಟ್ಟು ಪರಿಸರವನ್ನು ಹೇಗೆ ಕಂಡರು? ಎಂಬುದು ಕುತೂಹಲದ ಸಂಗತಿಯಾಗುತ್ತದೆ. ಮಹಾ ಕಾವ್ಯಗಳ ರಚನೆಯಲ್ಲಿ ಪ್ರಕೃತಿಯ ವರ್ಣನೆ ಕಡ್ಡಾಯವಾಗಿತ್ತು. ಆದರೆ ವಚನಕಾರರಿಗೆ ಈ ನಿರ್ಬಂಧವಿಲ್ಲ. ವಚನಗಳ ರಚನೆಯ ಉದ್ದೇಶವೇ ಬೇರೆಯಾದ ಕಾರಣ ಇಲ್ಲಿ ಒತ್ತಾಯದ ಮತ್ತು ಉದ್ದೇಶ ರಹಿತ ವರ್ಣನೆಗಳಿಗೆ ಅವಕಾಶವೇ ಇಲ್ಲ. ಪ್ರಸ್ತುತ ಉಪಲಬ್ಧವಿರುವ ವಚನಗಳಲ್ಲೂ ಗಿಡ–ಮರ, ಪ್ರಾಣಿ–ಪಕ್ಷಿ, ನದಿ–ಸಾಗರಗಳ ಉಲ್ಲೇಖ ಕಂಡುಬರುತ್ತದೆ. ಪರಿಸರದ ವಸ್ತುಗಳೆಲ್ಲ ವಚನಗಳಲ್ಲೂ ಚೈತನ್ಯವನ್ನು ಪಡೆಯುತ್ತವೆ. ಹೂವು, ಗಾಳಿ, ಮರಗಳೆಲ್ಲ ಸಜೀವ ವಸ್ತುಗಳಾಗಿ ಪರಿಣಮಿಸುತ್ತವೆ. ಅಕ್ಕಮಹಾದೇವಿ ಹೆಣ್ಣುತನದ ಪರಿಭಾಷೆಯನ್ನು ಬಳಸಿಕೊಂಡು ಇವುಗಳಲ್ಲಿ ಜೀವಂತಿಕೆಯ ಭಾಷೆಯನ್ನು ಬಳಸುತ್ತಾಳೆ.

ಅಳಿಸಂಕುಲವೇ ಮಾಮರವೇ ಬೆಳದಿಂಗಳೇ ಕೋಗಿಲೆಯೇ
ನಿಮ್ಮೆಲ್ಲರನೂ ಒಂದು ಬೇಡುವೆನು
ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವನ ಕಂಡಡೆ
ಕರೆದು ತೋರಿರೇ

ಇದು ಆಕೆಯ ನಿವೇದನೆ. ಇಲ್ಲೊಂದು ವಿಶಿಷ್ಟ ಸಂವಾದ ನಿರ್ಮಾಣಗೊಂಡಿದೆ. ಅಕ್ಕಮಹಾದೇವಿ ತನ್ನೊಡೆಯನಾದ ಚೆನ್ನಮಲ್ಲಿಕಾರ್ಜುನನನ್ನು ಹುಡುಕಲು ಪ್ರಕೃತಿಯ ಎಲ್ಲ ಸಂಗತಿಗಳನ್ನೂ ಬಳಸಿಕೊಂಡು ಬಹಳ ಆತ್ಮೀಯವಾಗಿ ಸಂವಾದಿಸುವ ಬಗೆ ಇಲ್ಲಿದೆ. ತನ್ನ ಒಡೆಯನನ್ನು ಹುಡುಕುವ ಸಾಮರ್ಥ್ಯವನ್ನು ಅವುಗಳಿಗೆ ಆರೋಪಿಸುತ್ತಾಳೆ. ಪ್ರಕೃತಿ ಇಲ್ಲಿ ಚೈತನ್ಯವನ್ನು ಪಡೆದುಕೊಳ್ಳುತ್ತದೆ. ಕಾಡು–ಕಾಡಿನ ಜೀವಜಗತ್ತು ಅವರನ್ನು ಪ್ರಭಾವಿಸಿದೆ. ಅಕ್ಕ ಕನ್ನಡ ನಾಡಿನ ಶಿವಶರಣೆ. ಉಡುತಡಿಯಲ್ಲಿ ಉದ್ಭವಿಸಿ, ಕಲ್ಯಾಣದಲ್ಲಿ ಕವಲೊಡೆದು ಕನ್ನಡ ನಾಡಿನ ಹೊಲಮೇರೆಗಳನ್ನೆಲ್ಲಾ ಬೆಳಗಿಸಿ ಕದಳಿಯಲ್ಲಿ ಕಣ್ಮರೆಯಾದವಳು.

ಇಂತಹ ವಚನಗಾರ್ತಿ 'ವನವೆಲ್ಲಾ ನೀನೆ, ವನದೊಳಗಣ ತರುವೆಲ್ಲ ನೀನೆ' ಎನ್ನುತ್ತಾ ಫಲ ಸಮೃದ್ಧವಾಗಿರುವ ವೃಕ್ಷಗಳನ್ನು ಕಂಡಾಗ ನಿಸರ್ಗದ ವೈಶಿಷ್ಟವನ್ನು ಗುರುತಿಸಿದ್ದಾಳೆ.

ಈಳೆ, ನಿಂಬೆ, ಮಾವು ಮಾದಲಕ್ಕೆ
ಹುಳಿನೀರೆರೆದವರು ಯಾರು?
ಕಬ್ಬು ಬಾಳೆ ಹಲಸು ನಾರಿವಾಳಕ್ಕೆ
ಸಿಹಿ ನೀರೆರೆದವರು ಯಾರು?
ಕಲವೆ ರಾಜನ್ನ ಶಾಲ್ಯನ್ನಕ್ಕೆ
ಓಗರದ ಉದಕವೆರೆದವರು ಯಾರು?
ಇಂತೀ ಜಲವು ಒಂದೆ, ನೆಲವು ಒಂದೇ, ಆಕಾಶವೂ ಒಂದೇ

ಎನ್ನುವುದು ಅಕ್ಕನ ಮಾತು. ಇವಳ ಪ್ರಯಾಣ ಅತ್ಯಂತ ವಿಸ್ತಾರವಾದುದು. ಈ ಪ್ರಯಾಣದಲ್ಲಿ ಆಕೆಗೆ ಅಲ್ಲಿಯ ನೆಲವೆಲ್ಲ ಅವಿಮುಕ್ತ ಕ್ಷೇತ್ರ. ಎಡಹುವ ಹರಳುಗಳೆಲ್ಲ ಚಿಂತಾಮಣಿ. ಈಕೆ ನಿಸರ್ಗ ಪ್ರೇಮಿ. ದಾರಿಯುದ್ದಕ್ಕೂ ನಿಸರ್ಗ ಸೌಂದರ್ಯವನ್ನು ಕಣ್ಣು ತುಂಬಿಸಿಕೊಳ್ಳುತ್ತಾ, ಪರಮಾತ್ಮನ ಸೃಷ್ಟಿಯನ್ನು ಹೊಗಳುತ್ತಾ ಮುಂದೆ ಸಾಗಿ ಕದಳಿಯ ಬನವನ್ನು ಪ್ರವೇಶಿಸಿ ಧ್ಯಾನಾಸಕ್ತಳಾಗುತ್ತಾಳೆ. 'ಶರಣರು ಮೆಟ್ಟಿದ ಅವನಿಯೆ ಚೆಲುವಿನ ಪುಣ್ಯದ ಧರೆ' ಎನ್ನುತ್ತಾ ಆಕೆ ಶರಣಾಗುತ್ತಾಳೆ.

ಅನುಭವ ಮಂಟಪವನ್ನು ಸೇರಿದ ಅಕ್ಕನ ಧ್ಯಾನ ಸದಾ ಚೆನ್ನಮಲ್ಲಿಕಾರ್ಜುನನಲ್ಲಿ ಲೀನವಾಗುವುದನ್ನು ನೋಡಿ ನೀಲಾಂಬಿಕೆ, ಗಂಗಾಬಿಕೆಯರು ಅವಳನ್ನು ಚೇಷ್ಟೆ ಮಾಡಿದಾಗ ಆಕೆ ಹೇಳುವ ಕನಸಿನಲ್ಲಿ ಕಾಣುವ ಪರಿಕರಗಳು 'ಅಕ್ಕಿ, ಅಡಕೆ, ಓಲೆ, ತೆಂಗಿನಕಾಯಿ' ನಮ್ಮ ನಾಡಿನಲ್ಲಿ ಭಿಕ್ಷೆಗೆ ಸಲ್ಲುವ ಸಂಗತಿಗಳಿವು. ಅಕ್ಕಿ ಅಡಕೆ ಇಲ್ಲದೆ ಯಾವ ದಾನವೂ ಇಲ್ಲ. ಮಾತ್ರವಲ್ಲ ಇವು ಈ ನಾಡಿನ ಪ್ರಮುಖ ಬೆಳೆಗಳು ಆಗಿವೆ. ಶ್ರೀಶೈಲದತ್ತ ಆಕೆ ಪ್ರಯಾಣ ಬೆಳೆಸಲು ಬಯಸಿದಾಗ ಅವಳಿಗೆ ಶುಭವನ್ನು ಹಾರೈಸುವ ರೀತಿ, ಅನುಭವ ಮಂಟಪದ ಸಮಗ್ರ ಶರಣರು ಬೀಳ್ಕೊಡುವ ರೀತಿ ಇಂದಿಗೂ ಮದುವೆಯಾದ ಹೆಣ್ಣನ್ನು ಕಳುಹಿಸಿಕೊಡುವ ಸನ್ನಿವೇಶವನ್ನು ನೆನಪಿಸುತ್ತದೆ. ಎಲ್ಲರ ಭಾವಪೂರ್ಣತೆಯನ್ನು ನೋಡಿದಾಗ ಅವಳ ಹೃದಯ ತುಂಬಿ ಬರುತ್ತದೆ. ಆಗ ಅವಳಾಡಿದ ಮಾತುಗಳು ಅರ್ಥಪೂರ್ಣವಾಗಿವೆ.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದೊಳಗೆ
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ
ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು
ಇಂತಪ್ಪ ತ್ರಿವಿಧಾಮೃತವನ್ನು ದಣೆಯಲೆರೆದು ಸಲಹಿದರೆನ್ನ
ವಿವಾಹವ ಮಾಡಿದಿರಿ ಕೊಟ್ಟ ಮನೆಗೆ ಕಳುಹಲೆಂದು

ಅಸಂಖ್ಯಾತರೆಲ್ಲರು ನೆರೆದು ಬಂದಿರಿ
ಚೆನ್ನಮಲ್ಲಿಕಾರ್ಜುನನ ಕೈ ಹಿಡಿದು ನಿಮ್ಮ ತಲೆಗೆ
ಹೂವ ತಹೆನಲ್ಲದೆ ಹುಲ್ಲತಾರೆನು

ಎನ್ನುತ್ತಾ ಎಲ್ಲರನ್ನೂ ಹಿಂತಿರುಗಲು ಹೇಳುವ ಸನ್ನಿವೇಶ ಮನಸ್ಸನ್ನು ಆರ್ದ್ರಗೊಳಿಸುತ್ತದೆ. ಪ್ರಾದೇಶಿಕತೆಯ ಸೂಕ್ಷ್ಮ ಒಳನೋಟವನ್ನು ಇಲ್ಲಿ ಕಾಣಬಹುದಾಗಿದೆ.

ವಚನಕಾರರು ಕಟ್ಟಲು ಹೊರಟದ್ದು ಮೇಲು-ಕೀಳುಗಳ ಲೇಪವಿಲ್ಲದ ಸ್ವಸ್ಥ ಸಮಾಜವನ್ನು ಕುಲ ಜಾತಿಗಳ ಭಿನ್ನ ಮುಖಗಳನ್ನು ಕುರಿತು ಬಸವಣ್ಣ ಮಾತನಾಡಿದ್ದಾನೆ. ಸಾಮಾಜಿಕ ಸ್ವಾಸ್ಥ್ಯದ ರಕ್ಷಣೆಗಾಗಿ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ' ಎನ್ನುವ ಈತನ ಮಾತು ಕೂಡಿ ಬಾಳುವುದಕ್ಕೆ ಅಗತ್ಯವಾದ ನಿಯಮವೆಂದೇ ಪರಿಗಣಿಸಬಹುದು. 'ದಯೆಯೇ ಧರ್ಮದ ಮೂಲವಯ್ಯ' ಎನ್ನುತ್ತಾ ಹಿಂಸೆಯಿಂದ ಮುಕ್ತವಾದ ಸಮಾಜದ ಕಲ್ಪನೆಯನ್ನು ಪರಿಚಯಿಸಿದ. ವಚನಗಳ ರಚನೆ ಮತ್ತು ಭಾಷೆಯನ್ನು ಗಮನಿಸಿದರೆ 'ನುಡಿದರೆ ಮುತ್ತಿನ ಹಾರದಂತಿರಬೇಕು', 'ನೆರೆ ಕೆನ್ನೆಗೆ ತೆರೆಗಲ್ಲಕೆ' ಮೊದಲಾದ ಮಾತುಗಳೆಲ್ಲ ಕನ್ನಡದ ಜನ ಮಾತನಾಡುವ ಆಡು ಭಾಷೆಯಂತೆ ಕೇಳಿಸುತ್ತದೆ. ೧೨ನೇ ಶತಮಾನದ ಜನ ಆಡುತ್ತಿದ್ದ ಭಾಷೆಗೂ ಈಗ ನಾವು ಆಡುತ್ತಿರುವ ಭಾಷೆಗೂ ಹೆಚ್ಚು ವ್ಯತ್ಯಾಸವಿಲ್ಲ ಎಂಬುದನ್ನು ಮನಗಾಣಬಹುದು. ಆಡುವ ಮಾತಿನ ಮೂಲಕ ಜೀವನದ ಅನುಭವಗಳನ್ನು ಅಭಿವ್ಯಕ್ತಗೊಳಿಸುವ ಕೆಲಸ ಇವರಿಂದ ನಡೆಯಿತು. ಹಾಗಾಗಿ ಸಾಹಿತ್ಯ ಮತ್ತು ಸಮಾಜ ಎರಡೂ ದೃಷ್ಟಿಗಳಿಂದಲೂ ವಚನ ಚಳುವಳಿ ವಿಶಿಷ್ಟವಾದುದೆಂಬುದರಲ್ಲಿ ಸಂದೇಹವಿಲ್ಲ.

**ಗಿರಿಜಾ ಕಲ್ಯಾಣ**

ನಡುಗನ್ನಡ ಸಾಹಿತ್ಯದ ಸಂದರ್ಭವನ್ನು ಕುರಿತು ಪರಿಭಾವಿಸುವಾಗ ನಾಡು – ನುಡಿಯ ಬಗೆಗೆ ಅಭಿವ್ಯಕ್ತಿ ಮೂಡಿಸಿದ ಕವಿಗಳಲ್ಲಿ ಹರಿಹರ ಗಮನಾರ್ಹನಾಗುತ್ತಾನೆ. ರಗಳೆಗಳು, ಶತಕಗಳು ಮತ್ತು ಚಂಪೂಕಾವ್ಯವೊಂದನ್ನು ಈತ ಬರೆದಿದ್ದಾನೆ. ಇಲ್ಲಿ ಈತನ 'ಗಿರಿಜಾಕಲ್ಯಾಣ'ವನ್ನು ಅಧ್ಯಯನ ಮಾಡುವುದರ ಮೂಲಕ ಅವನ ಕನ್ನಡದ ಪ್ರತಿನಿಧೀಕರಣವನ್ನು ಚರ್ಚಿಸಲಾಗಿದೆ.

'ಗಿರಿಜಾಕಲ್ಯಾಣ'ಕ್ಕೆ ಮೂಲ ಸಂಸ್ಕೃತ ಪುರಾಣಗಳು. ನಾಡು ನುಡಿಯ ನೇರವಾದ ಘೋಷಣೆ ಈ ಕೃತಿಯಲ್ಲಿ ಕಾಣಬರುವುದಿಲ್ಲ. ಈ ಕಾವ್ಯದ ಕತಾನಾಯಕ ಹಂಪೆಯ ವಿರೂಪಾಕ್ಷ. ರಜತಗಿರಿವಾಸನಾದ ಪರಶಿವನು ಕನ್ನಡನಾಡಿನ ಹೇಮಕೂಟದಲ್ಲಿ ತಪೋಮಗ್ನನಾದದ್ದು ಕವಿಯ ನಾಡ ಪ್ರೇಮದ ಕುರುಹು.

ಕಾವ್ಯದ ಆರಂಭದಲ್ಲಿ ಕಾಣಿಸಿಕೊಂಡ ಹಿಮಾಲಯದ ವರ್ಣನೆಯನ್ನು ಓದುತ್ತಾ ಹೋದಂತೆ ಕನ್ನಡ ನಾಡಿನ ಭೂಭಾಗಗಳು ಮತ್ತು ಅಲ್ಲಿನ ಬೆಳೆಗಳು, ಸಸ್ಯ ಸಂಪತ್ತು ಕಣ್ಣ ಮುಂದೆ ನಿಂತಂತಾಗುತ್ತದೆ. ಇಂತಹಾ ವರ್ಣನೆಗಳನ್ನು ಗಮನಿಸುವಾಗ ಹಿಮಾಲಯ ಹೇಮಕೂಟವಾಗಿ ಕಾಣುವುದರಲ್ಲಿ ಅಚ್ಚರಿಯಿಲ್ಲ. ಉದಾಹರಣೆಗೆ 'ಸೊಗಯಿಪ ದೇಶಮಚ್ಚರಿಯ ದೇಶಮದುತ್ತಮ ದೇಶ' ಎನ್ನುತ್ತಾ, ಕವಿ ಗಿರಿರಾಜನ ದೇಶವನ್ನು ವರ್ಣಿಸುವಾಗ,

ಆ ಹಿಮ ಶೈಲದುತ್ತರ ವಿಭಾಗದೊಳೊಪ್ಪುವುದಾತ್ತ ನಂದನ
ವ್ಯೂಹ ತಟಾಕ ವೀಥಿ ಕಳಮಾವಳಿ ಕೈರವರಾಜಿಯಬ್ಜಸಂ
ದೋಹ ವಿಶಾಲರಾಜನ ನಗರೀವ್ರಜ ಚಾರು ನದೀ ನದಾಳಿಯು
ತ್ಸಾಹ ಸಮಗ್ರದಿಂದ ಗಿರಿರಾಜನ ದೇಶಮಿಳಾವಿಭೂಷಣಂ (೨-೨)

ಸುಂದರವಾದ ನಂದನವನ, ತಟಾಕಗಳು, ಗದ್ದೆಗಳು, ನದಿ-ನದಗಳು ಬುವಿಗೆ ಭೂಷಣ ಎನ್ನುವಾಗ 'ಕಳಮಾವಳಿ' ಎಂಬ ಪದವನ್ನು ಗಮನಿಸಿದರೆ ಅದು ಭತ್ತದ ಗದ್ದೆಗಳನ್ನು ಗುರುತಿಸುತ್ತದೆ. ಮುಂದುವರಿದು ಆ ನಾಡಿನಲ್ಲಿ ಹುಲುಸಾಗಿ ಬೆಳೆ ಇಲ್ಲದ ನೆಲವಿಲ್ಲ, ಹೂವಿಲ್ಲದ ಕೊಳವಿಲ್ಲ, ಫಲಿಸದ ಮರಗಳಿಲ್ಲ ಎನ್ನುತ್ತಾ,

ತವೆ ಬೆಳೆದ ಪೊಸ ಪನಸುಬ
ಕ್ಕವಲಸು ನಳನಳಿಸುವಿಕ್ಷು ಪುಂಡ್ರೇಕ್ಷು ಪಳಂ
ಚುವ ತೆಂಗವು ಚೆಂದೆಂಗೊ
ಪ್ಪುವ ದಾಳಿಂಬಗಳೆಲ್ಲ ರಸದಾಳಿಂಬಂ (೨-೬೯)

ಆತ ವರ್ಣಿಸುವುದನ್ನು ಕಂಡಾಗ ಕಣ್ಣ ಮುಂದೆ ನಿಲ್ಲುವುದು ಕನ್ನಡನಾಡೇ ಹೊರತು ಹಿಮಾಲಯವಲ್ಲ. ಈ ಬೆಳೆಗಳನ್ನು ಕನ್ನಡನಾಡಿನುದ್ದಕ್ಕೂ ಗಮನಿಸಬಹುದು. ಇದನ್ನು ಹಿಮಾಲಯದಲ್ಲಿತ್ತು ಎಂದು ವರ್ಣಿಸುವಾಗ ಕವಿ ಹೃದಯ ಹಂಪಿಯಲ್ಲಿಯೇ ನೆಲಸಿತ್ತೆಂಬುದನ್ನು ಅರ್ಥೈಸಿಕೊಳ್ಳಬಹುದು. ಇಂತಹ ವರ್ಣನೆ 'ಗಿರಿಜಾಕಲ್ಯಾಣ'ದಲ್ಲಿ ವಿಸ್ತಾರವಾಗಿ ಚಾಚಿಕೊಂಡಿದೆ. ಕೆಲವೆಡೆ ಅದು ಸತ್ವಹೀನವಾಗಿ ಕಂಡರೆ, ಇನ್ನು ಕೆಲವೆಡೆ ಸಮೃದ್ಧವಾಗಿ ಕಾಣಿಸಿಕೊಂಡಿದೆ.

ಹರಿಹರ ಕಾವ್ಯದಲ್ಲಿ ಗುರುತಿಸುವಂತೆ ಶಿವನ ತಪೋಭೂಮಿ ಹೇಮಕೂಟ. ನಾರದನ ಸೂಚನೆಯಂತೆ ಗಿರಿಪತಿ ತನ್ನ ಮಗಳಾದ ಪಾರ್ವತಿಯನ್ನು ಪಂಪಾವಿರೂಪಾಕ್ಷನಿರುವ ಹೇಮಕೂಟಕ್ಕೆ ಕರೆತರುತ್ತಾನೆ. ದಾರಿಯುದ್ದಕ್ಕೂ ತಂದೆ ಮಗಳಿಗೆ ನದಿಗಳು, ಕೆರೆಗಳು, ಗದ್ದೆ-ತೋಟಗಳು, ಬೆಟ್ಟಗುಡ್ಡಗಳನ್ನು ತೋರಿಸುತ್ತಾನೆ. ಮುಂದೆ ತುಂಗಭದ್ರಾ ನದಿ ಕಾಣಿಸುತ್ತದೆ.

ಮಗಳಿಗೆ ಅದರ ಮಹಿಮೆಯನ್ನು ವಿವರಿಸುವ ಸಂದರ್ಭವನ್ನು ಗಮನಿಸಿದರೆ ಇದು ಕವಿಯ ಅಂತರಂಗದ ಅಭಿಮಾನ ಪ್ರವಹಿಸಿದ ರೀತಿಯೆಂಬುದು ತಿಳಿಯುತ್ತದೆ.

ನೆನೆದನೆ ಧನ್ಯಂ ನೋಡಿದ
ನನಘಂ ಸೋಂಕಿದವನಮರನಘಮರ್ಷಣಮಿ
ರ್ದನೆ ಗಣನಾಥಂ ಸೇವಿಸಿ
ದನೆ ಮುಕ್ತಂ ಕೇಳ ತುಂಗಭದ್ರೆಯ ಜಳಮಂ (೫-೧೮)

'ತುಂಗಭದ್ರೆಯನ್ನು ನೆನೆದವನು ಧನ್ಯನು, ನೋಡಿದವನು ಪಾಪ ರಹಿತ, ಮುಟ್ಟಿದವನು ಅಮರ, ಅದರಲ್ಲಿ ಮುಳುಗಿ ಮಿಂದವನ ಪಾಪ ಪರಿಹಾರ, ಜಲವನ್ನು ಸೇವಿಸಿದವನು ಮುಕ್ತ' ಎನ್ನುತ್ತಾನೆ ಕವಿ. ಇದು ತುಂಗಭದ್ರೆಯ ವರ್ಣನೆ ಮತ್ತು ಮಹತ್ತಿನ ಸಂಗತಿ. ನೆಪವಾಗಿ ತನ್ನ ನಾಡಿನಲ್ಲಿ ಹರಿಯವ ನದಿಯ ಪಾವಿತ್ರ್ಯವನ್ನು ಗುರುತಿಸುವ ಅದಮ್ಯ ಹಂಬಲ. ಮಾತ್ರವಲ್ಲ, ಇದು ಹಂಪೆಯ ಪ್ರಾಣನದಿ. ಜೊತೆಗೆ ಈ ನದಿಯ ಎರಡೂ ದಡಗಳಲ್ಲಿ ಶೋಭಿಸುವ ವನಾಳಿಯ ವರ್ಣನೆಯೂ ಆಕರ್ಷಕವೆನಿಸುತ್ತದೆ. ಅಲ್ಲಿ ಕಾಣಿಸುವ ಹೇಮಕೂಟದ ವರ್ಣನೆ ಇಂತಿದೆ.

ಪರಮಾರ್ಥಂ ಪುಣ್ಯತೀರ್ಥಂ ಮೃಗಪತಿನಿಕರ ಸ್ವಾರ್ಥಮದ್ಯತ್ ಸದರ್ಥಂ
ಸುರಭೂಜಂ ಶೈವತೇಜಂ ವಿಮಳ ಮುನಿಸಮಾಜಂ ನಗವ್ರಾತರಾಜಂ
ಸ್ಥಿರಶೀಲಂ ದಂತಿಜಾಲಂ ಸುಕೃತ ಪರಿವೃತ ಸ್ಥೂಲಮೊಪ್ಪಿತ್ತು ಶೈಲಂ
ವರಕೂಟಂ ಶೃಂಗಮಾಟಂ ಮೃಗಧರಧರಜೂಟಂ ಕರಂ ಹೇಮಕೂಟಂ (೫-೨೧)

ಇದೊಂದು ಪವಿತ್ರ ಪುಣ್ಯತೀರ್ಥ. ಸಿಂಹಶಾರ್ದೂಲಾದಿ ಮೃಗ, ಮುನಿಜನಗಳು, ಆನೆಗಳು, ಸುಕೃತ ಪರಿವೃತವಾದ ಶೈಲವಿದು. ವಯೋವೃದ್ಧರಾದ ಮುನಿಗಳು ವೇದಾಧ್ಯಯನ ಶೀಲರು, ಸಾತ್ವಿಕರು, ತಪೋನಿರತರು, ಸೂರ್ಯನಂತೆ ತೇಜಸ್ವಿಗಳು, ಮುನೀಶ್ವರರೂ ನೆಲೆಸಿದ್ದ ಪುಣ್ಯ ಭೂಮಿಯದು. ಇಂತಹ ಪವಿತ್ರವಾದ ಹಂಪೆ ಶಿವನ ತಪೋಭೂಮಿ. ಹಾಗಾಗಿಯೇ ಅಲ್ಲಿ ಕೋಗಿಲೆ ಕೂಗುವುದಿಲ್ಲ. ಗಿಳಿಗಳಹುವುದಿಲ್ಲ. ಗಾಳಿ ಚಲಿಸದು, ಎಲ್ಲವೂ ನಿಶ್ಶಬ್ದ. ಈ ವರ್ಣನೆಯಲ್ಲಿ ಕವಿಯ ಕ್ರಿಯಾಶೀಲತೆ ಗಾಢವಾದುದು. ಇಂತಹಾ ತಪೋಭೂಮಿಯ ನಿರ್ಮಾಣದ ಹಿಂದೆ ಕವಿಯ ನಾಡ ಅಭಿಮಾನವೂ ಪುಟಿದೇಳುವುದನ್ನು ಕಾಣಬಹುದು.

ತಪೋನಿರತನಾದ ಶಿವನ ಅರ್ಚನೆಗಾಗಿ ಪಾರ್ವತಿ ಹೂಕೊಯ್ಯುವ, ಹೂಕಟ್ಟುವ ತನ್ಮೂಲಕ ಆನಂದ ಪಡುವ ಸನ್ನಿವೇಶವನ್ನು ಕವಿ ನಿರ್ಮಾಣ ಮಾಡಿದ್ದಾನೆ. ಆ ಹೂಗಳ ಪಟ್ಟಿ ಕನ್ನಡಿಗರಿಗೆ ಪರಿಚಿತವಾದುದೇ ಆಗಿದೆ. ಮೃಡನಿಗಾಗಿ ಮಾಲೆಕಟ್ಟುವಲ್ಲಿ ಅವಳ ಜಾಣ್ಮೆ

ಕನ್ನಡತಿಯೊಬ್ಬಳ ಜಾಣ್ಮೆಯಂತಿದೆ. ಹರಿಹರನು ಮಾಡಿದ ಬಿಸಿಲ ಬೇಗೆಯ ವರ್ಣನೆ, ಮಳೆಯ ಮತ್ತು ಚಳಿಯ ವರ್ಣನೆ ಅನ್ಯಾದೃಶವಾದುದು.

ಕನ್ನಡ ಸಂಸ್ಕೃತಿಯ ಉದಾಹರಣೆಯೊಂದನ್ನು 'ಗಿರಿಜಾಕಲ್ಯಾಣ'ದಲ್ಲಿ ಗಮನಿಸಬಹುದು. ಗಿರಿಜೆಯ ತಪೋಸಾಧನೆಗೆ ಮೆಚ್ಚಿದ ಶಿವ ಪ್ರತ್ಯಕ್ಷನಾಗಿ ಅವಳ ಸೊಬಗಿಗೆ ವಶನಾಗಿ ಆಕೆಯ ಪುಣ್ಯಹಸ್ತವನ್ನು ಹಿಡಿದು 'ಮೇರುಪರ್ವತದ ನಮ್ಮ ನಿವಾಸಕ್ಕೆ ಆನಂದದಿಂದ ಹೋಗುವ ನಡೆ' ಎಂದಾಗ ಗಿರಿಜೆಯ ಉತ್ತರ; 'ದೇವ! ಗಿರೀಶ್ವರನಲ್ಲಿಯೆನ್ನನಾದರದೊಳಗೆ ಬೇಡಿಯೂರ್ಜಿತ ವಿವಾಹಮದಚ್ಚರಿಯಪ್ಪ ಮಾಳ್ಕೆಯಿಂ ಕರುಣಿಪುದೆಂದುದಂ ಸಲಿಸವೇಳ್ವದು' (೧೦-೫) ಎನ್ನುತ್ತಾಳೆ. ತಂದೆ ಹಿಮವಂತನಲ್ಲಿ ನನ್ನನ್ನು ಆದರದಿಂದ ಯಾಚಿಸಬೇಕೆಂಬ ಅವಳ ಪ್ರಾರ್ಥನೆ 'ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ' ಎಂಬ ಮತ್ಸ್ಯಗಂಧಿಯ ಪ್ರಾರ್ಥನೆಯನ್ನು ನೆನಪಿಸುತ್ತದೆ. ಇದು ಕವಿ ಗುರುತಿಸಿದ ಕನ್ನಡದ ಸಂಸ್ಕೃತಿ. ವಿವಾಹ ಸಂಬಂಧದ ಮಾತುಕತೆಗೆ ಸಪ್ತರ್ಷಿಗಳ ಆಗಮನ, ಅಲ್ಲಿಯ ಮಾತುಕತೆಗಳು, ಅನುರೂಪನಾದ ಗಂಡು ದೊರೆತಾಗ ಹೆಣ್ಣಿನ ತಂದೆಯ ಸಂಭ್ರಮ ಮುಂತಾದುವುಗಳನ್ನು ಅಚ್ಚುಕಟ್ಟಾಗಿ ಗುರುತಿಸಿದ್ದಾನೆ. ಮದುವೆಯ ಮಂಟಪ, ಮದುಮಕ್ಕಳ ಅಲಂಕಾರ ಓದುಗರಿಗೆ ಆನಂದ ನೀಡುತ್ತದೆ. ಸಂಪ್ರದಾಯಬದ್ಧವಾದ ವಿವಾಹೋತ್ಸವವನ್ನು ಕವಿ ವರ್ಣಿಸಿದ್ದಾನೆ. ವೈದಿಕ ಸಂಸ್ಕೃತಿಯ ಜೊತೆ ಕನ್ನಡ ಸಂಸ್ಕೃತಿಯ ಮೇಳೈಕೆ ಇಲ್ಲಿದೆ. ಮಗಳನ್ನು ಬಿಟ್ಟು ಹೊರಡುವಾಗ ಗಿರಿಪತಿ ಮತ್ತು ಮೇನಾದೇವಿ ಹೇಳುವ ಮಾತುಗಳು ವಿಶಿಷ್ಟವಾಗಿದ್ದು ಹೆಣ್ಣಿಗೆ ಗಂಡನೇ ಸರ್ವಸ್ವವೆಂಬುದನ್ನು ಒತ್ತಿ ಹೇಳುತ್ತದೆ.

ಮಾತೆ ಶಿವಂ ಪಿತಂ ಶಿವನನಂತ ಬಲಂ ಶಿವನೂರ್ಜಿತಂ ಶಿವಂ<br>
ನೀತಿ ಶಿವಂ ಸ್ಥಿರಾಯು ಶಿವನೊಳ್ಪು ಶಿವಂ ಸುಕೃತಂ ಘನ<br>
ಖ್ಯಾತಿ ಶಿವಂ ಧನಂ ಶಿವನಪಾರಸುಖಂ ಶಿವನದ್ರಿಜಾತೆ ಸಂ<br>
ಪ್ರೀತಿ ಶಿವಂ ಶಿವಂ ನಿನಗೆ ಚಿಂತಿಸದಿರ್ ಮರೆದೆಮ್ಮನೊರ್ಮೆಯುಂ (೧೦-೧೦೮)

'ನಿನಗೆ ಸರ್ವಸ್ವವೂ ಶಿವನೇ ನಮ್ಮನ್ನು ಮರೆತೂ ಯೋಚಿಸಬೇಡ' ಎನ್ನುವ ಮಾತು ಮನಸ್ಸನ್ನು ಆರ್ದ್ರಗೊಳಿಸುವಂತದ್ದು. ಹೀಗೆ ಪರೋಕ್ಷವಾಗಿ ಹರಿಹರನ ನಾಡಿನ ಸಂವೇದನೆಯ ಸೂಕ್ಷ್ಮ ಎಳೆಗಳನ್ನು ಸಂದರ್ಭೋಚಿತವಾಗಿ ಗುರುತಿಸಬಹುದಾಗಿದೆ.

ಗಿರಿಜಾಕಲ್ಯಾಣದ ಕಾವ್ಯ ಸ್ವರೂಪ ಹಳೆಯ ಚಂಪೂ ಮಾದರಿಯದು. ಸಂಸ್ಕೃತ ಭೂಯಿಷ್ಠವಾದ ಶೈಲಿಯ ಬದಲು ಸರಳ ಕನ್ನಡ ಶೈಲಿ ಇಲ್ಲಿದೆ. ಮುಂದೆ ಚಂಪೂವನ್ನು ಬಿಟ್ಟು ರಗಳೆಯತ್ತ ಹೆಜ್ಜೆಯಿಟ್ಟ. ಇದು ಕವಿಸ್ವಾತಂತ್ರ್ಯಕ್ಕೆ ಇನ್ನೂ ವಿಸ್ತಾರವನ್ನೊದಗಿಸಿತು.

ಚಂಪೂಕಾವ್ಯಗಳಲ್ಲಿ ಅಲ್ಲೊಂದು ಇಲ್ಲೊಂದು ಕಾಣಿಸಿಕೊಂಡ ರಗಳೆ ಇವನ ಕಾವ್ಯ ಮಾಧ್ಯಮವಾಯಿತು. ನೂರಕ್ಕೂ ಮಿಕ್ಕಿ ರಗಳೆಗಳನ್ನು ಈತ ರಚಿಸಿದ್ದಾನೆ.

ಹೂವು ಎನ್ನುವುದು ಮನುಷ್ಯ ಬದುಕಿನ ಒಂದು ಭಾಗ. ದೈವಶ್ರದ್ಧೆ ಮನುಷ್ಯರ ಜೊತೆಗೆ ನಿರಂತರ ಕಾಣಿಸಿಕೊಂಡದ್ದು. ಭಕ್ತಿಯ ಪ್ರಪಂಚವನ್ನು ನಿರ್ಮಾಣ ಮಾಡಿದ ಹರಿಹರ ಪುಷ್ಪೋದ್ಯಾನವನ್ನೂ ರಗಳೆಯ ಮೂಲಕ ಸೃಷ್ಟಿಸಿದ್ದಾನೆ. ಇಲ್ಲಿಯ ಭಕ್ತಿ ಮನಸ್ಸು ಮತ್ತು ಪ್ರಕೃತಿಯ ಸಂಗಮವೆನಿಸುತ್ತದೆ. ಹೂವಿನ ಮುಂದೆ ಕೈ ಮುಗಿದು ನಿಲ್ಲುವ, ಅವುಗಳನ್ನು ಮಾತನಾಡಿಸುವ ಪುಷ್ಪ ಪ್ರೀತಿ ಹರಿಹರನದು. 'ಏನವ್ವ ಸಂಪಗೆಯೆ' ಎಂಬ ಒಂದು ಮಾತು ಸಾಕು ಪ್ರಕೃತಿಯ ಜೊತೆಯಲ್ಲಿ ಮಾನವನ ನಿಷ್ಕಲ್ಮಷ ಪ್ರೀತಿಯ ದ್ಯೋತಕವನ್ನು ಗುರುತಿಸುವುದಕ್ಕೆ. ಹೂಗಳನ್ನು ಕಟ್ಟುವ ರೀತಿಯಲ್ಲೂ ವೈಶಿಷ್ಟ್ಯವನ್ನು ಕವಿ ಗುರುತಿಸುತ್ತಾನೆ. ಚುಚ್ಚಿದರೆ ನೋವಾಗುವುದೆಂಬ, ನೋಡಿದರೆ ದೃಷ್ಟಿ ತಾಕುವುದೆಂಬ ಸ್ಥಿತಿಯಿಂದ ಮಾನಸಿಕವಾಗಿ ಆತ ಹೂಕಟ್ಟುವ ಸನ್ನಿವೇಶ ಮನೋಜ್ಞವಾಗಿದೆ. ಇಂತಹ ಪುಷ್ಪೋದ್ಯಾನವನ್ನು ಕನ್ನಡದ ಅನೇಕ ಕವಿಗಳು ಸೃಷ್ಟಿಸಿದ್ದಾರೆ. ಅದರ ಸವಿಯನ್ನು ಓದುಗರಿಗೂ ಉಣ ಬಡಿಸಿದ್ದಾರೆ.

ನಾಡು-ನುಡಿಯ ಪ್ರತಿನಿಧೀಕರಣದ ದೃಷ್ಟಿಯಿಂದ ಹರಿಹರನ 'ಪಂಪಾಕ್ಷೇತ್ರದ ರಗಳೆ' ಗಮನಿಸುವಂತದ್ದು. ಇದರ ವಸ್ತು ಹಂಪೆ ಮತ್ತು ಹಂಪೆಯ ವಿರೂಪಾಕ್ಷ. ಇಡೀ ರಗಳೆಯಲ್ಲಿ ಸಾಂಸ್ಕೃತಿಕ ನಾಡಾಗಿ ಹಂಪೆ ಕಾಣಿಸಿಕೊಳ್ಳುತ್ತದೆ. ಪಂಪಾಪುರವು ಧರೆಯ ಆಭರಣದಂತೆ. ಅದು ವಾರಣಾಸಿಗಿಂತ ಮಿಗಿಲು, ಪಾಪ ಪರಿಹಾರಕವಾದುದು ಎನ್ನುವುದರೊಂದಿಗೆ ಅನೇಕ ತೀರ್ಥಗಳಿಂದ, ಅನೇಕ ದೈವಗಳಿಂದ, ಮಹಿಮೆಯನ್ನು ಪಡೆದ ನಾಡೆಂಬುದಾಗಿ ಗುರುತಿಸಿದ್ದಾನೆ. ಕವಿಯ ಧರ್ಮಸಹಿಷ್ಣುತೆಗೆ ಇದು ಮಾದರಿ. ಇಡೀ ರಗಳೆಯನ್ನು ಓದಿದಾಗ ಅಲ್ಲಿ ದಾಖಲಾಗಿರುವ ಕೊಳಗಳ, ದೇವಾಲಯಗಳ ಪರಿಚಯವಾಗುತ್ತದೆ. ಯಾವುದೇ ರಾಜಕೀಯ ಸುಳಿವಿಲ್ಲದೆ ಪೌರಾಣಿಕ, ನೈಸರ್ಗಿಕ ಸಂಗತಿಗಳು ಮೇಳೈಕೆಗೊಂಡು ಪಂಪಾಕ್ಷೇತ್ರವು ಒಂದು ಸಾಂಸ್ಕೃತಿಕ ನಾಡೆಂಬ ಅಭಿಮತವನ್ನು ಮೂಡಿಸುತ್ತದೆ. ಇಲ್ಲಿ ತನ್ನದೇ ಆದ ಸಾಂಸ್ಕೃತಿಕ ಅಸ್ಮಿತೆಯನ್ನು ಕಟ್ಟಿಕೊಂಡಿದ್ದ ಹರಿಹರ ಮಧ್ಯಕಾಲೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವಿಶೇಷವಾಗಿ ಗುರುತಿಸಿಕೊಂಡ ಕವಿ.

ಹನ್ನೆರಡು-ಹದಿಮೂರನೆಯ ಶತಮಾನದಲ್ಲಿ ಬಾಳಿ ಬದುಕಿದ ಕವಿ ಹರಿಹರ. ಆ ಕಾಲದ ಧಾರ್ಮಿಕ-ಸಾಮಾಜಿಕ-ಸಾಹಿತ್ಯಿಕ ಸಂದರ್ಭದಲ್ಲಿ ಈತನೊಬ್ಬ ಮಹತ್ವದ ಮತ್ತು ಪ್ರತಿಭಾವಂತ ಕವಿಯೆಂಬುದರಲ್ಲಿ ಎರಡು ಮಾತಿಲ್ಲ. ಮನುಜರ, ಸಾವವರ ಮತ್ತು ಕನಿಷ್ಠರ ಮೇಲೆ ತಾನು

ಕಾವ್ಯ ನಿರ್ಮಿಸುವುದಿಲ್ಲವೆಂಬುದು ಇವನ ಗ್ರಂಥ ಪ್ರತಿಜ್ಞೆಯಾಗಿತ್ತು. ಹಾಗಾಗಿ ಜನ ಸಾಮಾನ್ಯರು, ಶಿವಶರಣರು, ಅಕ್ಕ, ಬಸವಣ್ಣ ಮೊದಲಾದವರ ಬದುಕು ಇವನ ಕಾವ್ಯ ವಸ್ತುವಾಯಿತು. ಅದುವರೆಗಿನ ಸಂಸ್ಕೃತ ಭೂಯಿಷ್ಠವಾದ ಶೈಲಿಯನ್ನು ಬದಿಗಿರಿಸಿ ಸರಳ ದೇಸೀ ಮೂಲದ ರಗಳೆಯನ್ನು ಮಾಧ್ಯಮವಾಗಿಸಿಕೊಂಡು ಸಾಹಿತ್ಯ ಸೃಷ್ಟಿಮಾಡಿದ ಹರಿಹರ ಮುಖ್ಯನಾಗುತ್ತಾನೆ. ಪಂಪನಿಂದ ತೊಡಗಿ ಬೇರೆ ಬೇರೆ ಕವಿಗಳು ಕ್ವಚಿತ್ತಾಗಿ ಬಳಸಿದ ರಗಳೆಯು ಉಚ್ಛ್ರಾಯಸ್ಥಿತಿಯನ್ನು ತಲುಪಿದ್ದು ಹರಿಹರನ ಮೂಲಕ. ಇದು ಮಧ್ಯಕಾಲಿನ ಕನ್ನಡದ ಬಹುಮುಖ್ಯ ಛಂದಸ್ಸಾಗಿ ಪರಿಣಮಿಸಿತು. ನಿರ್ಲಕ್ಷಿತ ಛಂದಸ್ಸು ಮತ್ತು ಸಾಮಾಜಿಕವಾಗಿ ನಿರ್ಲಕ್ಷಿತರಾಗಿದ್ದ ಜನರನ್ನು ಕಾವ್ಯನಾಯಕರನ್ನಾಗಿ ಮಾಡಿದವನು ಹರಿಹರ. ಇವನ ಪ್ರಪಂಚದೊಳಗೆ ಬೇಡ, ಕುಂಬಾರ, ಬೆಸ್ತ ಎಲ್ಲರೂ ಮನ್ನಣೆಗೆ ಪಾತ್ರರಾಗಿದ್ದಾರೆ. ಹಂಪೆಯನ್ನು ಕಾರ್ಯಕ್ಷೇತ್ರವಾಗಿ ಮಾಡಿಕೊಂಡು, ಎಲ್ಲಾ ಪಾತ್ರಗಳೂ ತನ್ನ ನಾಡಿನ ಪಾತ್ರಗಳೇ ಎಂಬ ವಿಶಿಷ್ಟ ಅನುಭೂತಿಯೊಂದಿಗೆ ಕಾವ್ಯ ನಿರ್ಮಾಣ ಮಾಡಿದ ಹರಿಹರನಲ್ಲಿ ಅಗೋಚರವಾದ ನಾಡು ನುಡಿಯ ಸಂವೇದನೆ ಹಾಸು ಹೊಕ್ಕಾಗಿತ್ತೆಂಬುದನ್ನು ಕಾಣಬಹುದು.

**ಹರಿಶ್ಚಂದ್ರ ಕಾವ್ಯ**

ಪುರಾಣದ ಮೂಲಕ ಹರಿದು ಬಂದ ಹರಿಶ್ಚಂದ್ರನ ವೃತ್ತಾಂತ ರಾಘವಾಂಕನ ಕಾವ್ಯದ ವಸ್ತು. ಕಾವ್ಯದ ನಾಯಕ ಹರಿಶ್ಚಂದ್ರನು ಭೂಮಿಯಲ್ಲಿದ್ದುಕೊಂಡು ಸತ್ಯ ಸಾಕ್ಷಾತ್ಕಾರಕ್ಕೆ ಒಳಗಾದವನು. ಇದು ಹರಿಶ್ಚಂದ್ರನ ಮೂಲಕ ಸತ್ಯವು ಸಜೀವವಾದ ಕಥೆ. ಮಾತಿನಲ್ಲಿ ಶುದ್ಧತೆಯನ್ನು ಕಾಪಿಟ್ಟುಕೊಳ್ಳುವುದೇ ಸತ್ಯ ಎಂಬ ಹೊಸ ವ್ಯಾಖ್ಯಾನವೊಂದನ್ನು ರಾಘವಾಂಕ ಈ ಕೃತಿಯ ಮೂಲಕ ಮಾಡಿದ್ದಾನೆ. ಕೃತಿಯಲ್ಲಿ ನಾಡು – ನುಡಿಯ ಕುರಿತಾದ ನೇರ ಪ್ರಕಟಣೆಯಿಲ್ಲದಿದ್ದರೂ, ತನ್ನ ಊರಾದ ಹಂಪೆಯನ್ನು ವರ್ಣಿಸುವ ಮೂಲಕ, ತುಂಗಭದ್ರೆಯನ್ನು ವಿಶೇಷವಾಗಿ ಗೌರವಿಸುವುದರ ಮೂಲಕ, ಪ್ರಕೃತಿ ವರ್ಣನೆಯ ದೇಸಿತನದ ಮೂಲಕ, ನಾಟಕೀಯತೆಯ ಗುಣ, ಛಂದಸ್ಸಿನ ಪ್ರಯೋಗಶೀಲತೆ, ಲೋಕದ ನಡಾವಳಿಗಳನ್ನು ಗುರುತಿಸಿಕೊಡುವ ಸಂದರ್ಭಗಳಲ್ಲಿ ಅವನಲ್ಲಿದ್ದ ನಾಡಿನ ಸಂವೇದನೆಯನ್ನು ಅರ್ಥೈಸಿಕೊಳ್ಳಬಹುದು.

'ಹರಿಶ್ಚಂದ್ರ ಕಾವ್ಯ'ದ ತಳಹದಿ 'ಸತ್ಯ'ವೆಂಬ ಮೌಲ್ಯದ ದರ್ಶನ. ಮಾತ್ರವಲ್ಲದೆ ವಚನಕಾರರ ಸಾಮಾಜಿಕ ಕ್ರಾಂತಿಯ ಸಂಗತಿಯಾದ ಹೊಲೆತನ, ಅಸ್ಪೃಶ್ಯತೆಯ ಪ್ರಶ್ನೆಯನ್ನು ಕೂಡಾ ಕವಿ ಈ ಕೃತಿಯ ಮೂಲಕ ಎತ್ತಿದ್ದಾನೆ. 'ಹರನೆಂಬುದೆ ಸತ್ಯ, ಸತ್ಯವೆಂಬುದೆ ಹರನು',

'ಅತಿಹುಸಿವ ಯತಿ ಹೊಲೆಯ', 'ಹುಸಿಯದಿಹ ಹೊಲೆಯ ಉನ್ನತ ಯತಿವರನು' ಎಂಬೆರಡು ಮೌಲ್ಯಗಳು ಕಾವ್ಯದಲ್ಲಿ ಪ್ರತಿಪಾದಿತವಾಗಿವೆ. ಶ್ರೇಷ್ಠಮುನಿಯಾಗಿದ್ದರೂ ಅತಿಕೋಪ, ಬದ್ಧದ್ವೇಷ, ಅನಿಮಿತ್ತವೈರ ಮುಂತಾದ ಕೆಟ್ಟಗುಣಗಳಿದ್ದರೆ ಅದು 'ಹೊಲೆತನ'ವನ್ನು ಸೂಚಿಸುತ್ತದೆ ಎನ್ನುವುದು ಕವಿಯ ಅಭಿಪ್ರಾಯ. ಇದು ಕೇವಲ ಮುನಿಗೆ ಮಾತ್ರ ಸಂಬಂಧಪಟ್ಟದ್ದಲ್ಲ. ಸಾಮಾನ್ಯ ಮನುಷ್ಯನಲ್ಲಿಯೂ ಕಾಣಬಾರದ ಕೆಟ್ಟಗುಣಗಳು. ಹಾಗಾಗಿ ಹೊಲೆತನ ಜಾತಿಗೆ ಸಂಬಂಧಿಸಿದ್ದಲ್ಲ; ಮನಸ್ಸಿಗೆ ಸಂಬಂಧಿಸಿದ್ದು ಎಂಬುದನ್ನು ಅರ್ಥೈಸಿಕೊಳ್ಳಬಹುದು.

'ಹರಿಶ್ಚಂದ್ರಕಾವ್ಯ'ದಲ್ಲಿ ಒಂದು ಕಡೆ ಮರ್ಯಾದೆಯನ್ನು ಮೀರಿ ವರ್ತಿಸುವ ಗಾಣಗಾತಿಯರ ಹೊಲೆತನವನ್ನು ಗುರುತಿಸಿದರೆ, ಇನ್ನೊಂದೆಡೆ ಹೊಲೆಯನಾಗಿದ್ದೂ, ಹರಿಶ್ಚಂದ್ರನನ್ನು ಗಂಭೀರವಾಗಿಯೇ ನಡೆಯಿಸಿಕೊಳ್ಳುವ ವೀರಬಾಹುಕನನ್ನು ಗುರುತಿಸುತ್ತಾನೆ. ಹಾಗಾಗಿ ಕವಿಯ ಪ್ರಕಾರ ಹೊಲೆತನವು ವ್ಯಕ್ತಿಯ ಮನಸ್ಸಿನ ಅವಗುಣವೇ ಹೊರತು ಜಾತಿಯ ನೆಲೆಯಲ್ಲ.

ಹೆಣ್ಣಿನ ಮಾರಾಟವೆನ್ನುವುದು ಅನಾದಿಕಾಲದಿಂದಲೂ ನಡೆದು ಬಂದಂತಹ ಸಾಮಾಜಿಕ ಅಧಃಪತನದ ನೆಲೆ. 'ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು' ಎಂಬ ದ್ರೌಪದಿಯ ಮಾತು ಮಾರಾಟದ ದಾರುಣ ಸ್ಥಿತಿಯನ್ನು ಗುರುತಿಸುತ್ತದೆ. 'ಹರಿಶ್ಚಂದ್ರಕಾವ್ಯ'ದಲ್ಲಿ ಮಾರಾಟದ ಕಟ್ಟೆಯಲ್ಲಿ ನಿಂತವಳು ಚಂದ್ರಮತಿ. ರಾಜ ಋಣಮುಕ್ತನಾಗುವುದಕ್ಕೆ ಈ ಮಾರಾಟ. ಇದನ್ನು ಯಾವ ತಕರಾರಿಲ್ಲದೆ ಒಪ್ಪಿಕೊಳ್ಳುವ ನೆಲೆ ಕಾವ್ಯದೊಳಗೆ ಕಂಡು ಬರುತ್ತದೆ. ಹೆಣ್ಣು ಪರಂಪರೆಯಿಂದ ಅನುಭವಿಸಿದ ತಲ್ಲಣಗಳಲ್ಲಿ ಇದು ಒಂದು. ಆಧುನಿಕ ವಿದ್ಯಾವಂತರ ಸಮಾಜದಲ್ಲಿಯೂ ಇದು ನಿರಂತರ ನಡೆಯುತ್ತಿದೆ. ಮಾರಾಟದ ಉದ್ದೇಶ ಬದಲಾಗಿದೆ. ಧರ್ಮವನ್ನು ಉಳಿಸುವುದಕ್ಕೆ, ಕೊಟ್ಟ ಮಾತನ್ನು ಉಳಿಸಿಕೊಂಡು ಋಣಮುಕ್ತನಾಗುವುದಕ್ಕೆ ಹೆಣ್ಣಿನ ಒಪ್ಪಿಗೆಯಿದ್ದು ಮಾರಾಟವಾದ ಬಗೆ ಒಂದೆಡೆಯಾದರೆ, ಒಪ್ಪಿಗೆ ಇಲ್ಲದೆ ದ್ರವ್ಯಾರ್ಜನೆಗಾಗಿ ಮಾರಾಟ ಮಾಡುವ ಆಧುನಿಕ ಸಮಾಜದ ಕೇಡು ಇನ್ನೊಂದೆಡೆ. ಒಂದರ ಪರಿಣಾಮ ಸತ್ಯದ ಸಾಕ್ಷಾತ್ಕಾರದೊಂದಿಗೆ ಗಂಡಿನ ಉದ್ಧಾರವಾದರೆ, ಇನ್ನೊಂದರ ಪರಿಣಾಮ ಅತ್ಯಂತ ಘೋರವಾಗಿರುತ್ತದೆ. ನಾಡಿಗೆ ಸಂಬಂಧಪಟ್ಟ ಸಾರ್ವಕಾಲಿಕವಾಗಿದ್ದ ಹೀನಸ್ಥಿತಿಯೊಂದನ್ನು ಕವಿ ಗುರುತಿಸಿದ್ದಾನೆ.

ಪ್ರಕೃತಿ ವರ್ಣನೆಯ ಮೂಲಕ ಪ್ರಕಟಗೊಳ್ಳುವ ನಾಡಿನ ಪ್ರಜ್ಞೆಯನ್ನು ನಿದರ್ಶನಗಳ ಮೂಲಕ ಗುರುತಿಸಬಹುದು. ಹರಿಶ್ಚಂದ್ರ ತನ್ನ ಪರಿವಾರದೊಂದಿಗೆ ವನವಿಹಾರಕ್ಕೆ ಹೊರಟ

ಸಂದರ್ಭ. ವಸಂತ ಋತುವಿನ ಆಗಮನವಾಗಿದೆ. ಆ ವನದ ಸೌಂದರ್ಯವನ್ನು ಕವಿ ಮೈ ಮರೆತು ವರ್ಣಿಸಿದ್ದಾನೆ.

> ಬಳವೆತ್ತ ಮದನನರಮನೆ ವಸಂತನ ಬೀಡು
> ಯೆಳಲತೆಗಳಿಕ್ಕೆ ನಾನಾ ಭೂಜದಾಗರಂ
> ತಳಿರ ತಾಣಂ ಕುಸುಮಕುಲದ ನೆಲೆ ಫಳ ನಿಳಯ
> ಕೋಕಿಲಂಗಳ ಚಾವಡಿ ಅಳಿಗಳಾಡುಂಬೊಲಂ
> ಗಿಳಿಗಳೋದುವ ಮಠಂ ಮಲಯಾನಿಲನ ಜನ್ಮಭೂಮಿ
> ಪುಳಿನಾಕೀರ್ಣ ಕೊಳನ ಹರವರಿ ನವಿಲ ನಂದನ (೩–೨೬)

ಇದು ಎಂತಹವರನ್ನೂ ತನ್ನೆಡೆಗೆ ಆಕರ್ಷಿಸುವಂತಹ ಪ್ರಕೃತಿಯ ಸುಂದರ ತಾಣ. ಮನಸ್ಸಿಗೆ ಮುದ ನೀಡುವ ಎಲ್ಲಾ ಸಂಗತಿಗಳಿಗೆ ಇದು ಆಶ್ರಯಸ್ಥಾನ. ನಾನಾ ವಿಧದ ಹೂಗಳು, ಮಂದಮಾರುತ, ತರತರದ ಹಣ್ಣುಗಳು, ಗಿಳಿ, ಕೋಗಿಲೆ, ದುಂಬಿವಿಂಡುಗಳು, ವಿಶಾಲವಾದ ಕೊಳಗಳಿಂದ ನವಿಲಿನ ನಂದನವನವೋ ಎಂಬಂತಿದ್ದ ರಮ್ಯ ಮನೋಹರ ವನ. ಮಾವು, ಮಲ್ಲಿಗೆ, ದಾಳಿಂಬೆ, ಸಂಪಿಗೆ, ತೆಂಗು, ಬಾಳೆ ಮುಂತಾದ ಹೂ ಹಣ್ಣುಗಳ ಸಂಗಮ. ನಾಡಿನ ಸಸ್ಯ ಸಮೃದ್ಧಿ, ಫಲ ಸಮೃದ್ಧಿಯನ್ನು ಕವಿ ಈ ಮೂಲಕ ಅನಾವರಣಗೊಳಿಸಿದ್ದಾನೆ.

ಇದೇ ಸಂದರ್ಭದಲ್ಲಿ ನಾಡಿನ ಜನತೆ ಪ್ರಾಣಿ ಪಕ್ಷಿಗಳಿಂದ ತಮಗಾಗುವ ತೊಂದರೆಯನ್ನು ಮುಂದಿಟ್ಟು ರಾಜನಲ್ಲಿ ರಕ್ಷಣೆಯನ್ನು ಬೇಡುತ್ತಾರೆ. ಆ ಸಂದರ್ಭದಲ್ಲಿ ಅವರು ಹೇಳುವ ಮಾತುಗಳಿಂದ ಸುಭಿಕ್ಷವಾಗಿರುವ ನಾಡಿನ ಕಲ್ಪನೆಯನ್ನು ಮಾಡಿಕೊಳ್ಳಬಹುದು. 'ತರದ ಬಾಧೆಗಳಿಲ್ಲ, ಬಿಟ್ಟಿಯೂಳಿಗವಿಲ್ಲ. ಪರನೃಪರಭಯವಿಲ್ಲ, ಸಾಲದಂಡಲೆಯಿಲ್ಲ, ನೆರೆಯೂರಕದನವಿಲ್ಲ' (೩–೬೮) ಎನ್ನುವಾಗ ಸುಂದರವಾದ ನಾಡೊಂದರ ಕಲ್ಪನೆ ಕಣ್ಣ ಮುಂದೆ ಹಾದು ಹೋಗುತ್ತದೆ. ಇದೇ ಸಂದರ್ಭದಲ್ಲಿ ಬರುವ ಸೂರ್ಯಾಸ್ತ ಮತ್ತು ಚಂದ್ರೋದಯದ ವರ್ಣನೆಯೂ ಆಕರ್ಷಕವಾಗಿದೆ. ಬೇಟೆಗೆ ಕಾಡನ್ನು ಪ್ರವೇಶಿಸಿದ ಹರಿಶ್ಚಂದ್ರ ಅಲ್ಲಿಯ ವೃಕ್ಷ ಸಂಪತ್ತನ್ನು ನೋಡಿ ಆನಂದಪಡುವ ಬಗೆ ಕಾವ್ಯದಲ್ಲಿದೆ. ಇಲ್ಲಿ ಕವಿ ಗುರುತಿಸುವ ಮರಗಳೆಲ್ಲ ಕನ್ನಡಿಗರಿಗೆ ಪರಿಚಿತ ಮರಗಳೇ ಆಗಿವೆ. ಈ ಮರಗಳ ಪಟ್ಟಿಯಲ್ಲಿ ಜಾಲ, ಆಲ, ನೆಲ್ಲಿ, ಹಾಲೆ, ಬನ್ನಿ, ಹೊನ್ನೆ, ಮಾವು, ಬೇವು, ಮಂದಾರ, ಹಲಸು ಇವೆಲ್ಲ ಸೇರಿಕೊಂಡಿವೆ.

ಬೇಟೆಯ ಅಬ್ಬರದ ಸಂದರ್ಭದಲ್ಲಿ ಅಚ್ಚರಿಯೆಂಬಂತೆ, ಬೇಟೆಗೆ ಬಳಸಿದ ಪ್ರಾಣಿಗಳು ನಿಶ್ಚಲವಾಗಿ ನಿಂತಾಗ, ಹರಿಶ್ಚಂದ್ರ ಅಲ್ಲಿಗಾಗಮಿಸಿದ ಮುನಿಯಲ್ಲಿ ಈ ಬಗ್ಗೆ ಕೇಳುತ್ತಾನೆ. ಆಗ ಆ

ಮುನಿಯ ಉತ್ತರದಲ್ಲಿ ನಿರ್ಮಲವಾದ ಪಂಪಾಕ್ಷೇತ್ರದ ವರ್ಣನೆ ಕಾಣಿಸುತ್ತದೆ. ವಸಿಷ್ಠನ ಆಶ್ರಮವನ್ನು ಇದೇ ಸನ್ನಿಧಿಯಲ್ಲಿ ನಿರ್ಮಾಣ ಮಾಡಿಕೊಟ್ಟ ರಾಘವಾಂಕ ಅಲ್ಲಿನ ಪರಿಸರವನ್ನು ಮನತುಂಬಿ ವರ್ಣಿಸಿದ್ದಾನೆ.

'ವೇದಗಳ ಉಗ್ಗಡ ಉಪನಿಷತ್ತುಗಳ ಗರವಟಿಗೆ, ಅಣಿಮಾದಿಗಳ ಬೊಬ್ಬೆ, ಧರ್ಮದ ಅಬ್ಬರ, ಘನಜ್ಞಾನ ಪ್ರಭಾದೀಪ್ತಿಗಳು, ಹರಿಬ್ರಹ್ಮಾದಿಗಳ ರಕ್ಷೆ, ಪುಣ್ಯದಪುಂಜ, ಲಕ್ಷ್ಮೀ–ಸರಸ್ವತಿಯರ ಓಡಾಟ'ವನ್ನು ಒಳಗೊಂಡ ಅಲ್ಲಿ ಪ್ರಕೃತಿಯೂ ಶಾಂತವಾಗಿದ್ದು, ಪ್ರಾಣಿ ಪಕ್ಷಿಗಳು ಸೌಹಾರ್ದಯುತವಾದ ಬದುಕನ್ನು ಕಟ್ಟಿಕೊಂಡಿವೆ. ಕವಿಯ ಪ್ರಕಾರ ಇದು ನಾಡಿನ ದಿವ್ಯವಾದ ಸಾನ್ನಿಧ್ಯ. ಕವಿಯ ಪಾಲಿಗೆ ಹಂಪೆ ಕಾಶಿಗೆ ಸಮಾನ; ತುಂಗೆ ಗಂಗೆಗೆ ಸಮಾನ. ವಿರೂಪಾಕ್ಷನನ್ನು ಅರ್ಚಿಸಿದ ಮೇಲೆ ಹರಿಶ್ಚಂದ್ರ ಅಲ್ಲಿರುವ ವಿಪ್ರರಿಗೆ ದಾನ ಕೊಡುವ ಸಂದರ್ಭದಲ್ಲಿ 'ಅಂಗ ವಂಗ, ಕಳಿಂಗ, ದೇಶಗಳಲ್ಲಿ ನಿಮ್ಮ ಕಣ್ಣಿಗೆ ಸೊಗಸುವ ನಾಡನ್ನು ಬೇಡಿ' ಎಂದಾಗ ಅವರು 'ನಾವು ತುಂಗಭದ್ರಾ ತೀರವನ್ನು ಬಿಟ್ಟು ಎಲ್ಲಿಗೂ ಬಾರೆವು' ಎನ್ನುತ್ತಾರೆ. ಹಂಪೆ ಮತ್ತು ತುಂಗೆಯ ಬಗೆಗೆ ಕವಿಯ ಅನನ್ಯ ಪ್ರೇಮ ಈ ಮೂಲಕ ಅನಾವರಣಗೊಂಡಿದೆ. ಋಣಮುಕ್ತನಾಗುವುದಕ್ಕೆ ಪ್ರದೇಶದ ಆಯ್ಕೆ ನಡೆದಾಗಲೂ ನೆನಪಾಗುವುದು ಕಾಶಿ ಮತ್ತು ಹಂಪೆ. ತುಂಗೆ ಜಗತ್ತಿನ ಶ್ರೇಷ್ಠ ನದಿಗಳಲ್ಲಿ ಒಂದೆಂಬ ಭಾವ ಕವಿಯದ್ದು.

ಕವಿಯ ಭಾಷಾ ಪ್ರಯೋಗದಲ್ಲಿ ನೆಲದ ಗುಣ ಎದ್ದು ಕಾಣುತ್ತದೆ. ಅಲ್ಲಲ್ಲಿ ಕಾಣುವ ನುಡಿಗಟ್ಟು, ಜನರ ಆಡು ಮಾತಿನ ಸೊಗಡು, ನಾಟಕೀಯ ಶೈಲಿ ಕೃತಿಯ ಹಿರಿಮೆಗೆ ಕಾರಣವಾಗಿದೆ. ಮಾರ್ಗ ಪರಂಪರೆಯ ಚಂಪೂ ಶೈಲಿಯ ಹಿಡಿತದಿಂದ ಕಳಚಿಕೊಂಡು, ತನ್ನ ಗುರುವಾದ ಹರಿಹರನ 'ರಗಳೆ'ಯನ್ನೂ ಕೈ ಬಿಟ್ಟು ಷಟ್ಪದಿಯನ್ನು ಕಾವ್ಯ ಮಾಧ್ಯಮವಾಗಿಸಿಕೊಂಡವನು ಕವಿ. ಕನ್ನಡಕ್ಕೆ ಛಂದಸ್ಸಿನ ದೃಷ್ಟಿಯಿಂದ ಪರ್ಯಾಯ ಮಾರ್ಗವೊಂದನ್ನು ಸೃಷ್ಟಿಸಿಕೊಂಡು ಅದರಲ್ಲಿ ಯಶಸ್ಸು ಕಂಡಿದ್ದಾನೆ. ತನ್ನ ಕಾವ್ಯ ಭಾಷೆಯ ಕುರಿತು ದೀರ್ಘವಾದ ಆಲೋಚನೆಯನ್ನು ಈತ ವ್ಯಕ್ತ ಪಡಿಸಿದ್ದಾನೆ.

> ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ
> ಪರರ ಕಾವ್ಯಾರ್ಥಂಗಳಂ ಛಿದ್ರಸದ ಭಾಷೆ
> ಪರರ ದೈವವ ನುತಿಸದಿಪ್ಪ ಭಾಷೆ ಪರರ ಕ್ಲೇಶ
> ವೀಕ್ಷಿಸದ ಭಾಷೆ ಪರರನಿಂದಿಸಿ ತನ್ನ
> ಹೊಗಳಿಕೊಳ್ಳದ ಭಾಷೆ, ಪರರ ವಧುವಂ ಕಂಡು

ಮನವೆಳಸದಿಹ ಭಾಷೆ ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆ (೧-೧೯)

ಇದು ಕವಿಯ ಭಾಷೆಯ ಹೆಚ್ಚುಗಾರಿಕೆ. ಜೊತೆಗೆ ಆತ್ಮವಿಶ್ವಾಸವೂ ಹೌದು. ಪರರ ಯಾವ ಸಂಗತಿಗಳನ್ನು ತನ್ನದಾಗಿಸಿಕೊಂಡಿಲ್ಲವೆಂಬ ಮನೋಧೈರ್ಯ ಇಲ್ಲಿ ವ್ಯಕ್ತಗೊಂಡಿದೆ. ವಸ್ತುವಿನ ಹೊಸತನ, ಛಂದಸ್ಸಿನ ಹೊಸತನದ ಜೊತೆಗೆ ಸೃಜನಾತ್ಮಕ ಕಾವ್ಯವೊಂದು ಈತನಿಂದ ನಿರ್ಮಾಣವಾಗಿದೆ. ಈತ ಕಾವ್ಯವನ್ನು ಸ್ತ್ರೀ ರೂಪದಲ್ಲಿ ಕಂಡಿದ್ದಾನೆ. ಈತನಿಗೆ ಕಾವ್ಯವೆಂದರೆ ಕೇವಲ 'ಶಬ್ಧರೂಪ'ವಲ್ಲ. ಈತ ಕೊಡುವ ನುಡಿಯ ವಿವರಗಳನ್ನು ಗಮನಿಸಿದಾಗ ಅನೇಕ ಹೊಸ ಸಂಗತಿಗಳು ಕಾಣಿಸಿಕೊಳ್ಳುತ್ತವೆ.

ರಸಜೀವ ಭಾವವೊಡಲರ್ಥವವಯವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಿಗೆಯು ತ
ವೆ ಲಕ್ಷಣವೆ ಲಕ್ಷಣ ವಿಮಳ ಪದ ವಿನ್ಯಾಸ ನಡೆ ರೀತಿ
ಸುಕುಮಾರತೆ ರಸಿಕತನ ಸುಳಿ ಸುಖಂ ನಿಳಯವಂತಪ್ಪಯೀ
ಪೊಸ ಕಾವ್ಯ ಕನ್ನಿಕೆಯ ಪಡೆದು ಪಂಪಾಂಬಿಕೆಯ
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕ (ಪರಿಶಿಷ್ಟ ಪು.೩೩)

ಹರಿಶ್ಚಂದ್ರ ಕಾವ್ಯದ ಈ ಸಾಲುಗಳು ಆತ ರಚಿಸಿದ ಕಾವ್ಯ ಕನ್ನಿಕೆಯ ಸ್ವರೂಪವನ್ನು ಹೇಳುತ್ತವೆ. ಕನ್ನಡದ ಪರಂಪರೆಯ ಅನೇಕ ಕವಿಗಳು ಕಾವ್ಯವನ್ನು ಹೆಣ್ಣಾಗಿ ಕಂಡಿದ್ದಾರೆ. 'ಪುಣ್ಯವನಿತೆವೋಲ್ ಕೃತಿ' (ಪಂಪ) ವಾಕ್ಸುಂದರಿ (ರನ್ನ) ಮುಂತಾದುವು ಉದಾಹರಣೆಗಳು. ರಾಘವಾಂಕ ಹೇಳುವ ಕಾವ್ಯ ಕನ್ನಿಕೆಗೆ 'ರಸವೇ ಜೀವ ಭಾವವು ಒಡಲು, ಅರ್ಥ ಅವಯವ, ಶಬ್ಧ ಸಮೂಹ ನುಡಿ, ಅಲಂಕಾರ ತೊಡಿಗೆ, ಸುಲಕ್ಷಣವೆ ಲಕ್ಷಣ, ಪದವಿನ್ಯಾಸವು ನಡೆ, ರೀತಿ ಸುಕುಮಾರತೆ, ರಸಿಕತನವೇ ಚಲನೆ, ಸುಖವೇ ನೆಲೆ'. ಇದು ಆಕೆಯ ಸ್ವರೂಪ. ಕಾವ್ಯದ ಪ್ರಮುಖ ಲಕ್ಷಣಗಳು ಇಲ್ಲಿ ಒಟ್ಟಾಗಿವೆ.

ಕಾವ್ಯವು 'ಸುಖಂ ನಿಳಯ' ಎನ್ನುವುದರ ಮೂಲಕ ರಾಘವಾಂಕನು ಹೊಸದೃಷ್ಟಿಯೊಂದನ್ನು ಹರಿಸಿದ್ದಾನೆ. ಮಾತ್ರವಲ್ಲ ಒಂದೇ ಷಟ್ಪದಿಯಲ್ಲಿ ಎರಡು ಪಾತ್ರಗಳ ಮುಖಾಮುಖಿಯನ್ನು ಮಾಡಿದ ಕವಿ 'ಉದ್ದಂಡ ಷಟ್ಪದಿ'ಯೆಂಬ ಹೊಸರೂಪವೊಂದನ್ನು ಆವಿಷ್ಕಾರ ಮಾಡಿದ್ದಾನೆ. ಷಟ್ಪದಿಯ ಪರಂಪರೆ ಇವನ ನಂತರವೂ ಮುಂದುವರಿದು ಭೀಮ ಕವಿ, ವಿರೂಪಾಕ್ಷ ಪಂಡಿತ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ ಇವರಲ್ಲಿ ಮುಂದುವರಿದು ಆಧುನಿಕರಲ್ಲಿಯೂ ಕಾಣಿಸಿಕೊಂಡಿದೆ.

ಕನ್ನಡ ಒಂದು ಭಾಷೆ ಮಾತ್ರವಲ್ಲ; ಅದು ನಮ್ಮ ಸಂಸ್ಕೃತಿಯ ಮೂಲಧಾತು. ಇದನ್ನು ಅರ್ಥೈಸಿಕೊಂಡು, ಭಕ್ತಿಯ ಆವೇಶದಲ್ಲಿ ಕನ್ನಡದ ಕಲಾತ್ಮಕ ಎಚ್ಚರವನ್ನು ಕಾಯ್ದುಕೊಂಡು ಕಾವ್ಯ ರಚನೆ ಮಾಡಿದ ಕವಿ ಕುಮಾರವ್ಯಾಸ. ಈತ ವಿಶಿಷ್ಟ ಪ್ರತಿಭೆಯ ಸ್ವತಂತ್ರಕವಿ. ಕನ್ನಡನಾಡಿನ ಪ್ರದೇಶವಾದ 'ಗದಗ'ವನ್ನು ಪ್ರತಿನಿಧೀಕರಿಸಿ, ಊರಿನೊಂದಿಗೆ ಗುರುತಿಸಲಾದ ಕಾವ್ಯಕ್ಕೆ ಬಹುಶಃ ಮೊದಲಿಗನಿರಬೇಕು. 'ಗದುಗಿನಭಾರತ', ಕುಮಾರ ವ್ಯಾಸ ಭಾರತ', 'ಕರ್ಣಾಟ ಭಾರತ ಕಥಾ ಮಂಜರಿ' ಮುಂತಾದುವು ಇವನ ಕಾವ್ಯದ ಇನ್ನಿತರ ನಾಮಧೇಯಗಳು.

'ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು. ಭಾರತ ಕಣ್ಣಲಿ ಕುಣಿಯುವುದು' ಎಂಬುದು ಕುವೆಂಪು ಅವರಿಂದ ಕುಮಾರವ್ಯಾಸನಿಗೆ ಸಂದಿರುವ ಮೆಚ್ಚುಗೆ. ಮಹಾಕವಿ ಪಂಪನ ನಂತರ ಭಾರತ ಕಥೆಯನ್ನು ಭಾಮಿನಿ ಷಟ್ಪದಿಯಲ್ಲಿ ಹೊಸತಾಗಿ ನಿರ್ಮಾಣ ಮಾಡಿದ ಶ್ರೇಯಸ್ಸು ಈ ಕವಿಯದು. ಭಾರತ ಕಥೆಯನ್ನು ಭಗವದ್ವಿಲಾಸದ ಕಥೆಯಾಗಿ ಈತ ಸೃಷ್ಟಿಸಿದ್ದಾನೆ. ಹೇಳು-ಕೇಳು ಸಂಪ್ರದಾಯದ ಕಾವ್ಯ ರಚನೆಯ ಮೂಲಕ ಹಳ್ಳಿಗರ ಮನೆ - ಮನಗಳಲ್ಲಿ ಚಿರಸ್ಥಾಯಿಯಾದವನು ಕುಮಾರವ್ಯಾಸ.

ಕಾವ್ಯದಲ್ಲಿ ಕವಿಯ ಹೊಸತನವನ್ನು ಗಮನಿಸಿದ ರಹಮತ್ ತರೀಕೆರೆಯವರು ಈ ಕುರಿತು ಚರ್ಚಿಸುತ್ತಾ, 'ಕುಮಾರವ್ಯಾಸ ಕನ್ನಡ ಭಾಷೆಯನ್ನು ಬಳಸುವ ರೀತಿ, ಅವನ ರೂಪಕ ಪ್ರತಿಭೆ, ಪಾತ್ರಗಳನ್ನು ಕಡೆಯುವ ಜಾಣ್ಮೆ, ಮಾನವೀಯ ಇಕ್ಕಟ್ಟುಗಳಲ್ಲಿ ಪಾತ್ರಗಳ ಸಹಜ ಸ್ವಭಾವವನ್ನು ತರುವ ಸೂಕ್ಷ್ಮತೆ ಮುಖ್ಯವಾಗಿ ಕರ್ನಾಟಕದ ಜನಜೀವನದ ವಸ್ತು ಪ್ರಪಂಚವನ್ನು ಸಮುದಾಯದ ಬದುಕಿನ ಸಂಗತಿಗಳನ್ನು ತನ್ನ ಕೃತಿಯಲ್ಲಿ ಅಳವಡಿಸಿದ ರೀತಿ ಅಪೂರ್ವವಾದುದು' ಎಂದಿದ್ದಾರೆ. (೨೦೦೪ ಪು.೨) ಕನ್ನಡದ ಸ್ವತಂತ್ರಕೃತಿ ಎಂಬಷ್ಟರ ಮಟ್ಟಿಗೆ ಕವಿ ಭಾರತ ಕಥೆಯನ್ನು ಪುನರ್‌ಸೃಷ್ಟಿಸಿದ್ದಾನೆ.

'ತಿಳಿಯ ಹೇಳುವೆ ಕೃಷ್ಣ ಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ ಎನ್ನುತ್ತಾ, 'ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ' ಎಂಬುದಾಗಿ ಶ್ರದ್ಧೆಯಿಂದ ಕೃತಿ ರಚಿಸಿದ್ದಾನೆ. ಸಂಸ್ಕೃತದ ಭಾರತ ಕಥೆಯ ವಸ್ತು ಪಂಪನ ಪ್ರತಿಭೆಯಲ್ಲಿ ಆಸ್ಥಾನದಲ್ಲಿ ಕಾವ್ಯವಾದರೆ, ಕುಮಾರವ್ಯಾಸನ ಪ್ರತಿಭೆಯಿಂದ ದೇವಾಲಯದಲ್ಲಿ ಕಾವ್ಯವಾಯಿತು. ಹಾಗಾಗಿ ಕುಮಾರವ್ಯಾಸನ ಕೇಳುಗರು ಸಾಮಾನ್ಯ ಜನರು. ಕನ್ನಡ ಸಾಹಿತ್ಯದ ಪರಂಪರೆಯನ್ನು ಗಮನಿಸಿದರೆ ಕವಿಗಳು ಕಾವ್ಯದಲ್ಲಿ ಸ್ವಪ್ರಶಂಸೆ ಮಾಡಿಕೊಂಡದ್ದನ್ನು ನೋಡಬಹುದು. ಕುಮಾರವ್ಯಾಸನೂ ಇದರಿಂದ

ಹೊರತಾಗಿಲ್ಲ. ಈತ ತನ್ನ ನಾಲ್ಕು ಅಗ್ಗಳಿಕೆಗಳನ್ನು ಗುರುತಿಸಿಕೊಂಡಿದ್ದಾನೆ. 'ಹಲಗೆ ಬಳಪವ ಓಡಿಯದ ಅಗ್ಗಳಿಕೆ, ಪದವಿಟ್ಟು ಅಳುಪದ ಅಗ್ಗಳಿಕೆ, ಪರರ ಒಡ್ಡವದ ರೀತಿಯ ಕೊಳ್ಳದಗ್ಗಳಿಕೆ, ಬಳಸಿ ಬರೆಯಲು ಕಂಠಪತ್ರದ ಉಲುಹು ಕೆಡದ ಅಗ್ಗಳಿಕೆ' ಕುಮಾರವ್ಯಾಸನದು. ಇವು ಮೇಲ್ನೋಟಕ್ಕೆ ದಾಷ್ಟ್ಯದ ಮಾತುಗಳಂತೆ ಕಂಡರೂ 'ವೀರನಾರಾಯಣನ ಕಿಂಕರ' ಎನ್ನುವಾಗ ಈ ಅಗ್ಗಳಿಕೆಗಳು ಅಲ್ಲೇ ಮರೆಯಾಗಿ ಬಿಡುತ್ತವೆ. ಒಟ್ಟಿನಲ್ಲಿ ಈತ ಸಮರ್ಥ ಕವಿ ಎನ್ನುವುದು ಉತ್ಪ್ರೇಕ್ಷೆಯಲ್ಲ.

ಕುಮಾರವ್ಯಾಸನಲ್ಲಿ ನಾಡು-ನುಡಿಯ ಉದ್ಘೋಷಗಳು ಕಾಣಿಸದೆ ಅವನ ಕಾವ್ಯ ಸಂವೇದನೆಯಲ್ಲಿ ಅವು ಇಣುಕು ಹಾಕಿದ್ದನ್ನು ಕಾಣಬಹುದು. ಉದಾಹರಣೆಗೆ, ಕೌರವ-ಪಾಂಡವರ ಬಾಲ್ಯಕೇಳಿಯ ವರ್ಣನೆಯ ಸಂದರ್ಭದಲ್ಲಿ ವೈವಿಧ್ಯಮಯ ಆಟಗಳನ್ನು ಕವಿ ಗುರುತಿಸುತ್ತಾನೆ.

> ಅಳಿ ನೇರಿಕೆ ಹಿಡಿಗವಡೆ ಗುರಿ
> ಯಾಳು ಚೆಂಡಿನ ಹೊಣಕೆ ಚಿಣಿ ಕೋ
> ಲಾಳು ಗೊತ್ತಿನ ದಂಡೆಯೆನೆ ನಾನಾವಿನೋದದಲಿ (೬-೧)

ಇವೆಲ್ಲಾ ಆ ಕಾಲದ ಆಟಗಳೂ ಆಗಿದ್ದುವೆಂಬುದನ್ನು ಗಮನಿಸಿಬಹುದು. ಮಕ್ಕಳಿಗೆ ದೃಷ್ಟಿತಾಕುವುದೆಂಬ ನಂಬಿಕೆ. ಅದಕ್ಕಾಗಿ ದೃಷ್ಟಿ ನಿವಾಳಿಸುವ ಪದ್ಧತಿ ಇಂದಿಗೂ ನಮ್ಮ ನಾಡಿನಲ್ಲಿದೆ. ಇದು ಕುಮಾರವ್ಯಾಸ ಭಾರತದಲ್ಲಿಯೂ ಅನಾವರಣಗೊಳ್ಳುತ್ತದೆ.

'ಸೀರೆಗಳ ತೂಪಿರಿದು ಸುಳಿವುಪ್ಪಾರತಿಯ ತನಿ ಹರಕೆ ತಳಿದುದು ತಾಯ ನೇಮದಲಿ' (೨-೩೦) ಎನ್ನುವಲ್ಲಿ ಸಂಪ್ರದಾಯವೊಂದರ ಪರಿಚಯವಾಗುತ್ತದೆ. ನೆರೆದ ಹೆಂಗಸರು ತಮ್ಮ ಸೆರಗಿನ ತುದಿಯನ್ನು ಗಾಳಿಯಲ್ಲಿ ತೂರಿ ಉಪ್ಪಾರತಿ ಮಾಡುವ ರೀತಿ ಇಲ್ಲಿ ಪ್ರಕಟಗೊಂಡಿದೆ. ಇಂತಹ ಸೂಕ್ಷ್ಮ ಸಂಗತಿಗಳನ್ನು ಕವಿ ಗಮನಿಸಿದ್ದಾನೆಂಬುದಕ್ಕೆ ಇದು ಸಾಕ್ಷಿ.

ವಿಜಯನಗರ ಅನೇಕ ಯುದ್ಧಗಳನ್ನು ಕಂಡದ್ದು ನಿಜ. ಈ ಯುದ್ಧಗಳಲ್ಲಿ ವೈವಿಧ್ಯಮಯವಾದ ಆಯುಧಗಳ ಬಳಕೆಯಾಗಿದ್ದಿರಬೇಕು. ಅವುಗಳ ಹೆಸರುಗಳು ಕೃತಿಯಲ್ಲಿ ಲಭ್ಯವಾಗುತ್ತವೆ. ಬಿಲ್ವಿದ್ಯೆಯ ಪ್ರದರ್ಶನಕ್ಕಾಗಿ ಸಿದ್ಧಪಡಿಸಿದ ಮಂಟಪ ಓದುಗರನ್ನು ಆಕರ್ಷಿಸುತ್ತದೆ. ಇದು ಹಸ್ತಿನಾಪುರದ ವೈಭವವೆನ್ನಿಸದೆ ಹಂಪೆಯ ವೈಭವದಂತೆ ಕವಿ ಕಲ್ಪಿಸುತ್ತಾನೆ. ಇಲ್ಲಿನ ವಿವರಗಳು ಹಂಪಿಯನ್ನು ನೆನಪಿಗೆ ತರುವಂತಿವೆ. ಕವಿಗೆ ತನ್ನ ತವರನ್ನು ಕಾವ್ಯದೊಳಗೆ ತರುವ ಆತುರ. ಅರ್ಜುನನ ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನನಿಗೆ

ಪಂಚಗೋದಾವರಿಯ ಸ್ನಾನದ ನಂತರ ತುಂಗಭದ್ರೆಯ ಸ್ನಾನ ಮಾಡಿಸಿ ಕಂಚಿಯನ್ನು ಪ್ರವೇಶ ಮಾಡಿಸುತ್ತಾನೆ. ಕೃಷ್ಣನ ಪಟ್ಟಣವನ್ನು ಹುಡುಕುತ್ತಾ 'ಕೇರಳ ಜನಪದದ ತೌಳವದ ಕೊಂಕಣ ವಿಷಮ ವೀಧಿಯಲಿ' ಸಂಚರಿಸುವಾಗ ಸುರಿದ ಮಳೆಯ ವರ್ಣನೆ ಸುಂದರವಾಗಿ ಮೂಡಿ ಬಂದಿದೆ.

ಕನ್ನಡ ನಾಡಿನ ಅರಣ್ಯ ಕವಿಯ ಪ್ರತಿಭೆಯಲ್ಲಿ ದಿವ್ಯವಾಗಿ ಕಾಣಿಸಿದೆ. ಖಾಂಡವವನದ ಸಂದರ್ಭದಲ್ಲಿ ಅನೇಕ ಮರಗಳನ್ನು ಗುರುತಿಸಿದ್ದಾನೆ. ಅಲ್ಲಿ ಬೆಂದು ಹೋದ ಮರಗಳು ಕನ್ನಡ ನಾಡಿನ ಮರಗಳೇ ಆಗಿವೆ. ಕನ್ನಡಿಗರ ವಿಶಿಷ್ಟ ಬೆಳೆಯಾದ ಅಡಿಕೆಯೂ ಇಲ್ಲಿ ಸೇರಿದೆ. ಷಟ್ಪದಿಯಲ್ಲಿ ಕೃತಿ ರಚನೆ ಮಾಡಿ ಆ ದಾರಿಯಲ್ಲಿ ನಡೆದು ಆಡುನುಡಿಯ ಭಂಡಾರವನ್ನು ಪಳಗಿಸಿಕೊಂಡವನು ಕುಮಾರವ್ಯಾಸ. ಕನ್ನಡ ದೇಸೀತನದ ಮತ್ತು ಅನ್ಯಭಾಷಾ ಪದಗಳ ಬಳಕೆಯೊಂದಿಗೆ ವಿಶಿಷ್ಟವಾದ ಕಾವ್ಯಾಭಾಷೆಯನ್ನು ಈತ ರೂಪಿಸಿಕೊಂಡಿದ್ದಾನೆ.

**ಪ್ರಭುಲಿಂಗಲೀಲೆ**

ಚಾಮರಸ ಶೈವಕವಿ. 'ಪ್ರಭುಲಿಂಗಲೀಲೆ'ಯ ನಾಯಕ ಅಲ್ಲಮಪ್ರಭು. ಕವಿಯ ಪ್ರಕಾರ ಆತನ ಕೃತಿ,

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬುತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯನು (೧-೧೩)

ಇದು ತನ್ನ ಕಾವ್ಯವನ್ನು ಕವಿ ಪರಿಚಯಿಸಿಕೊಂಡ ಬಗೆ. ತನ್ನ ಬಗ್ಗೆ ಕವಿ ಯಾವ ಸಂಗತಿಯನ್ನು ಹೇಳಿಕೊಂಡಿಲ್ಲ. ಭಾಮಿನಿ ಷಟ್ಪದಿಯಲ್ಲಿ ಈ ಕೃತಿ ರಚನೆಗೊಂಡಿದೆ. ಕೃತಿಯ ಆರಂಭ ಮತ್ತು ಮುಕ್ತಾಯ ಶಿವ-ಪಾರ್ವತಿಯರ ಸಂವಾದದಿಂದ. ಇಲ್ಲಿ ಶಿವನನ್ನು ಪ್ರಶ್ನಿಸುವ ಶಿವೆ ಸಾಮಾನ್ಯರ ಪ್ರತಿನಿಧಿಯೆನಿಸುತ್ತಾಳೆ.

ಪ್ರಭುಲಿಂಗಲೀಲೆಯಲ್ಲಿ ನಾಡು ಮತ್ತು ನುಡಿಯ ಸಂವೇದನೆಯ ಪ್ರತಿನಿಧೀಕರಣವನ್ನು ಕುರಿತು ಚರ್ಚಿಸುವಾಗ ಮೊದಲಿಗೆ ಕಾಣಿಸಿಕೊಳ್ಳುವ ಸಂಗತಿಯೆಂದರೆ, ಬನವಾಸಿಯ ವರ್ಣನೆ. ಶರಣರ ವ್ಯಕ್ತಿತ್ವ ಸಾಧನೆಗಳನ್ನು ಒಂದೊಂದು ನುಡಿಯ ಮೂಲಕ ಗುರುತಿಸುತ್ತಾ, ಶರಣು

ಶರಣಾರ್ಥಿ ಎನ್ನುವ ಭಕ್ತಿ ಪುರಸ್ಸರವಾದ ನಾಡಿನ ಗೌರವ ಸಂಸ್ಕೃತಿದ್ಯೋತಕವಾದ ಈ ಸಂಬೋಧನೆ ಓದುಗರನ್ನು ಆಕರ್ಷಿಸುತ್ತದೆ.

ಗಿರಿಜೆಯು ತನ್ನ ತಾಮಸಕಳೆಯಾದ ಮಾಯೆಯನ್ನು ಅಲ್ಲಮನನ್ನು ತಿಳಿದು ಬರುವುದಕ್ಕೆ ಭೂಮಿಗೆ ಕಳುಹಿಸುತ್ತಾಳೆ. ಭೂಮಿಯಲ್ಲಿ ಹುಟ್ಟಿದ ಮಾಯೆಯ ಕುರಿತಾದ ಆಲೋಚನೆಗಳೊಂದಿಗೆ ಬನವಾಸಿಯ ವರ್ಣನೆಯೂ ಕಾಣಿಸಿಕೊಳ್ಳುತ್ತದೆ.

ಸತ್ಯದಲಿ ಸದ್ಭಕ್ತಿಯಲಿ ಸ
ದ್ವೃತ್ತಿಯಲಿ ಸಚ್ಚರಿತದಿ ಸಂ
ಪತ್ತಿನಲಿ ಸಲೆ ಸೊಗಸಿ ಬೆಳುವೊಲ ದೇಶ ಮೆರೆದಿಹುದು (೩–೧)

ಸತ್ಯ, ಸದ್ಭಕ್ತಿ, ಸದ್ವೃತ್ತಿ, ಸಚ್ಚಾರಿತ್ರ ಮತ್ತು ಸಂಪತ್ತಿಗೆ ಆಗರವಾದದ್ದು ಬೆಳುವೊಲ ದೇಶ. ಈ ದೇಶದೊಳಗೆ ಶೋಭಾಯಮಾನವಾಗಿರುವುದು ಬನವಸೆಯೆಂಬ ಪಟ್ಟಣ. ಅದು, 'ಭೂಕಾಂತೆಗೊಪ್ಪುವ ಮುಖವೋ, ಶೃಂಗಾರದ ತಿರುಳಿನ ಮನೆಯೋ, ಸೌಂದರ್ಯ ಮತ್ತು ಸಂತೋಷದ ಆಶ್ರಯ ಸ್ಥಾನವೋ, ಚೆಲುವಾದ ರತ್ನಗಳನ್ನು ಹೊರಚೆಲ್ಲುವ ಮನೋಹರವಾದ ಸಮುದ್ರವೋ, ಎಂಬಂತೆ ಸಂಭ್ರಮದಿಂದ ಮನೋಹರವಾಗಿತ್ತು. ಯಾವುದೇ ದೇಶವನ್ನು ಸಮೃದ್ಧಿಯ, ಸಂಭ್ರಮದ ದೇಶವೆಂದು ವರ್ಣಿಸಬೇಕಾದರೆ ಆ ದೇಶದ ಬಗೆಗೆ ಅಭಿಮಾನವಿದ್ದರೆ ಮಾತ್ರ ಸಾಧ್ಯ. ಬನವಸೆಯನ್ನು ಕವಿ ಬಹಳ ಅಭಿಮಾನದಿಂದ ಗುರುತಿಸಿದ್ದಾನೆ.

ಆವಕಾಲದಲಾದಡೆಯು ಫಲ
ವೀವುತಿಹ ಪಲತೆರದ ನೇಱಿಲು
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯ
ತೀವಿ ಚರಿಸುವ ಶುಕಪಿಕಭ್ರಮ
ರಾವಳಿಯ ನಾನಾವಿಧದ ಶೋ
ಭಾವಹವೆ ತಾನಾದುದಾ ಬನವಸೆಯಲುದ್ಯಾನ (೧–೩)

ಸಸ್ಯ ಸಂಪತ್ತು, ಪ್ರಾಣಿ ಪಕ್ಷಿಗಳ ಪ್ರಪಂಚವನ್ನು ಗುರುತಿಸುವ ಪರಂಪರೆ ಎಲ್ಲಾ ನಾಡವರ್ಣನೆಗಳಲ್ಲಿಯೂ ಕಾಣಿಸಿಕೊಂಡಿದೆ. ಚಾಮರಸನೂ ಇದನ್ನು ಅಚ್ಚುಗಟ್ಟಾಗಿ ಮಾಡಿದ್ದಾನೆ. ಎಲ್ಲಾ ಕಾಲದಲ್ಲೂ ಫಲ ನೀಡುವ ನೇರಿಳೆ, ಮಾವು, ದಾಳಿಂಬೆ, ತೆಂಗು, ಕಿತ್ತಳೆ, ಮೊದಲಾದ ಮರಗಳಿಂದಲೂ ಗಿಳಿ, ಕೋಗಿಲೆ, ದುಂಬಿಗಳ ಸಮೂಹದಿಂದಲೂ ಬನವಸೆಯ ಉದ್ಯಾನವನ ನಾನಾ ಬಗೆಯ ಚೆಲುವಿನಿಂದ ಶೋಭಿಸಿತು. ಪರಂಪರೆಯ ಕಾವ್ಯಗಳನ್ನು ಗಮನಿಸಿದರೂ ಅಲ್ಲಿ ಎಲ್ಲಾ ಹಣ್ಣುಗಳು ಎಲ್ಲಾ ಋತುಗಳಲ್ಲಿ ಲಭ್ಯವಿರುವ ಸಂಗತಿ ದಾಖಲಾಗುತ್ತದೆ. ಚಾಮರಸನೂ

ನಿಸರ್ಗಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದಾನೆ. ಉದಾಹರಣೆಗೆ 'ಕಾರಮುಗಿಲಿನ ಗರ್ಜನೆಯ ಕಿವಿಯಾರೆ ಕೇಳುವ ಸೋಗೆಯಂತಿರೆ' (೫-೧೦) 'ಮಳೆಗೆ ನೆನೆವುದು ಗಾಳಿ ಬೀಸಿದೊಡೊಲೆವುದೇ ಬಲುಗಿಚ್ಚಿನುರಿಯಿಂದಳಿವುದೇ ನಭ'. (೫-೪೨)

ಸಾಲಂಕೃತ ಬನವಾಸಿಯನ್ನು ಗುರುತಿಸುವ ಕವಿ 'ಬೀದಿ ಬೀದಿಗಳಲ್ಲಿ ಚಿಗುರಿನಿಂದ ತುಂಬಿದ ಬಾವುಟ ತೋರಣಗಳು, ಸುಗಂಧಭರಿತವಾದ ನೀರಿನಿಂದ ನೆಲಸಾರಿಸುವ, ಸುಣ್ಣಗೊಂಡ ಗೋಡೆಗಳ ಅಂಚಿಗೆ ಬಣ್ಣಗಟ್ಟುವ, ಗಂಧದ ನೀರನ್ನು ಚಿಮುಕಿಸುವ, ಆನಂದವನ್ನುಂಟುಮಾಡುವ ರಂಗವಲ್ಲಿಗಳಿಂದ ಸಿಂಗಾರಗೊಂಡ ಬೀದಿ'ಯನ್ನು ವರ್ಣಿಸುತ್ತಾನೆ. ಈ ರೀತಿ ಸಿಂಗರಿಸಿದ ಜನ ಕ್ರಿಯಾಶೀಲರು. ಇಂತಹ ಕ್ರಿಯಾಶೀಲತೆಯಿಂದಲೇ ಆ ನಾಡು 'ಕಳಕಳತೆವೆತ್ತಿಹುದು'.

ಅಲ್ಲಿ ಕೇಳಿಸುವ ಗದ್ದಲ ಯಾವುದೆಂದರೆ, ವೇದಶಾಸ್ತ್ರ ಆಗಮಪುರಾಣಗಳನ್ನು ಓದುವ ಧ್ವನಿ, ಕಣದಲ್ಲಿ ಹೋರಾಡಿ ಗೆದ್ದ ಅತಿಶಕ್ತಿವಂತರನ್ನು ಹೊಗಳುವ ಧ್ವನಿ, ಬೀದಿ ಬೀದಿಗಳಲ್ಲಿ ಕಾಲಿಗೆ ಕಟ್ಟಲ್ಪಟ್ಟ ಸರಪಳಿಯ ಅಡ್ಡಿಯಿಂದಾಗಿ ಕೆರಳಿ ಘೀಳಿಡುವ ಆನೆಗಳ ಧ್ವನಿ. ವಿದ್ಯಾವಂತಿಕೆಗೂ ಜ್ಞಾನಕ್ಕೂ, ಪರಾಕ್ರಮಕ್ಕೂ ಅಲ್ಲಿ ಕೊರತೆಯಿರಲಿಲ್ಲ.

ನುಡಿವ ಜಾಣರು ಸಕಲಶಬ್ಧವ
ನಡೆದ ಜಾಣರು ನಿಕಿಳರೀತಿಯ
ಕುಡುವ ಜಾಣರು ಕುಂದದಂತಿರಲರ್ಥಿಗರ್ಥವನು
ಪೊಡವಿಗಿದು ಪೊಸತೆಂಬ ಜನಪದ
ಮಿಡಿದು ಕಿಕ್ಕಿಜಿಗಿಜಿದು ಬನವಸೆ
ಗೊಡೆಯನಾಗಿರುತಿರ್ಪನ್ನೈ ಮಮಕಾರ ಭೂಪಾಲ (೨-೬)

ಸುಂದರವಾದ ಆ ನಾಡಿನ ಜನಪದವನ್ನು ಕವಿ ಯೋಗ್ಯ ರೀತಿಯಲ್ಲಿ ವರ್ಣಿಸಿದ್ದಾನೆ. ಕವಿಗೆ ನಾಡಿನ ಜನರ ಮೇಲಿದ್ದಂತಹ ಪ್ರೇಮ ಇಲ್ಲಿ ಪ್ರಕಟಗೊಳ್ಳುತ್ತದೆ. ತನ್ನ ನಾಡಿನ ಜನ ನುಡಿ-ನಡೆಯಲ್ಲಿ ಜಾಣರು. ಯಾಚಕನಿಗೆ ಕೊರತೆಯಾಗದ ರೀತಿಯಲ್ಲಿ ಸಂಪತ್ತನ್ನು ದಾನ ಮಾಡುವ ಜಾಣರು. ಇದು ಭೂಮಿಗೆ ಹೊಸತು ಎಂಬಂತೆ ಕಿಕ್ಕಿರಿದು ತುಂಬಿದ್ದ ಆ ಬನವಾಸಿಗೆ ಮಮಕಾರನು ಒಡೆಯನಾಗಿದ್ದ. ಮೋಹಿನಿ ಮತ್ತು ಮಮಕಾರ ಬನವಾಸಿಯ ರಾಜದಂಪತಿ. ಇವರಲ್ಲಿ ಸಾಹಸ, ಸಂಪತ್ತು, ರೂಪಲಾವಣ್ಯ ಇತ್ತೆಂಬುದನ್ನು ವರ್ಣಿಸಿದ ಕವಿ ಅಲ್ಲಮನ ಸ್ವರೂಪವನ್ನು ತಿಳಿಯದವರು ಎಂಬುದನ್ನು ಪರೋಕ್ಷವಾಗಿ ತಿಳಿಸುತ್ತಾನೆ. ಸಂತಾನಭಾಗ್ಯ

ಪ್ರಾಪ್ತಿಯಾಗದೇ ಇದ್ದಾಗ ಇವರು ಶಿವನನ್ನು ಪೂಜಿಸದೆ ಗೌರಿವ್ರತವನ್ನು, ನಾನಾ ಬಗೆಯ ಶಕ್ತಿ ದೇವತೆಗಳ ಜಡದೇವತೆಗಳ ಪೂಜೆಯನ್ನು ಮಾಡಿದರು ಎಂಬುದರ ಮೂಲಕ ಮಾಯೆಯ ಜನನಕ್ಕೆ ಪೂರ್ವ ತಯಾರಿಯೊಂದನ್ನು ನಿರ್ಮಾಣ ಮಾಡಿದ್ದಾನೆ. ಹುಟ್ಟುವ ಮಗು ಶಿವೆಯ ತಾಮಸ ರೂಪ. ಈ ಹೆಣ್ಣು ಮಗುವಿನ ಬಾಲ ಲೀಲೆಯ ವರ್ಣನೆ ಮನಮೋಹಕವಾಗಿ ಮೂಡಿ ಬಂದಿದೆ.

ಮಧುಕೇಶ್ವರನನ್ನು ದರ್ಶಿಸುವುದಕ್ಕಾಗಿ ಹೊರಟ ಮಾಯೆಯ ಅಲಂಕಾರ ಮತ್ತು ಬಳಸಿದ ಸಾಮಗ್ರಿಗಳನ್ನು ನೋಡಿದರೆ ಕನ್ನಡ ನಾಡಿನ ಹೆಣ್ಣು ಮಗಳೊಬ್ಬಳು ಸರ್ವಾಲಂಕೃತೆಯಾಗಿ ಕಣ್ಣಮುಂದೆ ನಿಂತಂತಾಗುವುದು. ಶಿವನನ್ನು ಆರಾಧಿಸಿ ಆಕೆ ಅರ್ಪಿಸುವ ನೈವೇದ್ಯವನ್ನು ಗಮನಿಸಿದರೆ, ಅಲ್ಲಿ ಕರ್ನಾಟಕದ ಭಕ್ಷ್ಯರಾಶಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ಆಕೆ ದೇಸಿರಾಗವನ್ನು ಪ್ರೀತಿಯಿಂದ ಆಲಾಪಿಸುತ್ತಾಳೆ. ಈ ಮೂಲಕ ಕವಿ ನಾಡಿನ ವಿಶಿಷ್ಟವಾದ ಸಂಸ್ಕೃತಿಯೊಂದನ್ನು ಕಾಣಿಸಿದ್ದಾನೆ.

ಅಲ್ಲಮಪ್ರಭು ಕನ್ನಡನಾಡಿನ ಚಾರಿತ್ರಿಕ ವ್ಯಕ್ತಿ. ಕೃತಿಯ ಹೆಸರನ್ನು ಗಮನಿಸಿದಾಗ, ಕೃತಿಯ ಉದ್ದೇಶವೂ ಅರ್ಥವಾಗುವಂತಿದೆ. ಪ್ರಭುದೇವನ ಲೀಲೆಯನ್ನು ಬಣ್ಣಿಸುವುದು ಎಂಬುದರ ಮೂಲಕ ಈ ಹೆಸರು ಔಚಿತ್ಯಪೂರ್ಣವೆನಿಸಿದೆ. ಕಾವ್ಯದೊಳಗಿನ ಪಾತ್ರಗಳ ನಾಮಧೇಯವೂ ಕುತೂಹಲ ಹುಟ್ಟಿಸುವಂತೆಯೇ ಇದೆ. ಮಮಕಾರ, ಮೋಹಿನಿ, ನಿರಹಂಕಾರ, ಸುಜ್ಞಾನಿ, ಮಾಯಾದೇವಿ, ಅಲ್ಲಮ ಈ ವ್ಯಕ್ತಿನಾಮಗಳು ಗುಣವಾಚಕಗಳು ಎಂಬುದಾಗಿ ಪರಿಗಣಿಸಬೇಕೇ ಎಂಬ ಸಂದೇಹ ಮೂಡುತ್ತದೆ. ಬಹುಶ ಲೌಕಿಕ ಮತ್ತು ಅಲೌಕಿಕತೆಯನ್ನು ಮೇಳೈಸುವುದು ಕವಿಯ ಉದ್ದೇಶವಾಗಿತ್ತೆಂಬುದನ್ನು ಗ್ರಹಿಸಬಹುದಾಗಿದೆ.

ಪ್ರಭುಲಿಂಗಲೀಲೆಯ ಭಾಷೆ ಸರಳವಾದ ನಡುಗನ್ನಡ ಭಾಷೆ. ದೇಸೀನುಡಿಗಳ ಬಳಕೆಯಿಂದಾಗಿ ವಿಶೇಷ ಮಹತ್ವ ಕೃತಿಗೆ ಲಭ್ಯವಾಗಿದೆ. 'ಮನದ ಗಂದೆಯ ತುರಿಸಿದಂತಿರೆ', 'ಉದಕದಲಿ ಮುಳುಗಿದ ಸುಣ್ಣ ಕಲ್ಲಂತಾಗಿ', 'ಕಣ್ಣುಗಾಣದ ಕುರುಡನೊಳ್ಳಿಹ ಕನ್ನಡಿಯ ಹಿಡಿದಂತೆ', 'ಬೆಂದಹುಣ್ಣನು ಕೀಸುವರೆ ಕಂಬಿಯಲಿ' 'ಹಡೆವ ಸೂಳೆಗೆ ಸೊಗಸು ಹುಟ್ಟಿದೆ ಗುಡಿಯ ಸುಡುವಂದದಲಿ', ಮೊಲನ ಕಂಡೊಡೆ ನಿಂದುದುಂಟೇ ನಾಯಿಗಳು' ಮುಂತಾದ ಸಾಲುಗಳನ್ನು ನೋಡಿದಾಗ ಸಂಸ್ಕೃತದ ಪ್ರಭಾವದಿಂದ ಕವಿ ಮುಕ್ತನಾಗಿರುವುದು ಕಾಣುತ್ತದೆ. 'ಪ್ರಭುಲಿಂಗಲೀಲೆ'ಯಲ್ಲಿ ಅಚ್ಚಗನ್ನಡದ ಸೊಗಸಿದೆ. ಮನುಷ್ಯನ ಬಾಳಿನ ಭಾವನೆಗಳನ್ನು, ಪ್ರೀತಿ, ಪ್ರೇಮ, ವಿರಹಗಳನ್ನು ಅನಾವರಣಗೊಳಿಸುವ ಸುಂದರವಾದ ಸರಳವಾದ ಭಾಷೆಯಿಂದ ಕಾವ್ಯ

ನಿರ್ಮಾಣವಾಗಿದೆ. ಜೊತೆಗೆ ಶಿವಭಕ್ತಿಯನ್ನು ಸಾಮಾನ್ಯರಿಗೂ ಅರ್ಥೈಸುವ ಭಾಷೆ ಇದಾಗಿದೆಯೆಂಬುದರಲ್ಲಿ ಎರಡು ಮಾತಿಲ್ಲ.

**ರಾಮನಾಥಚರಿತೆ**

'ಕುಮಾರರಾಮನ ಸಾಂಗತ್ಯ' ಎಂಬ ನಾಮಧೇಯವುಳ್ಳ ಈ ಕೃತಿಯ ಕರ್ತೃ ನಂಜುಂಡ ಕವಿ. ಕೃತಿಯ ಹೆಸರೇ ಇದರ ಛಂದಸ್ಸನ್ನೂ ಗುರುತಿಸುತ್ತದೆ. ದೇಸೀ ಛಂದಸ್ಸಿನಲ್ಲಿ ವೀರಕಾವ್ಯವೊಂದನ್ನು ರಚಿಸಿದ್ದು ಕವಿಯ ಹಿರಿಮೆ. ಈ ಕಾವ್ಯದ ನಾಯಕ 'ಪರದಾರ ಸಹೋದರ'ನೆಂಬ ಬಿರುದಿಗೆ ಪಾತ್ರನಾದ ಕುಮಾರರಾಮ. ಈತ ಕನ್ನಡನಾಡಿನಲ್ಲಿ ಜನಪ್ರಿಯನಾಗಿದ್ದು ಶೌಚಗುಣಕ್ಕೆ ಹೆಸರಾದವನು. ಕೃತಿಯ ಕಥಾಭೂಮಿಕೆ ಕರ್ನಾಟಕದ ಹೊಸಮಲೆದುರ್ಗ ಮತ್ತು ಕುಮ್ಮಟದುರ್ಗ.

ಕವಿಯೇ ಹೇಳುವಂತೆ ಈ ಕೃತಿ ವೀರರಾಮನ ಚರಿತೆ. ಇದನ್ನು ಆದರಿಸುವವರಿಗೆ 'ಶುಚಿತೆ', 'ವೀರತೆ' ಲಭ್ಯವಾಗುವುದು. ಕಥಾಸಾರವನ್ನು ಗ್ರಹಿಸುವುದಾದರೆ, ರಾಮನಾಥನನ್ನು ಆತನ ಮಲತಾಯಿ ಮೋಹಿಸಿ ತಿರಸ್ಕಾರಕ್ಕೆ ಒಳಗಾಗುತ್ತಾಳೆ. ಸಿಟ್ಟಿನಿಂದ ತನ್ನ ಪತಿಗೆ ದೂರಿತ್ತಾಗ ಅವನನ್ನು ಕೊಲ್ಲಲ್ಲು ಆಜ್ಞೆಯಾಗುತ್ತದೆ. ಮಂತ್ರಿಯಿಂದಾಗಿ ರಾಮನಾಥ ಉಳಿಯುತ್ತಾನೆ. ಇದೇ ಸಂದರ್ಭದಲ್ಲಿ ಶತ್ರುಗಳ ಆಕ್ರಮಣವಾದಾಗ ರಾಮನಾಥ ಕಾಣಿಸಿಕೊಂಡು ಶತ್ರುನಾಶಕ್ಕೆ ಕಾರಣನಾಗಿ ಯುದ್ಧದಲ್ಲಿ ಹತನಾಗುತ್ತಾನೆ. ಇಂತಹ ವ್ಯಕ್ತಿತ್ವದ ರಾಮನಾಥನ ಬಗೆಗೆ ಬೇರೆ ಬೇರೆ ಕಾವ್ಯಗಳೂ ನಿರ್ಮಾಣವಾಗಿವೆ. ಪಾಂಚಾಳಗಂಗ, ನಾಗಸಂಗಯ್ಯ, ಮಹಲಿಂಗಸ್ವಾಮಿ, ಗಂಗಯ್ಯ ಮುಂತಾದ ಕವಿಗಳಿಗೆ ಈತ ಕಾವ್ಯ ವಸ್ತುವಾಗಿದ್ದಾನೆ. ನಂಜುಂಡ ಕವಿಯು,

> ಪಲ್ಲವವಿಲ್ಲದ ಮಾವು ಮಾವಿಲ್ಲದ
> ಮಲ್ಲಿಗೆ ಮಲ್ಲಿಕಾಲತಿಕೆ
> ಯಿಲ್ಲದ ವನ ವನವಿಲ್ಲದ ಭೋಗಿಗ
> ಳಿಲ್ಲಾ ದೇಶದೆಡೆಯೊಳು (೨-೩೦)

ಎಂಬಲ್ಲಿ ಆಂಡಯ್ಯನ ನೋಟವಿದೆ. ಕರ್ನಾಟಕದಲ್ಲಿ ಇಲ್ಲದ್ದು ಯಾವುದೂ ಇಲ್ಲ ಎಂಬಂತೆ ನಾಡ ಸಮೃದ್ಧಿಯ ವರ್ಣನೆ ಇಲ್ಲಿದೆ. ನಾಡಿನಲ್ಲಿರುವ ಎಲ್ಲರಿಗೂ ಸರಸ ಸಾಹಿತ್ಯ ಸಂಗೀತ ಕಲಾಪ್ರೌಢಿಮೆಯಿತ್ತು ಎಂಬುದನ್ನು ಅಭಿಮಾನದಿಂದ ಕವಿ ಗುರುತಿಸಿದ್ದಾನೆ. ಇಂತಹಾ ನೆಲದಲ್ಲಿ ವೀರರಿಂದ, ವಿತರಣ ಗುಣ ಶೂರರಿಂದ, ಸಾರಗುಣ ಗ್ರಾಹಿಗಳಿಂದ, ರಸಿಕರಿಂದ ತುಂಬಿದ ನಾಡು ಕನ್ನಡನಾಡು. ಪಥಿಕರಿಗೆ ದಾರಿ ಸವೆದದ್ದೇ ತಿಳಿಯದು ಎಂಬಂತೆ ಊರೂರಲ್ಲಿ

ಮೆರೆವ ದೇವಾಲಯಗಳು, ಕೋಟೆಗಳು, ರಮ್ಯವಾದ ಪ್ರದೇಶಗಳು ನಾಡಿನ ಹಿರಿಮೆಯೆನಿಸಿವೆ. ಕೈಲಾಸ, ಕೇದಾರ, ಕಂಚಿ, ಗೋಕರ್ಣ ಮೊದಲಾದ ಕ್ಷೇತ್ರಗಳಿಂದಲೂ ಮಿಗಿಲಾಗಿ ಪಂಪಾಕ್ಷೇತ್ರವಿದೆ ಎನ್ನುವಾಗ ಕವಿಯ ನಾಡಿನ ಅಭಿಮಾನ ಪುಟಿದೇಳುತ್ತದೆ.

ಸಾಂಸ್ಕೃತಿಕ ನಗರವಾದ ಹಂಪೆಯ ಬಗೆಗೆ ಕವಿಗೆ ವಿಶೇಷ ಒಲುಮೆ. ಇದರ ಜೊತೆಗೆ ಆ ನಗರದ ಜೀವನದಿಯಾದ ತುಂಗಭದ್ರೆಯನ್ನು ಕವಿ ಗುರುತಿಸಿದ್ದಾನೆ. ಹೊಸಮಲೆ, ಹಂಪೆ, ಕರ್ನಾಟಕ ಮೊದಲಾದ ಭಿನ್ನ ನೆಲೆಗಳಲ್ಲಿ ಕವಿ ಕನ್ನಡ ನಾಡನ್ನು ಪ್ರತಿನಿಧೀಕರಿಸುತ್ತಾನೆ. ಇಂತಹ ಸಮೃದ್ಧವಾದ, ಸುಂದರವಾದ ನಾಡನ್ನು ಕಥಾಕೇಂದ್ರವಾಗಿ ಮಾಡಿಕೊಂಡು ಪುರಾಣದ ಪಾತ್ರಗಳನ್ನು ಕನ್ನಡನಾಡಿನ ಪಾತ್ರಗಳಾಗಿ ಮಾಡಿಕೊಂಡು ಅಭಿಮಾನವನ್ನು ಮೆರೆದಿದ್ದಾನೆ.

ಕಾವ್ಯದಲ್ಲಿ ಮಂತ್ರಿ ಮತ್ತು ಕುಮಾರರಾಮನ ಸಂಭಾಷಣೆಯನ್ನು ಗಮನಿಸುವಾಗ, ತುರುಕರಿಂದ ನಾಡನ್ನು ಕಾಪಾಡುವ ಜವಾಬ್ದಾರಿ ರಾಮನಿಗೆ ಅಗತ್ಯವೆಂಬ ಮಾತು ಕಾಣಿಸುತ್ತದೆ. 'ಅಳಿಯೆ ನೀನಾಂಧ್ರ, ಕರ್ಣಾಟ, ದ್ರಾವಿಡ ಭೂತಳ ತುಳು ಮಳೆಯಾಳಗಳ, ತುಳಿವರು ಹೊಕ್ಕು ತುರಕರು ಧರ್ಮಸ್ಥಿತಿಯಳಿವುದು ಕುವರ ನಿನ್ನಾಣೆ' ಎಂಬ ಮಾತುಗಳನ್ನು ಹೇಳುತ್ತಾ ಮಂತ್ರಿ ರಾಮನನ್ನು ಎಚ್ಚರಿಸುವುದರೊಂದಿಗೆ ಗುರುತರವಾದ ಜವಾಬ್ದಾರಿಯನ್ನು ಅವನಿಗೆ ಒಪ್ಪಿಸಿದ್ದಾನೆ. ಧರ್ಮ ಉಳಿಯುವುದರೊಂದಿಗೆ, ಕುಮಾರರಾಮನ ಸಾಂಗತ್ಯದಲ್ಲಿ ಕಾವ್ಯದುದ್ದಕ್ಕೂ ನಾಡಿನ ಚಾರಿತ್ರಿಕ ಸಂಗತಿಗಳು ಕಾಣಿಸಿಕೊಂಡಿವೆ.

ಕನ್ನಡ ನಾಡು – ನುಡಿಯನ್ನು ಈ ಕಾವ್ಯವು ಪ್ರತಿನಿಧೀಕರಿಸಿದ ಬಗೆಯನ್ನು ಅಧ್ಯಯನ ಮಾಡುವಾಗ ಕನ್ನಡಿಗನೊಬ್ಬನ ಶೌರ್ಯವನ್ನು ಅನಾವರಣಗೊಳಿಸಿದ ಕಾವ್ಯ ಎನ್ನುವುದು ಮೊದಲು ಗಮನಕ್ಕೆ ಬರುವ ಸಂಗತಿ. ಪರಂಪರೆಯ ಸಾಹಿತ್ಯವನ್ನು ಗಮನಿಸುತ್ತಾ ಬಂದಾಗ 'ವೀರ' ಎಂಬ ಮೌಲ್ಯ ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡ ಬಗೆಯನ್ನು ಅರ್ಥೈಸಿಕೊಳ್ಳಬಹುದು. ಅಂತಹಾ ಪರಂಪರೆ ಈ ಕಾವ್ಯದಲ್ಲಿಯೂ ಮುಂದುವರಿದಿದೆ.

ಕೃತಿಯಲ್ಲಿ ಪೌರಾಣಿಕ ಛಾಯೆಯೂ ಕಾಣಿಸಿಕೊಂಡಿದೆ. ಅರ್ಜುನ ಕುಮಾರರಾಮನಾಗಿ, ಊರ್ವಶಿಯು ರತ್ನಾಜಿಯಾಗಿಯೂ ಜನ್ಮತಾಳಿದ ಪ್ರಸ್ತಾಪವಿದೆ. ಹೀಗೆ ರಾಷ್ಟ್ರೀಯ ವಿಸ್ತಾರವುಳ್ಳ ಎರಡು ಪಾತ್ರಗಳನ್ನು ನಾಡಿನ ನೆಲೆಯೊಳಗೆ ಗ್ರಹಿಸುವ ಮತ್ತು ಆ ಎರಡು ಪಾತ್ರಗಳನ್ನು ಕನ್ನಡಿಗರನ್ನಾಗಿ ಗುರುತಿಸಿಕೊಳ್ಳುವ ಕವಿಯ ನಾಡಪ್ರೇಮದ ಕುರುಹು ಮೆಚ್ಚುವಂತದ್ದು.

ಕೃತಿಯೊಳಗೆ ವಿಸ್ತಾರವಾದ ಕನ್ನಡ ನಾಡಿನ ವರ್ಣನೆಯಿದೆ. ಕನಕಾಚಲದ ದಕ್ಷಿಣಭಾಗಕ್ಕಿರುವ 'ಕರ್ನಾಟಕ'ವನ್ನು ಕವಿ ಗುರುತಿಸಿದ್ದಾನೆ. ಈ ವರ್ಣನೆಯನ್ನು ಗಮನಿಸುತ್ತಾ ಹೋದಂತೆ ಪರಂಪರೆಯ ಕೆಲವು ಕವಿಗಳು ಸ್ಮರಣೆಗೆ ಬರುತ್ತಾರೆ.

ಕಾವೇರಿಯಿಂದ ಗೋದಾವರಿವರೆಗಮಿ
ರ್ದಾ ವಸುಧಾತಳ ವಳಯ
ಭಾವಿಸೆ ಕರ್ನಾಟಕ ಜನಪದವದ
ನಾನೊಲಿದು ಬಣ್ಣಿಸುವನು (೨-೨೧)

ಮೇಲಿನ ವರ್ಣನೆಯಲ್ಲಿ ಮಾರ್ಗಕಾರನ ಛಾಯೆ ಕಾಣಿಸುತ್ತದೆ. ಮುಂದಿನ ಪದ್ಯಗಳಲ್ಲಿ ನಾಡಿನೊಳಗಡೆ ಅಂತರ್ಗತಗೊಳ್ಳುವ ಎಲ್ಲಾ ಸಂಗತಿಗಳ ಚಿತ್ರಣವಿದೆ. ಸಮುದ್ರ, ಹೂವು, ಹಣ್ಣು, ಗಿಡ-ಮರ, ಪ್ರಾಣಿ-ಪಕ್ಷಿಗಳು, ನದಿಗಳು ಎಲ್ಲವೂ ದಾಖಲಾಗಿವೆ. ಫಲತತಿಗಳು, ವನವೃಂದಗಳು ಕಣ್ಣಿಗೆ ಆನಂದವನ್ನುಂಟು ಮಾಡುವಂತಿವೆ. ನಾರಿಕೇಳ, ಆಮ್ರ, ಪನಸು, ಕದಳಿ, ಖರ್ಜೂರ, ಚಂದನ, ಚಂಪಕಗಳು ಪಾಂಥಜನರ ಕಣ್ಣುಗಳಿಗೆ ಪಾರಣೆಯಂತೆ ರಂಜಿಸಿವೆ.

ಪರನಾಡುಗಳೊಂದಿಗೆ ದ್ವೇಷವಿಲ್ಲದೆ ಸಮನ್ವಯವನ್ನು ಸಾಧಿಸುವ ಅನಿವಾರ್ಯತೆಯ ಬೋಧನೆ ಇಲ್ಲಿದೆ. ಇಂತಹ ನಾಡಿನ ಅಭಿಮಾನವನ್ನು ಪಾತ್ರಗಳ ಮೂಲಕ ಅನಾವರಣಗೊಳಿಸಿದ ನಂಜುಂಡಕವಿ ವಿಶೇಷ ಮನ್ನಣೆಗೆ ಪಾತ್ರನಾಗುತ್ತಾನೆ.

**ಜೈಮಿನಿ ಭಾರತ**

ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಲಕ್ಷ್ಮೀಶನದ್ದು ಪ್ರಮುಖ ಹೆಸರು. ಭಕ್ತಿ ಮತ್ತು ವೀರದ ಅಪೂರ್ವ ಸಂಗಮಕ್ಕೆ ಉತ್ತಮ ಉದಾಹರಣೆಯೆಂದರೆ 'ಜೈಮಿನಿಭಾರತ'. ಪಂಡಿತ ಪಾಮರರ ಪ್ರೀತಿ ಮತ್ತು ಗೌರವಕ್ಕೆ ಪಾತ್ರರಾಗಿರುವ ಕೃತಿಯಿದು. ಈ ಕೃತಿಯು ಕನ್ನಡಿಗರ ಸಂಸ್ಕೃತಿಯ ಅಳತೆಗೋಲಾಗಿ ಪರಿಣಮಿಸಿದೆ. ಲಕ್ಷ್ಮೀಶನ ಊರು ದೇವಪುರ. ಲಕ್ಷ್ಮೀರಮಣ ಇವನ ಇಷ್ಟದೈವ. 'ಜೈಮಿನಿ ಭಾರತ'ವು ಸಾಹಿತ್ಯ ಪ್ರಪಂಚದಲ್ಲಿ ಸಹೃದಯರು, ದೈವಭಕ್ತರು, ಸಾಹಿತ್ಯಾಭಿಲಾಷಿಗಳು, ಕವಿಗಳು, ಪಂಡಿತರು ಎಲ್ಲರನ್ನೂ ಆಕರ್ಷಿಸಿದ ಕಾವ್ಯ. ಕವಿ ಈ ಕಾವ್ಯದಲ್ಲಿ ಚಿತ್ರಿಸಿರುವ ಭಾವನೆಗಳನ್ನೆಲ್ಲಾ ೧೬ನೇ ಶತಮಾನದ ಸುಭಿಕ್ಷವಾದ ಕರ್ನಾಟಕದ ಜನರ ಭಾವನೆಗಳೇ ಆಗಿವೆಯೆನ್ನಬಹುದು. ವಾರ್ಧಕ ಷಟ್ಪದಿಯ ಗಂಭೀರವಾದ ನಡಿಗೆಯಲ್ಲಿ ದಿವ್ಯವಾದ ಆಕರ್ಷಣೆಯಿದ್ದು, ಈ ಷಟ್ಪದಿಯ ಚೈತನ್ಯವನ್ನು ಸಂಪೂರ್ಣವಾಗಿ

ಅರಿತು ಬಳಸಿದವನು ಲಕ್ಷ್ಮೀಶ. ಶಬ್ದಾಲಂಕಾರದ ಮೂಲಕ ಓದುಗರನ್ನು ಆತ್ಮವಶ ಮಾಡಿಕೊಳ್ಳುವ ಇಂದ್ರಜಾಲಿಕ ಶಕ್ತಿ ಲಕ್ಷ್ಮೀಶನಿಗೆ ಸಿದ್ಧಿಸಿದೆ.

ಲಕ್ಷ್ಮೀಶ ಕವಿಯ ಕನ್ನಡದ ಅಭಿಮಾನವನ್ನು ಈ ಕೃತಿಯ ಓದಿನ ಮೂಲಕ ಅರ್ಥೈಸಿಕೊಳ್ಳಬಹುದು. ಅಶ್ವಮೇಧದ ಕುದುರೆಯ ಓಡಾಟ ಅಧಿಕವಾಗಿ ಕರ್ನಾಟಕ ದೇಶದಲ್ಲಿ ಮಣಿಪುರ, ರತ್ನಪುರ, ಕುಂತಳನಗರ ಇತ್ಯಾದಿ. ಈ ನಗರಗಳನ್ನು ಮೈಸೂರು ಜಿಲ್ಲೆ, ಶಿವಮೊಗ್ಗ ಜಿಲ್ಲೆಯ ಪ್ರದೇಶಗಳೆಂದು ಊಹಿಸಲಾಗಿದೆ.

ಭೀಮನು ಭದ್ರಾವತಿಯ ಬಳಿಗೆ ಬಂದು ಆ ದೇಶದ ಸಮೀಪದಲ್ಲಿನ ಬೆಟ್ಟದ ಮೇಲೆ ನಿಂತುಕೊಂಡು ವೃಷಕೇತುವಿಗೆ ಆ ನಗರದ ಸಾಲುಗಳನ್ನು ವರ್ಣಿಸುತ್ತಾನೆ.

ಎಲ್ಲಿಯುಂ ಪೆರ್ದೊರೆಯಿಂದೆ ಕೆರೆಯಿಂದೆ
ಯೆಲ್ಲಿಯುಂ ಕುಸುಮದಾಗರದಿಂದ ಸರದಿಂದೆ
ಯೆಲ್ಲಿಯುಂ ರತ್ನಮಯದಿಳೆಯಿಂದೆ ಬೆಳೆಯಿಂದೆ ಮಣಿಕೃತಕ ಶೈಲದಿಂದೆ
ಎಲ್ಲಿಯುಂ ಸುಳಿವ ಗೋ ವಜ್ರದಿಂದ ಗಜದಿಂದ
ಯೆಲ್ಲಿಯುಂ ವಿರಚಿತ ಭವನದಿಂದೆ ಜನದಿಂದೆಯಾನಾಡಸಿರಿ ಮೆರೆದಿದು (೩-೨)

ನಾಡಿನ ಸಿರಿಗೆ ಕಾರಣವಾಗುವ ಎಲ್ಲ ಸಂಗತಿಗಳನ್ನು ಕವಿ ಇಲ್ಲಿ ಗುರುತಿಸಿದ್ದಾನೆ. ಮಾತ್ರವಲ್ಲ ಆ ನಾಡಿನಲ್ಲಿ ಎತ್ತನೋಡಿದರೂ 'ಉರ್ವರೆಯ ಶಾಲಿಗಳ ಪಾಳ್ದೆನೆಗೆ ನಭದಿಂಮುಸುರ್ವ ಗಿಳಿವಿಂಡುಗಳು, ಕೋರ್ವಿ ನಳನಳಿಸಿ ನೀಳ್ದುರೆ ಬೆಳೆದ ರಸದಾಳಿಗರ್ವುಗಳು, ಕೊಳಗಳಲ್ಲಾಡುವ ಅಂಚೆವಿಂಡು, ಎಸೆವ ತಳಿಗೊಳಗಳು, ಮುತ್ತಿ ಮೆರೆವ ದುಂಬಿಗಳ ತಿಂತಿಣಿ, ಇವೆಲ್ಲಾ ಪಥಿಕರಿಗೆ ಕೌತುಕವನ್ನುಂಟು ಮಾಡುವ ಸಂಗತಿಗಳು. ಬಕುಳ, ಮಂದಾರ, ಪಾದರಿ, ಸುರಗಿ, ಸೇವಂತಿಗೆ, ಚಂಪಕ, ಕರವೀರ, ಕುಂದ, ಮಾಲತಿ, ಮಲ್ಲಿಕಾದಿ ಹೂಗಳು' ಕಾವ್ಯದಲ್ಲಿ ಇಣುಕು ಹಾಕುತ್ತವೆ.

'ಮುಡಿವಾಳ ಲಾಮಂಚಗಳ ಬೇರ್ಗಳಿಡಿದ ಅಗರು ಚಂದನಂಗಳ ಕೊಂಬಿನಿಂ ಕೊಂಬು ತೊಡರಿದಚ್ಚೆಸಲು ಮಲ್ಲಿಗೆ ಜಾಜಿಗಳ ಪೂಗಳಿಂ ಪೂಗೊಳೊಂದು ಗೂಡಿ....... ತಂಬೆಳರ್ಗೆ ಪರಿಮಳವನೀಯದ ಕುಜಂ ನಂದನದೊಳೊಂದಿಲ್ಲೆನೆ'. (೩-೩೬) ಮೇಲೆ ಗುರುತಿಸಲಾದ ಬೇರು ಹೂಗಳೆಲ್ಲಾ ಕನ್ನಡಿಗರಿಗೆ ಚಿರಪರಿಚಿತ. ಲಕ್ಷ್ಮೀಶನ ಕಾವ್ಯ ಪ್ರತಿಜ್ಞೆ ಅನನ್ಯವಾದುದು. ಕವಿಯ ಮಾತುಗಳಲ್ಲಿಯೇ ಅದನ್ನು ಹೇಳುವುದಾದರೆ, 'ವರವರ್ಣದಿಂದೆ ಶೋಭಿತಮಾಗಿ ರೂಪವಿಸ್ತರದಿಂದ ಚೆಲ್ವಾಗಿ ಮಧುರತರ ನವರಸೋದರಭರಿತದಿಂದ ವಿಲಸಿತಮಾಗಿ

ಸುಮನೋನುರಾಗದಿ ಪ್ರಚುರವಾಗಿ ನಿರುತ ಮಂಜುಳ ಶಬ್ಧದಿಂದ ಕಿವಿಗಿಂಪಾಗಿ ಚರಿಸುವ ಸುಲಲಿತ ಷಟ್ಪದಿಗಳೆಡೆಬಿಡದೆ ಝೇಂಕರಿಸದಿರ್ಪುದೆ ವಿದ್ವತ್ಸಭಾ ನೀರೇರುಹಾಕರದೊಳು'. (೧-೧೨)

ಈ ಗ್ರಂಥ ಪ್ರತಿಜ್ಞೆ ಸಮರ್ಥವಾಗಿ ನೆರವೇರಿದುದನ್ನು ಕಾವ್ಯದ ಓದಿನಿಂದ ತಿಳಿದುಕೊಳ್ಳಬಹುದಾಗಿದೆ. 'ನಾಡು' ಎಂಬ ಪರಿಕಲ್ಪನೆಯೊಳಗೆ ಸೇರ್ಪಡೆಗೊಳಿಸಿಕೊಳ್ಳಬಹುದಾದ ಅನೇಕ ಸಂಗತಿಗಳ ಬಗ್ಗೆ ಈಗಾಗಲೇ ಚರ್ಚಿಸಲಾಗಿದೆ. ಅವುಗಳಲ್ಲಿ ರಾಜತ್ವ ನಿರ್ಮಾಣ ಮಾಡಿರುವ ಜನಜೀವನದ ಚಿತ್ರಣವೂ ಸೇರುತ್ತದೆ. ಯುಧಿಷ್ಠಿರ ಆಳುತ್ತಿದ್ದ ರಾಜ್ಯ ಎಷ್ಟು ಪರಿಶುದ್ಧವಾಗಿತ್ತೆಂದರೆ. 'ಯುಧಿಷ್ಠಿರನಾಳ್ವ ದೇಶದೊಳ್ ಕಳವು ಕೊಲೆ ಪಾದರಂ ಪುಸಿ ನುಸುಳು ವೈರವಟ್ಟುಳಿ ತೋಹು ಬೆದರು ಬೆಜ್ಜರ ಕಷ್ಟನಿಷ್ಠುರಂ ಗಜರು ಗಾವಳಿ ವಿವಾದ, ಮುಳಿಸು ಪೊಲೆಗಲಸು ಮೊರೆ ಸೆರೆ ಕೃತಕ ಕಾರ್ಪಣ್ಯ ಮುಳಿವು ಪಳಿವ ಅನ್ಯಾಯ ಮೋಸವಾಸಿಗಳು ಇಲ್ಲದ' ಜಗತ್ತಿಗೇ ಮಾದರಿಯಾದ ನಾಡೊಂದನ್ನು ಲಕ್ಷ್ಮೀಶ ಕವಿಯು 'ಜೈಮಿನಿ ಭಾರತ'ದ ಮೂಲಕ ಪ್ರತಿನಿಧಿಸಿದ್ದಾನೆ.

ನುಡಿಯ ಬಗೆಗೆ ಕವಿಯ ಅಭಿಪ್ರಾಯವನ್ನು ಚರ್ಚಿಸುವುದಾದರೆ, ಲಕ್ಷ್ಮೀಶನು ಕನ್ನಡ ಸಂಸ್ಕೃತಗಳೆರೆಡರಲ್ಲೂ ಕೋವಿದನಾಗಿದ್ದನು. ಕನ್ನಡ ಭಾಷೆಯ ಬೆಡಗು -ಬಿನ್ನಾಣಗಳನ್ನು ಸಂಸ್ಕೃತದ ಗಾಂಭೀರ್ಯ- ಮಾಧುರ್ಯಗಳನ್ನೂ ಚೆನ್ನಾಗಿ ಬಲ್ಲವನಾಗಿದ್ದನು. ಕಾವ್ಯರಚನೆಗೆ ಭಾಷೆಯ ಆಯ್ಕೆಯ ಪ್ರಕ್ರಿಯೆಯಲ್ಲಿ ಲಕ್ಷ್ಮೀಶನ ಆಯ್ಕೆ ಭಾಷಿಕ ಪ್ರೇಮಕ್ಕೆ ಅನನ್ಯ ನಿರ್ದೇಶನ. ಇವನ ಭಾಷಾ ಪಾಂಡಿತ್ಯಕ್ಕೆ ಈ ಕೆಳಗಿನ ಸಾಲುಗಳು ಸಾಕ್ಷಿ.

> ಕೊಡೆಯೆಂಬರಾತಪತ್ರವನುದರ ದೇಶವಂ
> ಪೊಡೆಯೆಂಬರೊಲಿದು ಮಂಥನವನೆಸಗೆಂಬುದಂ
> ಕಡೆಯೆಂಬರಾಡಿಯ ನಳಿಯೆಂಬರುದಕ ಪ್ರವಾಹಮಂ ತೊರೆಯೆಂಬರು
> ಮಡಿಯೆಂಬರೆಡೆವಿಡಿದೆ ಮುಸುಕಿರ್ದ ಮೇಘವಂ
> ಜಡಿಯೆಂಬರುಶಿಲೆಯ ನರೆ ಎಂಬರಲ್ಲದಿವನುಡಿಯರವನಾಳ್ವಿಯೊಳ್ (೨-೯)

ಈ ಸಾಲುಗಳಲ್ಲಿ ಕಾಣಿಸಿಕೊಳ್ಳುವ 'ಕೊಡೆ'. 'ಪೊಡೆ', 'ಕಡೆ', 'ಅಳಿ', 'ತೊರೆ', 'ಮಡಿ', 'ಮುಡಿ', 'ಜಡಿ' ಮೊದಲಾದ ಕನ್ನಡ ಪದಗಳನ್ನು ಎರಡರ್ಥ ಬರುವಂತೆ ಕವಿ ಬಳಸಿದ್ದಾನೆ. ಈ ಶಬ್ದಗಳಿಗೆ ಯಾವುದೇ ಅರ್ಥಗಳಿದ್ದರೂ ಆ ರಾಜ್ಯದ ನಾಗರಿಕರು

ಇವುಗಳನ್ನು ಒಳ್ಳೆಯ ಅರ್ಥದಲ್ಲಿಯೇ ಬಳಸಿದ್ದಾರೆಂಬುದನ್ನು ಕವಿ ಹೇಳಿದ್ದಾನೆ. ಇದರಿಂದ ಲಕ್ಷ್ಮೀಶನು ಕನ್ನಡ ಪ್ರಿಯನೆಂಬುದೂ, ನಾಡಿನ ಜನರು ಸುಸಂಸ್ಕೃತರೆಂಬುದೂ ವೇದ್ಯವಾಗುತ್ತದೆ.

ಈತ ಸರಳವಾಗಿ ಬರೆಯುವಾಗ ಅಚ್ಚಗನ್ನಡವನ್ನು ಪೆಡಸಾಗಿ ಬರೆಯುವಾಗ ಸಂಸ್ಕೃತವನ್ನು ಬಳಸುತ್ತಾನೆಂಬ ಅಭಿಪ್ರಾಯವಿದೆ. ಚಂದ್ರಹಾಸ ಪ್ರಸಂಗದ ವಸಂತ ಕಾಲೋದಯ ಸಂದರ್ಭದ ವರ್ಣನೆಯನ್ನು ಉದಾಹರಿಸಬಹುದು. ಚಂಪಕ ಮಾಲಿನಿ ಮತ್ತು ವಿಷಯೆ ಜಲಕ್ರೀಡೆಗೆ ಬರುವ ಸನ್ನಿವೇಶ ಅವರನ್ನು ವರ್ಣಿಸುತ್ತಾ ಕವಿ 'ಬಿಚ್ಚೇರಗಣ್ಣ', 'ಒಪ್ಪಿಡಿನಡುವಿನ', 'ಒಮ್ಮಾರು ವೇಣಿಯ', 'ಒಚ್ಚತದ ಚೆಲ್ವಿನ' ಮುಂತಾದ ಅಚ್ಚಗನ್ನಡ ಪದಗಳನ್ನು ಬಳಸುತ್ತಾನೆ. ಇದರಿಂದ ಮುಂದೆ 'ಕಲಕೀರ ವಾಣಿಯರ್', 'ಕಾಳಾಹಿವೇಣಿಯರ್' ಮೊದಲಾದ ಸಂಸ್ಕೃತ ಪದಗಳ ಬಳಕೆಯಿದೆ. ಕವಿ ಎರಡೂ ಭಾಷೆಗಳಲ್ಲಿಯೂ ಪಾಂಡಿತ್ಯವಿದ್ದಂತಹ ಸಮರ್ಥ ಎಂಬುದಕ್ಕೆ ಇದು ಸಾಕ್ಷಿ. ಹಾಗಾಗಿ ಕವಿಯ ಅಭಿವ್ಯಕ್ತಿ ದೇಸಿ ಮತ್ತು ಮಾರ್ಗಗಳ ಸಮನ್ವಯವಾಗಿದೆಯೆಂಬುದು ಒಪ್ಪತಕ್ಕ ಮಾತು.

ಪ್ರಕೃತಿ ವರ್ಣನೆ, ಶೃಂಗಾರದ ವರ್ಣನೆಯಲ್ಲಿ ಲಕ್ಷ್ಮೀಶನದು ವಿಶಿಷ್ಟ ಪ್ರತಿಭೆ, ವಸಂತದ ವರ್ಣನೆ ಮಾಗಿಯ ವರ್ಣನೆಗಳು ಇದಕ್ಕೆ ಸಾಕ್ಷಿ. 'ಮೂಲೋಕಂ ಮಾಗಿ ನಡುಗಿಸಿತು, ಮೇಣುಡುಗಿಸಿತು' ಎನ್ನುತ್ತಾ ಚಳಿಯ ಪ್ರಭಾವ ಮತ್ತು ವ್ಯಾಪ್ತಿಯನ್ನು ಸರಳವಾದ ಮಾತುಗಳ ಮೂಲಕ ಶಕ್ತವಾಗಿ ಚಿತ್ರಿಸಿದ್ದಾನೆ.

ಉದಾರ ಮನಸ್ಸು, ಆತ್ಮೀಯ ಗುಣ ಕನ್ನಡಿಗರಲ್ಲಿ ಎದ್ದು ಕಾಣುವ ಅಂಶ. ಆಡು ಮಾತಿನಲ್ಲಿ ಬಳಸುವ ಆತ್ಮೀಯತೆ ಸಂಕೇತಗಳಾದ 'ಕಣ್', 'ಅಲಾ' ಮೊದಲಾದ ಪದಗಳು 'ಜೈಮಿನಿ ಭಾರತದಲ್ಲು ಬಳಕೆಯಾಗಿವೆ. 'ನೀನರಿಯಲಾ ತನ್ನ ಬಂಧನವಿಮೂತನುದಯಿಸಲ್ ಪರಿದುದೀತನೆ ಜಗದ್ಗುರು ಕಣೌ'. ಇಂತಹ ವಾಕ್ಯಗಳು ಕಾವ್ಯದಲ್ಲಿದ್ದು, ಆತ್ಮೀಯವಾಗಿ ಸಂಭಾಷಣೆಗೈಯುತ್ತವೆ. ಅಕ್ಷರಗಳ ಪುನರಾವರ್ತನೆಯಿಂದ ಒಂದು ವಿಶಿಷ್ಟವಾದ ಭಾಷಾ ಶೈಲಿಗೆ ಕವಿಗೆ ಸಿದ್ಧಿಸಿದೆಯೆಂದರೆ ಉತ್ಪ್ರೇಕ್ಷೆಯೆನಿಸದು. ಉದಾಹರಣೆಗೆ 'ಮಿಸುಪ ಮಕುಟುದ ನೊಸಲ ತಿಲಕದಿಂದಲಕದಿಂದೆಸೆಳುಗಂಗಳ ತೊಳಪ ಕದಪಿನಿಂ ಪದಪಿನಿಂ ಪಸರಿಸುವ ನಸುನಗೆಯ ವದನದಿರದನದಿಂ' ಮುಂತಾದ ಸಾಲುಗಳು ಓದುಗನನ್ನು ತಲೆದೂಗುವಂತೆ ಮಾಡುತ್ತದೆ. ನಾದಮಯತೆ, ಸನ್ನಿವೇಶ ರಚನೆ, ಪಾತ್ರ ನಿರ್ಮಾಣ, ಅಭಿವ್ಯಕ್ತಿಯ ಕ್ರಮ, ಭಾಷೆಯ ಬಳಕೆ ಮೊದಲಾದವುಗಳಿಂದ ಲಕ್ಷ್ಮೀಶನ 'ಜೈಮಿನಿ ಭಾರತ' ಒಂದು ಅಪೂರ್ವ ಕಲಾಕೃತಿ ಎನಿಸುತ್ತದೆ.

ಹರಿಯುವ ನದಿಗಳು ನಾಡಿನ ಭಾಗಗಳೇ ಆಗಿವೆ. ಮಾರ್ಗಕಾರ ಗುರುತಿಸಿದ ಕನ್ನಡ ನಾಡಿನ ಭೌಗೋಳಿಕ ನಕ್ಷೆಯಲ್ಲಿ ಮೊದಲ ಬಿಂದು ಕಾವೇರಿ ನದಿ. ಈ ನದಿಯನ್ನು ಬಹಳ ಸುಂದರವಾಗಿ ವರ್ಣಿಸಿದ ಹಿರಿಮೆ ಕವಿ ಗೋವಿಂದ ವೈದ್ಯನದು. ಈತನ ಕಾಲ ಕ್ರಿ.ಶ.ಸು. ೧೭ ನೇ ಶತಮಾನ. ಕೃತಿಯ ಹೆಸರು 'ಕಂಠೀರವ ನರಸರಾಜ ವಿಜಯ'. ಮೈಸೂರು ರಾಜನಾದ ಕಂಠೀರವ ನರಸರಾಜನ ದಿಗ್ವಿಜಯವು ಈ ಕೃತಿಯಲ್ಲಿ ವರ್ಣಿತವಾಗಿದೆ. ದಲವಾಯಿ ನಂಜರಾಜೇಂದ್ರನು ತನ್ನ ಒಡೆಯನ ಶೌರ್ಯದ ಏಳಿಗೆಯ ಚರಿತೆಯಾಗಿ ರಚಿಸು ಎಂದು ಹೇಳಲು ಅವನ ಇಷ್ಟದಂತೆ ಈ ಕೃತಿಯನ್ನು ರಚಿಸಿದ ಸಂಗತಿಯನ್ನು ಕವಿ ಹೇಳಿಕೊಳ್ಳುತ್ತಾನೆ. ಶ್ರೀರಂಗ ಪಟ್ಟಣದ ಅಂದಿನ ವೈಭವದ ಚಿತ್ರಣ ಇಲ್ಲಿ ದಾಖಲಾಗಿದೆ. ಕಾವ್ಯ ವಾಚನವು ರಾಜರ ಮನ್ನಣೆಗೆ ಪಾತ್ರವಾದ ಕಲೆ ಎನಿಸಿಕೊಂಡಿತು. ಹಾಗೆಯೇ ಈ ಕಾವ್ಯವೂ ವಾಚನಕ್ಕೆ ಒಳಗಾಗಿತ್ತು ಎಂಬ ಅಂಶ ಕೃತಿಯಿಂದ ತಿಳಿದು ಬರುತ್ತದೆ. ಸಾಂಗತ್ಯ ಇದರ ಛಂದಸ್ಸು. ಉರ್ದು ಭಾಷೆಯ ಪ್ರಭಾವ ಗೋವಿಂದ ವೈದ್ಯನ ಮೇಲಾಗಿರುವುದನ್ನು ಗಮನಿಸಬಹುದು.

ಕವಿಯು ಮಾಡಿರುವ ಕಾವೇರಿಯ ವರ್ಣನೆ ಸರಳವಾಗಿದ್ದು, ಸಹಜವಾಗಿ ಮೂಡಿ ಬಂದಿದೆ. 'ಆ ಕರ್ಣಾಟ ದೇಶದಲಿ ಪ್ರವಹಿಸಿ ಲೋಕ ಪಾವನೆಯೆಂದೆನಿಸಿ ಸೋಕಿದವರ ದುರಿತವ ಪರಿಹರಿಸುತ ಶ್ರೀ ಕಾವೇರಿಯೊಪ್ಪಿಹಳು'. ನಮ್ಮ ದೇಶಕ್ಕೂ ಗಂಗಾ ನದಿಗೂ ಭಾವನಾತ್ಮಕ ಸಂಬಂಧ. ಮೈಸೂರಿಗೂ ಕಾವೇರಿಗೂ ಅಷ್ಟೇ ಭಾವನಾತ್ಮಕ ಸಂಬಂಧವಿದೆ. ಹಾಗಾಗಿ ಈಕೆ ಸೋಕಿದವರ ದುರಿತವನ್ನು ಪರಿಹರಿಸುವವಳೆಂಬ ಗ್ರಹಿಕೆ ಇಲ್ಲಿದೆ. ಅವಳ ಬಿಂದು ಮಾತ್ರ ಮೇಲೆ ಬಿದ್ದರೂ ಪಾಪ ಪರಿಹಾರ ಮಾತ್ರವಲ್ಲ, ಆಕೆ ಭಕ್ತರ ಬಂಧು. ಆ ಭಕ್ತರಿಗೆ ಮುಕ್ತಿ ನೀಡುವ ವರ್ಚಸ್ಸು ಈಕೆಗಿದೆಯೆಂಬ ಅನಿಸಿಕೆ ಕವಿಯದು. ಕಾವೇರಿಯ ತಟದ ಪುಣ್ಯಾವಂತಿಕೆಯನ್ನು ವರ್ಣಿಸಲು ಬ್ರಹ್ಮನಿಗೂ ಕಷ್ಟ ಸಾಧ್ಯ. ಆ ಪಟ್ಟಣದ ದಕ್ಷಿಣ ಭಾಗದಲ್ಲಿ ಸ್ವರ್ಗ ಸದೃಶ್ಯವಾದ ಮೈಸೂರು ಶೋಭಾಯಮಾನವಾಗಿದೆ.

ಇವನ ಕೃತಿಯಲ್ಲಿ ಮೈಸೂರು ಒಡೆಯರಲ್ಲಿ ಪ್ರಸಿದ್ಧರಾದ ರಣಧೀರ ಕಂಠೀರವ ನರಸರಾಜರ ಕಥಾವಸ್ತುವಿದ್ದು ಆ ಕಾಲದ ಕರ್ನಾಟಕ ಚರಿತ್ರೆಗೆ ಇದು ಮುಖ್ಯ ದಾಖಲೆಯೆನಿಸುತ್ತದೆ. ಮಾತ್ರವಲ್ಲ, ಅಂದಿನ ಕಾಲದ ಕನ್ನಡ ನಾಡಿನ ಜನ ಜೀವನದ ಸಂಗತಿಗಳು ಇಲ್ಲಿ ಕಾಣ ಸಿಗುತ್ತವೆ. 'ಹದಿನೇಳನೇ ಶತಮಾನದ ರಾಜವೈಭವ, ರಾಜಕುಲ –

ರಾಜಾಂತಃಪುರ ಜೀವನ, ಅರಮನೆಯ ವ್ಯವಸ್ಥೆ, ಮಹಾನವಮಿಯ ಒಡ್ಡೋಲಗದ ಉತ್ಸವ, ಜಂಬೂಸವಾರಿ ಇವೇ ಮೊದಲಾದವುಗಳ ಚಿತ್ರ ಜೀವ ಕಳೆಯಿಂದ ಕೂಡಿ ಕಂಗಳಿಗೆ ಸೌಂದರ್ಯಾನುಭವ ಸುಖವನ್ನೂ, ಹೃದಯಕ್ಕೆ ಆನಂದಾನುಭವ ಶಾಂತಿಯನ್ನು ನೀಡುತ್ತವೆ'. (ರಾಗೌ:೨೦೦೨ ಪು,೪೫೯) ಎಂಬ ಮಾತು ಗಮನಾರ್ಹವಾದುದು ಮತ್ತು ಕೃತಿಯ ಉನ್ನತಿಕೆಯನ್ನು ಪರಿಚಯಿಸುವಂತದ್ದು, ಪ್ರಸ್ತುತ ಕಾವ್ಯದಲ್ಲಿ ಮೂರು ಸಂಧಿಗಳಲ್ಲಿ ದಸರಾ ಹಬ್ಬದ ವಿಶಿಷ್ಟ ವರ್ಣನೆಯಿದೆ.

ಈ ಕವಿ ಕಂಠೀರವ ನರಸರಾಜನ ಆಸ್ಥಾನದಲ್ಲಿದ್ದವನು. ಹೀಗಾಗಿ ದೊರೆ ಮತ್ತು ಅರಮನೆಗೆ ಸಂಬಂಧಿಸಿದ ವಿಚಾರಗಳನ್ನು ಈತ ಕಣ್ಣಾರೆ ಕಂಡಿರಬೇಕು. ಪ್ರಸ್ತುತ ಅದ್ದೂರಿಯಾಗಿ ನಡೆಯುವ ದಸರಾ ಹಬ್ಬವು ಆ ಕಾಲದಿಂದಲೂ ಇತ್ತೆಂಬುದಕ್ಕೆ ಈ ಕೃತಿ ಸಾಕ್ಷಿಯಾಗುತ್ತದೆ. ಬೇರೆ ಬೇರೆ ಪ್ರದೇಶದ ರಾಜರೆಲ್ಲ ಒಟ್ಟು ಸೇರುವ ಸಂಭ್ರಮ, ಶ್ರೀರಂಗ ಪಟ್ಟಣದಲ್ಲಿ ವಾಸ್ತವ್ಯ ಹೂಡುವ ವಿಚಾರ ಇವನ್ನೆಲ್ಲಾ ಗುರುತಿಸಿಕೊಡುವಂತಹ ಈ ಕೃತಿಯನ್ನು ಒಂದು ಸಾಂಸ್ಕೃತಿಕ ಪಠ್ಯವಾಗಿಯೂ ಅಧ್ಯಯನ ನಡೆಸಬಹುದಾಗಿದೆ.

**ಸರ್ವಜ್ಞನ ನಾಡು–ನುಡಿಯ ಸ್ವರೂಪ**

ಜನತೆಯ ಕವಿಯೆಂದು ಖ್ಯಾತನಾದವನು ಸರ್ವಜ್ಞ. ವಚನಗಾರರಂತೆಯೇ ಲೋಕಕಲ್ಯಾಣದಲ್ಲಿ ಆತ್ಮಕಲ್ಯಾಣವಿದೆಯೆಂದು ಭಾವಿಸಿಕೊಂಡು, ಸಮಾಜದ ಲೋಪದೋಷಗಳನ್ನು ಬೊಟ್ಟುಮಾಡಿ ತೋರಿಸುತ್ತಾ, ಸಾರ್ಥಕವಾದ ಜೀವನ ದರ್ಶನವನ್ನು ಪರಿಚಯಿಸುವ ಶ್ರದ್ಧೆಯ ಕೆಲಸವನ್ನು ಈತ ಮಾಡಿದ್ದಾನೆ. ನಾಡಿನ ಉದ್ದಗಲಕ್ಕೂ ಸಂಚರಿಸಿ ಕಂಡದ್ದನ್ನು ಹೇಳಿದ ನಿಷ್ಠುರವಾದಿಯೀತ. ಸಂಶೋಧಕರ ಪ್ರಕಾರ ಧಾರವಾಡದ ಹಿರೇಕೆರೂರಿನ ಸಮೀಪದ ಅಬ್ಬಲೂರು ಇವನ ಜನ್ಮಸ್ಥಳ. ಕಾಲ ಕ್ರಿ.ಶ. ಸು. ೧೬ನೇ ಶತಮಾನ ಈತನ ತ್ರಿಪದಿಗಳಲ್ಲಿ ನಾಡು–ನುಡಿಯ ಪ್ರತ್ಯಕ್ಷ ಘೋಷಣೆಯಿಲ್ಲ. ಆದರೆ ಮಲೆನಾಡು, ಬೆಳುವಲದ ಕುರಿತಾಗಿ ಕೆಲವು ಸಂಗತಿಗಳನ್ನು ಈತ ಹೇಳಿದ್ದಾನೆ.

ಸರ್ವಜ್ಞನ ತ್ರಿಪದಿಗಳು ನೇರವಾಗಿ ಜನಮನವನ್ನು ಮುಟ್ಟಿ, ತಟ್ಟಿ ಎಬ್ಬಿಸುವ ಸಾಮರ್ಥ್ಯವನ್ನು ಹೊಂದಿವೆ. ಜೀವನದ ಆನಂದವನ್ನು ಕಂಡುಕೊಳ್ಳಲು ಸಹಾಯಕವಾಗುವ ಅನುಭಾವದ ವಾಣಿಗಳಾಗಿ ಮೂಡಿ ಬಂದ ಸಾಲುಗಳು ಇಂದಿಗೂ ಜನಜೀವನದಲ್ಲಿ ಹಾಸುಹೊಕ್ಕಾಗಿವೆ.

ಮಂಡೆಬೋಳಿಸಿಕೊಂಡು/ತುಂಡುಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವರ
ಕಂಡು ನಂಬುವುದು ಸರ್ವಜ್ಞ

ಸರ್ವಜ್ಞನ ಈ ತ್ರಿಪದಿ ಅವನ ಬಾಹ್ಯ ಸ್ವರೂಪವನ್ನು ಗುರುತಿಸಿಕೊಡುತ್ತದೆ. ಹಿಂಡನ್ನು ಅಗಲಿದ ಆನೆ ನಡೆದದ್ದೇ ದಾರಿಯಾಗಿ ನುಡಿದದ್ದೇ ಮುಕ್ತಕವಾಯಿತು. ಈತ ಒಂದೇಕಡೆ ನೆಲೆನಿಂತವನಲ್ಲ. ಪರ್ಯಟನೆಯೇ ಇವನ ಬದುಕಿನ ಮೂಲ ಮಂತ್ರ. ಹಾಗಾಗಿಯೇ ಈತ ವಿಶ್ವವ್ಯಕ್ತಿಯಾಗಿ ಬೆಳೆಯುವುದಕ್ಕೆ ಸಾಧ್ಯವಾಯಿತು.

ಸಮಾಜವನ್ನು ಬಹಳ ಸೂಕ್ಷ್ಮವಾಗಿ ಗಮನಿಸಿದ ಸರ್ವಜ್ಞ ಧರ್ಮದ ಹೆಸರಿನಲ್ಲಿ ಹುಟ್ಟು ಹಾಕಿರುವ ಜಾತಿ ಮತಗಳ ವಿಷಮತೆಯನ್ನು ನೇರವಾಗಿ ಖಂಡಿಸುತ್ತಾನೆ.

ನಡೆವುದೊಂದೇ ಭೂಮಿ । ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು । ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ

ಕವಿಯ ಈ ಪ್ರಶ್ನೆ ಸಾರ್ವಕಾಲಿಕವಾದುದು. ತಾರತಮ್ಯದ ಸಮಾಜದ ನಿರ್ಮೂಲನೆ ಎಲ್ಲರ ಆಶಯವಾಗಿತ್ತು. ದಾನಗುಣ ನಮ್ಮ ನಾಡಿನ ಪರಮ ಮೌಲ್ಯವಾಗಿತ್ತು. 'ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು' ಇದು ಪ್ರತಿಯೊಬ್ಬನಲ್ಲಿ ಇರಬೇಕಾದ ಮುಖ್ಯಗುಣ. ಸರ್ವಜ್ಞನ ಪ್ರಕಾರ ಬೇಡುವುದು ಒಳ್ಳೆಯದಲ್ಲ. ಬೇಡುವವರ ನಾಡು ಸೋಮಾರಿಗಳ ಬೀಡೆಂಬುದು ಸತ್ಯ. ಆದರೆ ಅನಿವಾರ್ಯ ಪರಿಸ್ಥಿತಿಯಲ್ಲಿ ನೀಡದಿರುವುದು ಅಪರಾಧ. ದಾನದ ಹಿರಿಮೆ ಇರುವುದು ಕೊಡುವ ವಸ್ತುವಿನಲ್ಲಿಲ್ಲ. ಅದರ ಹಿಂದಿನ ಸದುದ್ದೇಶದಲ್ಲಿ ಎಂಬ ಸೂಕ್ಷ್ಮ ಸಂಗತಿಯನ್ನು ಗುರುತಿಸುವುದರೊಂದಿಗೆ ಶ್ರಮಸಂಸ್ಕೃತಿ ಮಾನವನ ಜಡತ್ವವನ್ನು ಹೋಗಲಾಡಿಸುತ್ತದೆ ಎಂಬ ಆಲೋಚನೆಯನ್ನು ಈತ ವ್ಯಕ್ತಪಡಿಸಿದ್ದಾನೆ.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆಮೇಲು
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ
ದಾಟವೇ ಕೆಡಗು ಸರ್ವಜ್ಞ

ಮೇಟಿ ವಿದ್ಯೆಯನ್ನು ಮರೆತದ್ದರಿಂದ ನಾಡಿನ ಉನ್ನತಿಗೆ ಮಾರಕವಾಗಿದೆ. ಈ ವಚನಗಳೆಲ್ಲ ಸಾರ್ವಕಾಲಿಕತೆಯನ್ನು ಪಡೆದುಕೊಂಡು ಕವಿ ಇಂದಿಗೂ ಜನಮಾನಸದಲ್ಲಿ ಶಾಶ್ವತವಾಗಿ ನೆಲೆ ನಿಂತಿದ್ದಾನೆ.

ಪರಿಸರ, ಆರೋಗ್ಯ, ಆಹಾರ ಇವೆಲ್ಲವುಗಳ ಬಗೆಗೆ ಸರ್ವಜ್ಞನ ಕಾಳಜಿ ಮೆಚ್ಚುವಂತದ್ದು.

ಮದ್ಯಪಾನವ ಮಾಡಿ ಇದ್ದುದೆಲ್ಲವ ನೀಡಿ
ಬಿದ್ದು ಬರುವವನ ಸದ್ದಡಗಿ ಸಂತಾನ
ವೆದ್ದು ಹೋಗುವುದು ಸರ್ವಜ್ಞ

ದುಶ್ಚಟಗಳಿಗೆ ಬಲಿಯಾಗಿ, ಬೀದಿಯಲ್ಲಿ ಬಿದ್ದು, ಸಂಸಾರದಿಂದ ದೂರಾಗಿ ತನ್ನ ಉದ್ಧಾರವೂ ಆಗದೆ ತೊಳಲಾಡುವ ಮಂದಿ ಪ್ರಸ್ತುತ ಸಮಾಜದಲ್ಲಿ ಅಧಿಕವಾಗಿದ್ದಾರೆ. ಬಹುಶಃ ಕವಿಯ ಕಾಲದಲ್ಲಿಯೂ ಇಂತಹ ಪರಿಸರವಿದ್ದು, ಬದುಕು ನಾಶವಾದುದನ್ನು ಸರ್ವಜ್ಞ ಕಂಡಿರಬೇಕು. ಅದು ಮತ್ತೆ ಘಟಿಸದಿರಲೆಂಬ ಆಶಯ ಇಲ್ಲಿದೆ. ಹಿತವಾದ ಬೋಧನೆ ಮನುಷ್ಯರನ್ನು ಎಚ್ಚರಿಸಿದರೆ ಬದುಕಿನಲ್ಲಿ ಸಾರ್ಥಕ್ಯವಿದೆ. ಇಂತಹ ಮಾತುಗಳು ದುರ್ಮಾಗದಲ್ಲಿ ಓಡುವವರನ್ನು ಹಿಡಿದು ನಿಲ್ಲಿಸಿ ಸನ್ಮಾರ್ಗದಲ್ಲಿ ಕ್ರಮಿಸುವಂತೆ ಮಾಡಿದರೆ ಕವಿಯ ಶ್ರಮ ಸಾರ್ಥಕ್ಯವನ್ನು ಪಡೆಯುತ್ತದೆ.

ಕರ್ನಾಟಕದ ಬಯಲು ಸೀಮೆ ಮತ್ತು ಮಲೆನಾಡಿನ ಬಗೆಗೆ ಸರ್ವಜ್ಞನ ತ್ರಿಪದಿಗಳು ಮಾತನಾಡುತ್ತವೆ.

ಜೋಳದಾ ಬೋನಕ್ಕೆ ಬೇಳೆಯಾ ತೊವೆಯಾಗಿ
ಕಾಳೆಮ್ಮೆ ಕರೆವ ಹಯವಾಗಿ ಬೆಳವಲದ
ಮೇಳ ನೋಡೆಂದ ಸರ್ವಜ್ಞ

ಇದು ನಾಡಿನ ಸಮೃದ್ಧಿಯನ್ನು ಗುರುತಿಸಿಕೊಡುತ್ತದೆ.

ಅಲ್ಲವರಸಿನವುಂಟು ಬೆಲ್ಲವೇಲಕಿಯುಂಟು
ಒಳ್ಳೆಯಾ ಹಲಸುಮೆಲಲುಂಟು ಮಲೆನಾಡ
ನಲ್ಲವೆನಬಹುದೇ? ಸರ್ವಜ್ಞ
ಕಿಚ್ಚುಂಟು ಕೆಸರುಂಟು ಬೆಚ್ಚನೆಯ ಮನೆಯುಂಟು
ಇಚ್ಚೆಗೆ ಬರ್ಪ ಸತಿಯುಂಟು ಮಲೆನಾಡ
ಮೆಚ್ಚು ನೋಡೆಂದ ಸರ್ವಜ್ಞ
ಕಡುಕದಾ ಕಡುಬಾಗೆ, ಮಣಕೆಮ್ಮೆ ಹೈನಾಗೆ
ಕುಣಿಕುಣಿದು ಕಡೆದ ಸತಿಯಾಗಿ ಬೆಳವಲದ
ಅಣಕ ನೋಡೆಂದ ಸರ್ವಜ್ಞ

ನೆಮ್ಮದಿಯ ಬದುಕಿಗೆ ಪೂರಕವಾಗುವ ಎಲ್ಲಾ ಸಂಗತಿಗಳನ್ನು ಗುರುತಿಸುತ್ತಾ, ನಾಡನ್ನು ಪ್ರತಿನಿಧೀಕರಿಸಿದ ಹೆಮ್ಮೆ ಸರ್ವಜ್ಞನದು. ಆರೋಗ್ಯಕರವಾದ ಆಹಾರ ವ್ಯವಸ್ಥೆಯೂ ಒಂದು ನಾಡಿನ ಸಂಪತ್ತೆನಿಸುತ್ತದೆ. ಕನ್ನಡಿಗರ ಊಟದ ರುಚಿ, ಅದನ್ನು ಸವಿಯುವ ಬಗೆಗೆ ಸರ್ವಜ್ಞ ಮಾತನಾಡಿದ್ದಾನೆ.

ಹರಕು ಹೋಳಿಗೆ ಲೇಸು, ಮುರುಕು ಹಪ್ಪಳಲೇಸು
ಕುರುಕುರು ಕಡಲೆ ಬಲು ಲೇಸು ಪಾಯಸದ
ಸುರುಕು ಲೇಸೆಂದ ಸರ್ವಜ್ಞ

ಸಮೃದ್ಧವಾದ ಒಂದು ಭೋಜನದ ಗ್ರಹಿಕೆ ಇಲ್ಲಿದೆ. 'ಪಾಯಸದ ಸುರುಕು' ಎನ್ನುವುದು ಶಬ್ಧಿಸುತ್ತಾ ಪಾಯಸವನ್ನು ಸವಿಯುವ ಬಗೆಯನ್ನು ನೆನಪಿಸುತ್ತದೆ. ಕನ್ನಡ ಭಾಷೆಯು ಸರ್ವಜ್ಞನಿಗೆ ಸಂಪೂರ್ಣ ಸ್ವಾಧೀನವಾಗಿತ್ತು. ಕನ್ನಡಿಗರ ಮನೋಧರ್ಮಗಳಿಗೆ ಇವನ ತ್ರಿಪದಿಗಳು ಸಾಟಿಯಿಲ್ಲದ ಉದಾಹರಣೆ. ಮಾತಿನ ಬಗೆಗೆ ಇವನ ಅರ್ಥಪೂರ್ಣವಾದ ಆಲೋಚನೆಗಳು ಪ್ರಕಟಗೊಂಡಿವೆ. 'ಹೊತ್ತಿಗೊದಗದ ಮಾತು', 'ಹೊಲಬನರಿಯದ ಮಾತು' ನಿಷ್ಪ್ರಯೋಜಕವಾದುದು. ಹಾಗಾಗಿ 'ರಸಿಕನಾಡಿನ ಮಾತು ಶಶಿಯುದಿಸಿ ಬಂದಂತೆ' ಎಂಬ ಸಾಲು ಅರ್ಥ ಪೂರ್ಣವೆನಿಸಿದೆ. ಬದುಕಿಗೆ ತೀಕ್ಷ್ಣವಾದ ಬಿಸಿಲು ಮಾತ್ರ ಸಾಲದು, ಬೆಳದಿಂಗಳ ಸವಿಯ ಅಗತ್ಯವೂ ಇದೆ. ಮಾತು ಚಂದ್ರೋದಯದಂತೆ ಮುದನೀಡಬೇಕೆಂಬುದು ಒಪ್ಪತಕ್ಕ ಮಾತು.

ಗಾದೆಯ ಮಾತುಗಳಿಂದ ಸರ್ವಜ್ಞನ ತ್ರಿಪದಿಗಳಿಗೆ ವಿಶೇಷವಾದ ಶೋಭೆಯಿದೆ. ಈ ಸಂಪತ್ತನ್ನು ಆತ ಯಥೇಚ್ಛವಾಗಿ ಬಳಸಿಕೊಂಡು ಅದರ ಸಿರಿಯನ್ನು ವೃದ್ಧಿಸಿದ್ದಾನೆ. 'ಆಳಾಗಬಲ್ಲವನು ಆಳುವನು ಅರಸಾಗಿ', 'ಜ್ವರಬಂದ ಮನುಜನಿಗೆ ನೊರೆವಾಲು ಕಹಿಯಕ್ಕು', 'ಏನಾದಡೇನಯ್ಯ ತಾನಾಗದನ್ನಕ್ಕ' ಮುಂತಾದ ಸಾಲುಗಳನ್ನು ಉದಾಹರಣೆಯಾಗಿ ಗಮನಿಸಬಹುದು.

ಹೀಗೆ ಕನ್ನಡ ಭಾಷೆಯ ಪೂರ್ಣ ಸೊಗಸನ್ನು ಇವನ ತ್ರಿಪದಿಗಳಲ್ಲಿ ಕಾಣಬಹುದು. ವಿಷಯವನ್ನು ಸಂಗ್ರಹವಾಗಿ ಹೇಳಿದ್ದರಿಂದ ಪ್ರತಿಯೊಬ್ಬ ಕನ್ನಡಿಗನ ಮನಸ್ಸಿನಲ್ಲಿಯೂ ಕೆಲವು ಸಾಲಗಳು ಇಂದಿಗೂ ಹಾಗೆಯೇ ಉಳಿದಿವೆ. ಅಲ್ಲದೆ ದಿನ ಬದುಕಿನ ಮಾತುಗಳಲ್ಲಿ ಜೀವನದ ತತ್ವಗಳಾಗಿ ಅವು ತಮ್ಮದೇ ಆದ ಛಾಪು ಮೂಡಿಸಿವೆ. ಪರಿಸರ, ಆರೋಗ್ಯ, ಸಮಾಜ, ಭಕ್ತಿ, ದಾನ, ಮಾತು, ಜಾತಿ, ಆಹಾರ ಮುಂತಾದ ಸಂಗತಿಗಳ ಕುರಿತು ಹೇಳುವುದರೊಂದಿಗೆ

ಕರ್ನಾಟಕ ಸಂಸ್ಕೃತಿಯ ಬಹುತೇಕ ಎಲ್ಲಾ ಪಾರ್ಶ್ವಗಳನ್ನು ಈತ ಅಭಿವ್ಯಕ್ತಿಸಿದ್ದಾನೆ. ಸ್ವಸ್ಥ ಹಾಗೂ ಸದೃಢ ಸಮಾಜವನ್ನು ನಿರ್ಮಾಣ ಮಾಡುವಲ್ಲಿ ಸರ್ವಜ್ಞನ ತ್ರಿಪದಿಗಳು ಪ್ರಯತ್ನಿಸಿವೆ.

**ಅನುಭವಾಮೃತ**

ಇದು ಮಹಲಿಂಗರಂಗನ ಕೃತಿ. ಈತ ಹದಿನೇಳನೇ ಶತಮಾನದ ಕನ್ನಡ ಕವಿ. ಅದ್ವೈತ ಸಿದ್ಧಾಂತವನ್ನು ತಿಳಿಯಾದ ಕನ್ನಡದಲ್ಲಿ ಬೋಧಿಸಿದ ಕವಿ. ಇದು ಭಾಮಿನಿ ಷಟ್ಪದಿಯಲ್ಲಿ ರಚನೆಗೊಂಡ ಕೃತಿ.

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು? (೧-೫)

ಎನ್ನುವುದು ಕವಿಯ ಕನ್ನಡದ ಅಭಿಮಾನ. ಇವನ ಕಾವ್ಯ ನಿರ್ಮಾಣದ ಹೊತ್ತಿನಲ್ಲಿ ದೇಸೀ ಸಾಹಿತ್ಯ ಪರಂಪರೆ ಬೆಳೆದು ಬಂದಿತ್ತು. 'ಸಕಲರಿಗೆ ತಿಳಿವಂತೆ ಸುಲಭೋಪಾಯದಲಿ' ಕಾವ್ಯ ಹೇಳಲು ಹೊರಟವನು ಪ್ರಸ್ತುತ ಕವಿ. ಇವನ ಕಾಲಕ್ಕಾಗುವಾಗ ಕನ್ನಡ ಸಾಹಿತ್ಯ ಜನಸಾಮಾನ್ಯರನ್ನೂ ತಲುಪಿತ್ತು. ಆಗ ಕನ್ನಡದ ಮೂಲಕವೂ 'ಮುಕ್ತಿ' ಸಾಧ್ಯ ಎಂಬ ನಂಬಿಕೆಯನ್ನು ಈತ ಪ್ರಕಟಪಡಿಸಿದನು. ಪಂಡಿತರಿಗೆ ಮಾತ್ರ ಮೀಸಲಾಗಿದ್ದ, ಸಂಸ್ಕೃತ ಭಾಷೆಯಲ್ಲಿದ್ದ ಅದ್ವೈತ ಸಿದ್ಧಾಂತದ ಸೂಕ್ಷ್ಮ ಸಂಗತಿಗಳನ್ನು ಲಲಿತವಾದ ಕನ್ನಡದಲ್ಲಿ ಹೇಳಿದ ಶ್ರೇಯಸ್ಸು ಈತನಿಗೆ ಸಲ್ಲುತ್ತದೆ.

**ರಾಮಾಶ್ವಮೇಧ**

ಕಾವ್ಯಗಳ ಸಾಂಪ್ರದಾಯಿಕ ರೀತಿಯನ್ನು ಹಿಂದೆ ಸರಿಸಿ ಹೊಸತನವನ್ನು ಮೆರೆದವನು ಮುದ್ದಣ. ಇವನ 'ರಾಮಾಶ್ವಮೇಧ' ಇದಕ್ಕೆ ನಿದರ್ಶನ. ಕೃತಿಯಲ್ಲಿ ಆರಂಭದ ದೇವತಾಸ್ತುತಿಯಿಲ್ಲದೆ, ಅಂತ್ಯದ ಮಂಗಳ ಪದ್ಯವಿಲ್ಲದೆ ಎಲ್ಲರ ಹೃನ್ಮನಗಳನ್ನು ಗೆದ್ದ ಕೃತಿ ಇದಾಗಿದೆ. ಕೃತಿಯ ವಸ್ತು ಪೌರಾಣಿಕ. ಆರಂಭ ವಿನೂತನ, ವಿನ್ಯಾಸ ವಿಶಿಷ್ಟ. ಮುದ್ದಣನ ಹೊಸ ಪ್ರಯೋಗಕ್ಕೆ ಈ ಕೃತಿ ಸಾಕ್ಷಿ.

ಮಳೆಗಾಲದ ವರ್ಣನೆಯ ಜೊತೆಗೆ ಮನೋಜ್ಞವಾದ ಕಾಡು ಮತ್ತು ನಾಡಿನ ಚಿತ್ರಣ ಇಲ್ಲಿದೆ. ಬೇರೆ ಯಾವ ಕೃತಿಗಳಲ್ಲೂ ಕಾಣದ ಒಂದು ವಿಶಿಷ್ಟ ಪ್ರಸ್ತಾವನೆ ಮತ್ತು ಕಾವ್ಯ ಹೇಗಿರಬೇಕು, ಭಾಷೆ ಯಾವುದು ಎಂಬೆಲ್ಲ ಸಂಗತಿಗಳನ್ನು ಮುದ್ದಣ–ಮನೋರಮೆಯರ ಸಂಭಾಷಣೆ ಗುರುತಿಸಿಕೊಡುತ್ತದೆ. ಮನೋರಮೆ ಇಲ್ಲಿ ಓದುಗರ ಪ್ರತಿನಿಧಿ. ಸರಸವಾದ ಮಾತಿನ ಮೂಲಕ ಅಶ್ವಮೇಧದ ಕತೆಗೆ ಉತ್ತಮವಾದ ಚೌಕಟ್ಟೊಂದನ್ನು ಇದು ನಿರ್ಮಾಣ ಮಾಡುತ್ತದೆ. ಹಾಗಾಗಿಯೇ ಇದು ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು.

ಕಾಲಪುರುಷನ ಅನಾರೋಗ್ಯದ ಚಿತ್ರಣದೊಂದಿಗೆ ಕೃತಿ ಆರಂಭವಾಗುತ್ತದೆ. 'ಓವೋ । ಕಾಲ ಪುರುಷಂಗೆ ಗುಣಮಣಮಿಲ್ಲಂಗಡ । ಒಡಲೊಳ್ ಗುಡುಗುಟ್ಟುಗುಂ ಗಡ । ಏನರ ಮನೆವಾಗಿಲಂ ಮುಗಿಲ್ದೆರಿಯಿಂ ಬಾಸಣಿಸಿರ್ಪರ್? ಆರ್ಗಂ ಪುಗಲಾಣತಿಯಿಲ್ಲದಿರ್ಕುಂ' (ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ, ೨೦೦೬ ಪು, ೧) ಇದು ಕಾಲ ಪುರುಷನ ಅಸೌಖ್ಯದ ಚಿತ್ರಣ. ಈ ಸಂದರ್ಭವನ್ನು ಕುರಿತು ವಿದ್ವಾಂಸರು ಬೇರೆ ಬೇರೆ ಆಲೋಚನೆಗಳನ್ನು ವ್ಯಕ್ತಪಡಿಸಿದ್ದಾರೆ. ಮುಳಿಯ ತಿಮ್ಮಪ್ಪಯ್ಯ ಅವರ ಪ್ರಕಾರ, ಇದು ಪೂರ್ವಪದ್ಧತಿಯಲ್ಲಿ ನಾಟಕಕ್ಕೆ ಪೂರ್ವ ರಂಗವಿರುವಂತೆ ಮುದ್ದಣ ತನ್ನ ಈ ಕೃತಿಗೆ ಇಂತಹಾ ಕಥಾಮುಖವನ್ನು ಕಲ್ಪಿಸಿರಬೇಕು. ನಾಟಕದಲ್ಲಿ ಬರುವ ನಾಂದಿಗೆ ಸಂವಾದಿಯಾಗಿ ಇಲ್ಲಿ ಮಳೆಗಾಲದ ವರ್ಣನೆಯಿದೆ. ಇವರ ಪ್ರಕಾರ ಇಲ್ಲಿ ಕಾಲಪುರುಷನೆಂದರೆ ರಾಮ. ಅಗಸನ ನಿಂದೆಗೆ ಬೇಸತ್ತ ರಾಮನ ಚಿತ್ರಣ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.(೨೦೦೬ ಪು.೨) ಸಂತೋಷ ಚೊಕ್ಕಾಡಿಯವರ ಪ್ರಕಾರ, ಈ ವರ್ಣನೆಯಲ್ಲಿಯೇ ಆತಂಕದ ಸ್ಥಿತಿಯಿದೆ. ಇಲ್ಲಿ ಕಾಲ ಪುರುಷನ ನಿಸ್ತೇಜವಾದ ಸ್ಥಿತಿ ರಾಷ್ಟ್ರದ ಸ್ಥಿತಿಯೂ ಆಗಿದೆ. ರಾಷ್ಟ್ರ ಜಡ್ಡುಗಟ್ಟಿದ ಸ್ಥಿತಿಯನ್ನು ಮುದ್ದಣ ಗುರುತಿಸಿದ್ದಾನೆ ಎಂಬ ಅಭಿಪ್ರಾಯದೊಂದಿಗೆ, ಕಾವ್ಯದಲ್ಲಾದ ಬದಲಾವಣೆಯ ಜೊತೆಯಲ್ಲಿ ಆಧುನಿಕ ಜಗತ್ತಿನ ಬಗೆಗಿನ ಸೂಕ್ಷ್ಮ ಎಚ್ಚರವನ್ನು ನೀಡಿದ್ದಾನೆ ಎಂಬ ಅಭಿಪ್ರಾಯವನ್ನು ಇವರು ವ್ಯಕ್ತ ಪಡಿಸಿದ್ದಾರೆ. ಹಾಗಾಗಿ ಇದು ಕೇವಲ ರಾಮನ ಕತೆಯಾಗದೆ ಆಧುನಿಕ ಸಮಾಜದ ಕತೆಯೂ ಆಗಿದೆ. ಈ ಮೂಲಕ ಮುದ್ದಣ ವಸಾಹತುಶಾಹಿಗೆ ಪ್ರತಿಕ್ರಿಯಿಸಿದ್ದಾನೆ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತಗೊಳ್ಳುತ್ತದೆ. (೨೦೦೨ ಪು.೨೨೬)

ರಾಮಾಶ್ವಮೇಧದ ಮೊದಲ ಅಧ್ಯಾಯ ಮುದ್ದಣನ ಕಾವ್ಯ ಮನೋಧರ್ಮದ ಕೈಗನ್ನಡಿ. ಜಡ್ಡುಗೊಂಡಿದ್ದ ಕನ್ನಡ ಸಾಹಿತ್ಯವಾಹಿನಿ ಇಲ್ಲಿ ಚಲನಶೀಲತೆಯನ್ನು ಪಡೆದುಕೊಳ್ಳುತ್ತದೆ. ಇದಕ್ಕೆ ಕಾರಣ ಮುದ್ದಣ ಮನೋರಮೆಯರ ಸರಸ ಸಲ್ಲಾಪ, ಜೊತೆಗೆ ಸಂಪ್ರದಾಯವನ್ನು ಬಿಟ್ಟು ಕಾವ್ಯ

ರಚನೆ ಮಾಡಿದ ಮುದ್ದಣನ ನೂತನ ಕಾವ್ಯ ಪ್ರಜ್ಞೆ, ಮೊದಲ ಅಧ್ಯಾಯದಲ್ಲಿಯೇ ನುಡಿಗೆ ಸಂಬಂಧಪಟ್ಟ ಅನೇಕ ಸಂಗತಿಗಳನ್ನು ಕವಿ ಅಭಿವ್ಯಕ್ತಗೊಳಿಸಿದ್ದಾನೆ. ರಾಮಾಶ್ವಮೇಧದ ಮೂಲಕ ಅನಾವರಣಗೊಳ್ಳುವ ಮುದ್ದಣನ ನಾಡಿನ ಪ್ರಜ್ಞೆಯನ್ನು ಆತ ಮಾಡಿರುವ ಕೆಲವು ವರ್ಣನೆಗಳ ಮೂಲಕ ಗ್ರಹಿಸಿಕೊಳ್ಳಬಹುದು. ಕೃತಿಯಲ್ಲಿ ಕಾಣುವ ಋತುವರ್ಣನೆಗಳು ಇದಕ್ಕೆ ಉತ್ತಮ ನಿದರ್ಶನ.

ಕೃತಿಯ ಆರಂಭವನ್ನು ಗಮನಿಸಿದರೆ, ವರ್ಷಾ ಕಾಲದ ವರ್ಣನೆ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಕಾಲ ಪುರುಷನ ಅನಾರೋಗ್ಯದ ವಿವರಣೆ ಇಲ್ಲಿದೆ. ಪ್ರಕೃತಿಯ ಜಡತ್ವದ ಅನಾವರಣ ಕಾವ್ಯಕ್ಕೆ ಶೋಭೆಯನ್ನು ನೀಡುತ್ತದೆ. ಈ ಜಡತ್ವದ ನಾಶಕ್ಕೆ ಔಷಧದ ಮಾತು ಬಂದಾಗ ಆತ ಬಳಸುವ 'ಮಾಂಬಳ', 'ನೇರಳೆ' ಹಣ್ಣುಗಳು ಕರಾವಳಿ ಕನ್ನಡಿಗರಿಗೆ ಪರಿಚಿತವಾದ ವಸ್ತುಗಳೇ ಆಗಿವೆ. ಮಳೆ ಬರುವ ಮೊದಲು ಪ್ರಕೃತಿಯ ಪೂರ್ವತಯಾರಿ ಮುದ್ದಣನ ಕೃತಿಯಲ್ಲಿ ಚೇತೋಹಾರಿಯಾಗಿ ಕಾಣಿಸುತ್ತದೆ. ಹಕ್ಕಿಗಳ ಗಾನಕ್ಕೆ, ಮೌನಕ್ಕೆ ವಿಶೇಷವಾದ ಅರ್ಥವನ್ನು ನೀಡುತ್ತಾ ಕಪ್ಪು ಮೋಡಗಳನ್ನು ಕವಿ ವರ್ಣಿಸುವ ಪರಿ ಹೀಗಿದೆ. 'ಅಂದು ಸೆರಗಂ ಪಾರ್ದುಕಡಲಂ ಮರೆಗೊಂಡ ಕರ್ವೆಟ್ಟುಗಳೀಗಳ್ ಪೂರ್ವವೈರಮಂಬಗೆದು ಬರ್ದಿಲನಾಡಿಂಗೆ ದಾಳಿಡಲ್ಕೆ ದಂಡೆತ್ತಿ ಪೋಪುವಕ್ಕು ಎನೆ ಕರ್ಮುಗಿಲ್ ಆಗಸಂಮುಸುಂಕೆ ಕಾಲನೆಂಬ ಕಾಳರಕ್ಕಸನ ಪೊದೆದ ನೀಲಪಟದೊಂದು ಪಾಂಗಿನೊಳೊಪ್ಪಿದುದು' (ಶ್ರೀರಾಮೇಶ್ವಮೇಧಂ, ಪು.೧೦) ಇಂದ್ರನ ಆನೆಗಳು ದರ್ಪಹೆಚ್ಚಿ ಸೊಂಡಿಲಲ್ಲಿ ತುಂಬಿದ ತುಂಬುನೀರನ್ನು ಪೂತ್ಕರಿಸುತ್ತಿವೆಯೋ ಎಂಬಂತೆ ಮಳೆಗಾಲದ ಚೆಲುವಾದ ಬಗೆಯನ್ನು ಕವಿ ಮನೋಹರವಾಗಿ ವರ್ಣಿಸಿದ್ದಾನೆ.

ಮಳೆಗಾಲದಿಂದ ಬೇಸತ್ತ ಬದುಕಿಗೆ ಕತೆ ಕೇಳುವ ಹುಮ್ಮಸ್ಸಿನೊಂದಿಗೆ ನಡೆಯುವ ಸರಸವಾದ ಸಂಭಾಷಣೆಯಲ್ಲಿ ಸಾಹಿತ್ಯದ ಕುರಿತಾದ ಅನೇಕ ಸಂಗತಿಗಳು ಅನಾವರಣಗೊಂಡಿವೆ. ಮುದ್ದಣನ ಕಾಲದವರೆಗೂ ಸಂಸ್ಕೃತ ಭೂಯಿಷ್ಠವಾದ ಚಂಪೂ ಪರಂಪರೆ ಮುಂದುವರಿದು ಬಂದಿತ್ತು. ಆಂಡಯ್ಯ, ನಯಸೇನ, ಮಹಲಿಂಗರಂಗರಂತಹ ಕವಿಗಳು ಕನ್ನಡದಲ್ಲೇ ಕಾವ್ಯ ನಿರ್ಮಾಣಕ್ಕೆ ಒತ್ತಾಸೆಯನ್ನು ವ್ಯಕ್ತಪಡಿಸಿದ್ದನ್ನು ಕಾಣಬಹುದು. ನಿಧಾನವಾಗಿ ಚಂಪುವಿನ ಕ್ಲಿಷ್ಟತೆ ದೂರಾಗಿ, ಸರಳ ಭಾಷೆಯ ಮೂಲಕ ಜನಸಾಮಾನ್ಯ ಸಾಹಿತ್ಯದ ಓದಿಗೆ ಪ್ರವೇಶ ಪಡೆದುಕೊಳ್ಳುವಂತಾದುದು ಕ್ರಾಂತಿಕಾರಿಯಾದ

ಬದಲಾವಣೆಯಾಯಿತು. ಸಂಸ್ಕೃತದ ಪ್ರಭಾವದಿಂದ ಕನ್ನಡ ಕಳಚಿಕೊಂಡ ಸಂದರ್ಭದಲ್ಲಿ ಮುದ್ದಣ ಕೃತಿ ನಿರ್ಮಾಣ ಮಾಡಿದ್ದನ್ನು ಗಮನಿಸಬಹುದಾಗಿದೆ.

ಮುದ್ದಣನ ಕಾಲಕ್ಕಾಗುವಾಗ ಗದ್ಯ ಹೃದ್ಯವಾದ ಬಗೆಯನ್ನು ಮನೋರಮೆಯ ಮಾತುಗಳ ಮೂಲಕ ಅರ್ಥೈಸಿಕೊಳ್ಳಬಹುದು. ಕತೆ ಹೇಳಲು ಹೊರಟ ಕವಿಗೆ ಅವಳ ಬೇಡಿಕೆ 'ಹೃದ್ಯಮಪ್ಪಗದ್ಯದೊಳೆ ಪೇಳ್ವುದು' ಎಂಬುದಾಗಿದೆ. ಹಾಗಿದ್ದರೂ ಮುದ್ದಣ ಪದ್ಯ ವಿರೋಧಿ ಎಂಬ ಅಭಿಪ್ರಾಯಕ್ಕೆ ಬರಬೇಕಾಗಿಲ್ಲ. ಹೊಸಕಾಲದ ಒಲವು ಗದ್ಯದೆಡೆಗಿದೆಯೆಂಬುದು ಕವಿ ಅರ್ಥೈಸಿಕೊಂಡ ಸಂಗತಿ. ಅವನು ಬರೆದ ಶ್ರೀರಾಮ ಪಟ್ಟಾಭಿಷೇಕ ಪದ್ಯ ಕಾವ್ಯವೇ ಆಗಿದೆ. ಕತೆ ಹೇಳುವುದಕ್ಕೆ ಹೊರಟ ಮುದ್ದಣ ಅದಕ್ಕೆ ನಾಂದಿ ಹಾಡುವ ಬಗೆ ಮತ್ತು ಅಲ್ಲಿ ಬಳಸಿದ ಭಾಷೆ ಕ್ಲಿಷ್ಟತೆಯಿಂದ ಕೂಡಿದೆ.

'ಸ್ವಸ್ತಿ ಶ್ರೀಮತ್ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರ ಮಣಿಮುಕುಟತತಟಘಟಿತ' (ರಾಮಾಶ್ವಮೇಧಂ, ಪು.೨೦) ಇಂತಹಾ ಭಾಷೆಗೆ ಓದುಗರ ಪ್ರತಿನಿಧಿಯಾದ ಮನೋರಮೆಯಿಂದ ನಿರ್ಬಂಧವಿದೆ. ಇದು ಪರಂಪರೆಯಿಂದ ಬಂದ ಸಂಪ್ರದಾಯವಾಗಿತ್ತು. ಸಂಸ್ಕೃತ ಚೆನ್ನಾಗಿ ತಿಳಿದಿಲ್ಲದ ಪಂಡಿತರೂ ಕೂಡಾ ನಾಂದಿ ಪದ್ಯದ ಮಟ್ಟಿಗಾದರೂ ಆ ಭಾಷೆಯಲ್ಲಿ ಪಳಗಬೇಕಾಗಿತ್ತು. ಬಹುಶಃ ಈ ಸಾಲಿನ ಮೂಲಕ ಮುದ್ದಣ ಈ ಸಂಗತಿಯನ್ನು ಟೀಕಿಸುತ್ತಿದ್ದಾನೆ ಎಂಬುದನ್ನು ಗ್ರಹಿಸಿಕೊಳ್ಳಬಹುದು. ಸಂಸ್ಕೃತ ಭೂಯಿಷ್ಠವಾದ ಈ ಶೈಲಿ ಸಾಹಿತ್ಯ ಪರಂಪರೆಯಲ್ಲಿ ಸಂಪ್ರದಾಯದಂತೆ ಬಂದಿದ್ದು, ಜನಸಾಮಾನ್ಯರಿಗೆ ಅರ್ಥವಾಗದಿರುವ ಸನ್ನಿವೇಶ ನಿರ್ಮಾಣವಾಗಿದ್ದುದರಿಂದ ಇವರೆಲ್ಲರ ಪ್ರತಿನಿಧಿಯಾಗಿ ಮನೋರಮೆ ಇದನ್ನು ಖಂಡಿಸುವುದನ್ನು ಕಾಣಬಹುದು. ಈ ಶೈಲಿ ಅವಳ ಪಾಲಿಗೆ 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತೆ' ಆಯಿತು. ಆ ಕಾಲಘಟ್ಟದ ಜನತೆಗೆ ಇಂತಹ ಕ್ಲಿಷ್ಟಪದಗಳು ಅರಗಿಸಿಕೊಳ್ಳುವುದಕ್ಕೆ ಕಷ್ಟಕರವಾಗಿ ಪರಿಣಮಿಸಿದಾಗ, 'ಕನ್ನಡದ ಸೊಗಸನರಿಯಲಾರ್ತೆನಿಲ್ಲೆನಗೆ ಸಕ್ಕದದ ಸೊಗಸಂ ಪೇಳ್ವುದುಗಡ' (ಪು.೨೧) ಎನ್ನುತ್ತಾಳೆ ಮನೋರಮೆ. ಕನ್ನಡದ ಸೊಗಸು ಎನ್ನುವುದನ್ನು ಕವಿ ಪ್ರಜ್ಞಾಪೂರ್ಣವಾಗಿ ಬಳಸಿದ್ದಾನೆ. 'ಕನ್ನಡಂಗಳ್' ಎಂಬ ಪ್ರಾದೇಶಿಕ ಪ್ರಜ್ಞೆ ಇಲ್ಲಿ ಇಣುಕು ಹಾಕಿದಂತಿದೆ.

ಪ್ರಾದೇಶಿಕವಾಗಿ ಕನ್ನಡ ಭಾಷೆ ತನ್ನ ವೈಶಿಷ್ಟ್ಯವನ್ನು ಗುರುತಿಸಿಕೊಂಡು ಬಂದಿದೆ. ಬಹುತ್ವಕ್ಕೆ ತೆರೆದುಕೊಂಡಿರುವ ಕನ್ನಡನಾಡು ಎಲ್ಲಾ ಸಂಗತಿಗಳಲ್ಲಿಯೂ ವೈವಿಧ್ಯತೆಯನ್ನು

ಸಾಧಿಸಿದೆ. ಮನೋರಮೆ ಹೇಳುವ ಈ ಮಾತಿನಲ್ಲಿ ಅಭಿಮಾನ ಮತ್ತು ವೈಚಾರಿಕ ನೆಲೆ ಜಾಗೃತವಾಗಿರುವುದನ್ನು ಗಮನಿಸಿಕೊಳ್ಳಬಹುದು.

ಇಂದು ನಾಡು ಎದುರಿಸುತ್ತಿರುವ ತ್ರಿಭಾಷಾ ಸೂತ್ರದ ಪರಿಣಾಮದ ಸೂಕ್ಷ್ಮ ಎಳೆಯೊಂದನ್ನು ಮುದ್ದಣ ಆ ಕಾಲಕ್ಕೆ ಗುರುತಿಸಿದ್ದಾನೆ. ನಮಗರಿವಿಲ್ಲದ ಭಾಷೆಯ ಕಲಿಕೆಯ ಒತ್ತಡ ಬಂದಾಗ ಪ್ರತಿಯೊಬ್ಬರಿಗೂ ಅದು ತಲೆನೋವಿನ ಸಂಗತಿ. ಆಗ ಪರಭಾಷೆಯ ಸಂಗತಿಗಳನ್ನು ಅನುಭವವೇದ್ಯವಾಗಿಸಿಕೊಳ್ಳುವುದು ಕಷ್ಟ. ಹಾಗಾಗಿಯೇ 'ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇಳ್ವುದು, ಕನ್ನಡಂ ಕತ್ತುರಿಯಲ್ತೆ' ಎಂಬ ಉದ್ಗಾರ.

ಮುದ್ದಣ ಹೇಳುವ 'ತಿರುಳ್ಗನ್ನಡ'ದ ಬಗೆಗೆ ಚರ್ಚಿಸುವಾಗ, ಮಾರ್ಗಕಾರ, ಪಂಪ, ರನ್ನ ಮೊದಲಾದ ಪರಂಪರೆಯ ಕವಿಗಳು ತಿರುಳ್ಗನ್ನಡದ ಪ್ರಸ್ತಾಪ ಮಾಡಿದ್ದಾರೆ. ಮುದ್ದಣ ಹೇಳುವ ತಿರುಳ್ಗನ್ನಡ ಇದಲ್ಲ. ಮುದ್ದಣನು ಮನೋರಮೆಗೆ ಕತೆ ಹೇಳಲು ತೊಡಗಿದ್ದು 'ಕರ್ಮಣಿ ಸರದೊಳ್ ಚೆಂಬವಳಮಂಕೋದಂತಿರೆ, ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆಎಡೆಯೊಳ್ ಸಕ್ಕದದ ನಲ್ನುಡಿ ಮೆರೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ' (ಪು.೨೨) ಇದು ಕವಿಯ ಅಪೇಕ್ಷೆ. ಮಾತ್ರವಲ್ಲ, ಇದು ಕವಿಯು ರೂಪಿಸಿಕೊಂಡ ಕಾವ್ಯ ಭಾಷೆ. ಇಲ್ಲಿ ಕನ್ನಡವು ಕರಿಮಣಿ ಸರದಂತೆ. ಸಂಸ್ಕೃತ ಈ ಸರದಲ್ಲಿ ಅಂದಕ್ಕಾಗಿ ಪೋಣಿಸಿದ ಹವಳದಂತೆ. ಇದರ ಜೊತೆಗೆ ಕವಿಯ ಊರಿನ ಭಾಷೆಯಾದ ತುಳು, ಹವ್ಯಕ ಭಾಷೆಗಳ ಮೇಳೈಕೆ ಮತ್ತು ತಮಿಳು, ಮಲಯಾಳ ಪದಗಳ ಸಂಗಮವೂ ಈ ಕೃತಿಯಲ್ಲಿದೆ. ಮುಖ್ಯವಾಗಿ ಕನ್ನಡ, ತುಳು ಮತ್ತು ಸಂಸ್ಕೃತ ಭಾಷೆಗಳು ಪ್ರಾದೇಶಿಕ ನೆಲೆಯಲ್ಲಿ ಮೂಡಿ ಬಂದ ಕ್ರಮವೇ ಈತ ಗುರುತಿಸಿದ ತಿರುಳ್ಗನ್ನಡ ಎನ್ನಬಹುದು.

ಅನ್ಯ ಭಾಷೆಯ ಪದಗಳು ಮುದ್ದಣನ ಕೃತಿಯೊಳಗೆ ಬಳಕೆಗೊಂಡಿವೆ. ಮೂಲದ್ರಾವಿಡ ಪದಗಳೂ ತಮ್ಮ ಅಸ್ಮಿತೆಯನ್ನು ಗುರುತಿಸಿಕೊಂಡದ್ದು ಕವಿಯ ಪರಿಸರದ ಭಾಷಿಕ ಪ್ರೇಮಕ್ಕೆ ಸಾಕ್ಷಿಯಾಗುತ್ತದೆ. ಉದಾಹರಣೆಗಾಗಿ ಕಿರುನಾರಂಗ, ಸೂಡ್, ಸೊಗಗೇಡು ಮುಂತಾದ ಮಲಯಾಳ ಪದಗಳು, ಕುಂದಲ್, ಮುಡಿಯು, ಕೊಂಚಂ ಮುಂತಾದ ತಮಿಳು ಪದಗಳು ಇಲ್ಲಿ ಬಳಕೆಯಾಗಿವೆ. ಬೇರ, ಸಾಯಿರ, ಅಳೆ, ಚೋಜಿಗೊ (ತುಳು) ಅಬ್ಬೆ, ತಂಗೆ, ಗೊಂತು (ಹವ್ಯಕ) ಮೊದಲಾದ ಶಬ್ದಗಳು ಕವಿಯ ಸ್ವತಂತ್ರ ದೃಷ್ಟಿಕೋನ ಮತ್ತು ಸ್ವೋಪಜ್ಞತೆಗೆ ಸಾಕ್ಷಿಯೆನಿಸಿದೆ. ಒಟ್ಟಿನಲ್ಲಿ ಸರ್ವರಿಗೂ ಅರ್ಥವಾಗುವಂತಹ ಹಳೆಯ ಹೊಸತರ ಮೇಳೈಕೆಯೆನಿಸುವ ಸುಂದರ

ಭಾಷೆಯ ಹರಿಕಾರ ಮುದ್ದಣ ಗುರುತಿಸಿದ 'ತಿರುಳ್ಗನ್ನಡ' ಈ ನೆಲೆಯುಳ್ಳದ್ದೆಂಬುದನ್ನು ಗಮನಿಸಬಹುದು.

ಮುದ್ದಣನ ಹೊಸಪದಗಳ ನಿರ್ಮಾಣವೂ ಗಮನಿಸುವಂತದ್ದೇ ಆಗಿದೆ. ಸಂದರ್ಭೋಚಿತವಾಗಿ ಕವಿಯಿಂದ ಹೊಸಪದಗಳ ನಿರ್ಮಾಣವಾಗಿದೆ. ತಿರುಳ್ಗನ್ನಡದ ಬೆಳ್ನುಡಿಯಲ್ಲಿ ಹೇಳುವ ಉದ್ದೇಶವಿದ್ದ ಕವಿ ತದ್ಭವಗಳನ್ನು ಸಾಲು ಸಾಲಾಗಿ ಬಳಸಿದ್ದಾನೆ. ಈ ಪದಗಳು ಕೆಲವೊಮ್ಮೆ ಕ್ಲಿಷ್ಟವಾದದ್ದೂ ಇದೆ. ಗಂಜರ, ಗಜೆ, ಬವಸು ಬಿಂದ ಮುಂತಾದ ಪದಗಳು ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಿದಂತಾಗಿವೆ. ಸಗ್ಗದಾವು (ಕಾಮಧೇನು) ಪಕ್ಕಿದೇರಂ (ಪಕ್ಷಿವಾಹನ) ಬೆಲ್ಲಂಗೋಲ್ವಿಲ್ಲ (ಮನ್ಮಥ) ಇವೆಲ್ಲ ಸಂದರ್ಭೋಚಿತವಾಗಿ ಕವಿ ಸಂಸ್ಕೃತಕ್ಕೆ ಪ್ರತಿಯಾಗಿ ಸೃಷ್ಟಿಸಿಕೊಂಡ ಕನ್ನಡ ಪದಗಳು. ಇಂತಹಾ ನಿರ್ಮಾಣದ ಮೂಲಕ ನೂತನ ಭಾಷಾಶೈಲಿಯೊಂದನ್ನು ರೂಪಿಸಿಕೊಂಡಿದ್ದಾನೆ.

ಪ್ರಾದೇಶಿಕ ಸಂವೇದನೆಗೂ ಕೃತಿಯಲ್ಲಿ ಕೊರತೆಯಿಲ್ಲ. ಜನಾಭಿಪ್ರಾಯವನ್ನು ತಿಳಿಯಲು ಗೂಢಚಾರರು ಸಂಚರಿಸುತ್ತಿರುವಾಗ ಮುತ್ತೈದೆಯರು ಅಕ್ಕರೆಯಿಂದ ಕರೆದು 'ಅನಾಥರುಂಡಿಲ್ಲದೊಡೆ ಬರ್ಪುದು, ತಂಗೂಳಲ್ತು ಕದನ್ನಮಲ್ತು, ಪೂರಣಗಡುಬುಂಟು, ಓಗರಮುಂಟು, ಅಳೆಯುಂಟು' ಎನ್ನುವಲ್ಲಿ ಪ್ರಕಟಗೊಳ್ಳುವ ಖಾದ್ಯಗಳು ತುಳುನಾಡಿನವೇ ಹೊರತು ಅಯೋಧ್ಯೆಯದ್ದಲ್ಲ ಎಂಬುದನ್ನು ಗಮನಿಸಬಹುದು.

ಅಲ್ಲಲ್ಲಿ ಕಾಣಿಸಿಕೊಳ್ಳುವ ಸುರಗಿ, ರೆಂಜೆ, ಬಾಗೆ, ಪುನ್ನಾಗಗಳು ತುಳುವರಿಗೆ ಪರಿಚಿತವಾದ ಸಸ್ಯರಾಶಿಗಳು. ಇಂತಹ ಸಂದರ್ಭಗಳಲ್ಲಿ ಕವಿಯ ಸ್ಥಳೀಯ ಪ್ರಜ್ಞೆ ಕೆಲಸ ಮಾಡಿದ್ದನ್ನು ಕಾಣಬಹುದು. ಹಳತು-ಹೊಸತರ ಸಂಗಮವಾದ ಕವಿ ಹಳೆಯಕತೆಯನ್ನು ಆಯ್ಕೆ ಮಾಡಿ ನೂತನ ಪ್ರಜ್ಞೆಯಿಂದ ಕೃತಿ ರಚಿಸಿದ್ದಾನೆ. ಕಾವ್ಯದುದ್ದಕ್ಕೂ ಅವನ ಪ್ರತಿಭಾಶಕ್ತಿ ಕ್ರಿಯಾಶೀಲವಾಗಿದ್ದು, ವಿಮರ್ಶನ ಪ್ರಜ್ಞೆಯೂ ಕೆಲಸ ಮಾಡಿದ್ದನ್ನು ಗಮನಿಸಬಹುದು. ಇಂತಹ ಹೊಸ ಅಭಿವ್ಯಕ್ತಿ ಕೌಶಲದಿಂದ ತುಳುನಾಡಿನ ಜೊತೆಗೂಡಿದ ಕರ್ನಾಟಕವನ್ನು ಕವಿ ಪ್ರತಿನಿಧೀಕರಿಸಿದ್ದಾನೆ.

ಅಭಿವ್ಯಕ್ತಿ ಸ್ವಾತಂತ್ರ್ಯ ಈ ಕಾಲಘಟ್ಟದ ಕವಿಗಳಿಗೆ ಲಭ್ಯವಾಗಿತ್ತು. ಹರಿಹರನಂತಹ ಕವಿಯಿಂದ ನೂತನ ಕಥನಪರಂಪರೆ ಪ್ರಾಪ್ತಿಯಾಯಿತು. ಇವನು ನಿರ್ಮಾಣಮಾಡಿಕೊಂಡ ವಸ್ತು ಪ್ರಪಂಚದಲ್ಲಿ ಹೊಸ ದೃಷ್ಟಿಕೋನವಿದೆ. ಭಾಷೆ, ಛಂದಸ್ಸು, ವಸ್ತು ಎಲ್ಲ ಸಂಗತಿಗಳಲ್ಲಿಯೂ

ಪೂರ್ಣ ಮಟ್ಟದ ಸ್ವಾತಂತ್ರ್ಯ ಈ ಕಾಲಘಟ್ಟದ ಕವಿಗಳಿಗೆ ಲಭ್ಯವಾದುದು ಸಾಹಿತ್ಯದ ದೃಷ್ಟಿಯಿಂದ ದಾಖಲೆಯಾಗಿದೆ.

# ಅಧ್ಯಾಯ – ೩

# ಕಾವ್ಯಗಳಲ್ಲಿ ಐಕ್ಯತೆಯ ಕೂಗು

೩:೧ ಕವಿಗಳ ಮೂಲಕ ಗ್ರಹಿಸಿದ ನಾಡು

೩:೨ ಭೌಗೋಳಿಕ ಪ್ರತಿಮೆಗಳು

೩:೩ ಪೌರಾಣಿಕ ಪ್ರತಿಮೆಗಳು

೩:೪ ಸಮನ್ವಯದ ಪ್ರತೀಕ

## ಅಧ್ಯಾಯ – ೩

### ಕಾವ್ಯಗಳಲ್ಲಿ ಐಕ್ಯತೆಯ ಕೂಗು

ಹೊಸಗನ್ನಡ ಕಾಲಘಟ್ಟದ ಕವಿಗಳ ಮುಂದೆ 'ನಾಡು' ಇತ್ತು. ಇದರ ಜೊತೆಗೆ ಕಾವ್ಯದ ವಿವಿಧ ಮಾದರಿಗಳಿದ್ದುವು. ಆದರೆ ಕನ್ನಡ ನಾಡು ಎನ್ನುವುದು ಒಂದು ಏಕರೂಪದ ಚೌಕಟ್ಟಿನೊಳಗೆ ಬಂದಿರಲಿಲ್ಲ. ಇಂತಹ ಸಂದರ್ಭದಲ್ಲಿ ಐಕ್ಯತೆಯ ನಾಡಿಗೆ ಏಕೀಕರಣ ಅಗತ್ಯವಾಗಿತ್ತು. ಅನ್ಯಭಾಷಿಕರ ನಡುವೆ ಹರಿದು ಹಂಚಿಹೋಗಿದ್ದ ನಾಡನ್ನು ಒಂದುಗೂಡಿಸುವುದು ಮತ್ತು ಆ ಮೂಲಕ ನುಡಿಯನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆಯಲ್ಲಿ ಮೂಡಿಬಂದದ್ದು ಏಕೀಕರಣದ ಆಶಯ. ಈ ಸಂದರ್ಭದಲ್ಲಿ ಕರ್ನಾಟಕತ್ವವನ್ನು ರೂಪಿಸುವುದಕ್ಕಾಗಿ ಇತಿಹಾಸದ ವೈಭವೀಕರಣ, ವರ್ತಮಾನದ ಅರಿವು, ಭವಿಷ್ಯದ ಕನಸುಗಳು ಮುಂತಾದ ನೆಲೆಗಳಲ್ಲಿ ಕವಿಗಳು ಯೋಚಿಸತೊಡಗಿದರು.ಕನ್ನಡ ತಾಯಿಯ ಆಮೂರ್ತ ರೂಪಗಳನ್ನು ಸೃಷ್ಟಿಸಿಕೊಂಡು, ಬ್ರಿಟಿಷರಿಗೆ ಪ್ರತಿರೋಧವಾಗಿ ನೆಲದ ಮಹತ್ವವನ್ನು ಸಾರುವ ದೇಶಪ್ರೇಮದ ಕವನಗಳನ್ನು ರಚಿಸಿ ಕರ್ನಾಟಕತ್ವದ ಚಿಂತನೆಯನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಹೊಸಗನ್ನಡದ ಕವಿಗಳು ನಾಡು–ನುಡಿಯನ್ನು ಪ್ರತಿನಿಧೀಕರಿಸಿದ ಬಗೆಯನ್ನು ಕೆಲವು ಪ್ರಾತಿನಿಧಿಕ ಕವನಗಳ ಅಧ್ಯಯನದ ಮೂಲಕ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ವಸಾಹತುಶಾಹಿಯ ಮೂಲಕ ಪಾಶ್ಚಾತ್ಯವಿಚಾರಗಳ ಅರಿವು ಉಂಟಾದ ಕಾಲಘಟ್ಟದಿಂದ ಸಾಹಿತ್ಯದಲ್ಲಿ 'ನವೋದಯ' ಕಾಣಿಸಿಕೊಂಡಿತು. ಈ ನವಸಾಹಿತ್ಯಕ್ಕೆ ಮುದ್ರಣ ಮತ್ತು ಹೊಸ ಶಿಕ್ಷಣ ಕ್ರಮ ಬಾಹ್ಯ ಪ್ರೇರಣೆಗಳಾದುವು. ತಾವು ತಿಳಿದಿದ್ದ ಹೊಸ ವಿಚಾರಗಳನ್ನು, ಕಂಡ ಅನುಭವಗಳನ್ನು ಅಭಿವ್ಯಕ್ತಗೊಳಿಸಲು ಬರಹಗಾರರಲ್ಲಿ ಮೂಡಿದ ಒತ್ತಡ ಮೂಲಭೂತ ಪ್ರಚೋದನೆಯಾಯಿತು. ಸಾಮಾನ್ಯನಿಗೂ ಮುಕ್ತವಾಗಿದ್ದ ಹೊಸ ಶಿಕ್ಷಣದ ಪರಿಣಾಮದಿಂದಾಗಿ ನವೀನ ವಿಚಾರಗಳ ಮಂಥನ ನಡೆಯಿತು. ಅಂತೆಯೇ ಹೊಸ ಯೋಚನಾಶಕ್ತಿ ಬಲಗೊಂಡಿತು.

ವಸಾಹತುಶಾಹಿಯ ಪ್ರವೇಶ ಭಾರತದಲ್ಲಿ ಎಲ್ಲಾ ಸಂಗತಿಗಳಲ್ಲಿಯೂ ಪಲ್ಲಟವನ್ನು ಮೂಡಿಸಿತು. ಒಳಪ್ರವೇಶಿಸಿದ ಉದ್ದೇಶ ವ್ಯಾಪಾರ. ಆದರೆ ಇಡೀ ರಾಷ್ಟ್ರವನ್ನು ತಮ್ಮ ಆಳ್ವಿಕೆಗೆ ತೆಗೆದುಕೊಂಡಾಗ ಅದರಲ್ಲಿ ಆಕರ್ಷಣೆ ಮತ್ತು ವಿಕರ್ಷಣೆ ಎರಡೂ ಕಾಣಿಸಿಕೊಂಡಿತು. ರೈಲ್ವೇ ಸಾರಿಗೆ, ಅಂಚೆ ವ್ಯವಸ್ಥೆ, ಬೃಹತ್ ಕಾರ್ಖಾನೆಗಳು, ಸುಸಜ್ಜಿತ ರಕ್ಷಣಾವ್ಯವಸ್ಥೆ ವೈಜ್ಞಾನಿಕ ಆಡಳಿತ ವ್ಯವಸ್ಥೆ, ಕಾನೂನು ವ್ಯವಸ್ಥೆಗಳು ಇವೆಲ್ಲ ಆಕರ್ಷಣೆಯ ಸಂಗತಿಗಳಾಗಿವೆ. ವಸಾಹತುಶಾಹಿಯಿಂದಾಗಿ ಭಾರತೀಯರು ಗುಲಾಮಗಿರಿಯನ್ನು ಅನುಭವಿಸುವಂತಾದುದು ವಿಕರ್ಷಣೆಯ ಸಂಗತಿ. ಭಾಷಿಕ ಸಂಘರ್ಷವನ್ನು ಮೂಡಿಸುವುದರ ಮೂಲಕ ಬದುಕಿನ ನೆಮ್ಮದಿಯನ್ನು ಕೆಡಿಸುವ ಪ್ರಯತ್ನ ನಡೆಯಿತು, ಬ್ರಿಟಿಷರ ಆಳ್ವಿಕೆಗಿಂತ ಮೊದಲು ಭಾರತದಲ್ಲಿ ಅಖಂಡ ಕರ್ನಾಟಕವೆಂಬುದಿರಲಿಲ್ಲ. ಟಿಪ್ಪುವಿನ ಆಳ್ವಿಕೆಯ ನಂತರ ಮೈಸೂರು ಸಂಸ್ಥಾನ ನಿಜಾಮರ ಆಳ್ವಿಕೆಯಲ್ಲಿದ್ದ ಭಾಗಗಳು, ಮುಂಬೈ ಆಳ್ವಿಕೆಗೆ ಸೇರಿದ ಭಾಗಗಳು, ಕೊಡಗು, ಕೆನರಾ ಜಿಲ್ಲೆ ಇವೆಲ್ಲವನ್ನು ಬ್ರಿಟಿಷ್ ಪ್ರಭುತ್ವವು ತನ್ನ ಅನುಕೂಲಕ್ಕೆ ತಕ್ಕಂತೆ ಬೇರೆ ಬೇರೆ ಭಾಗಗಳನ್ನಾಗಿ ವಿಂಗಡಿಸಿಕೊಂಡಿತು. ಇದರಿಂದ ಕನ್ನಡದ ಪ್ರದೇಶಗಳು ಚದುರಿ ಹೋಗಿದ್ದುವು. ಆದರೂ ಕನ್ನಡ ಭಾಷೆಗೆ ಅಂತಹ ಅಪಾಯ ತಟ್ಟಿರಲಿಲ್ಲ. ಮುಂದೆ ಕರ್ನಾಟಕದ ಬಹುಭಾಗ ಪೇಶ್ವೆಯವರ ಅಧೀನಕ್ಕೊಳಗಾಯಿತು. ಮರಾಠಿಯ ಪ್ರಾಬಲ್ಯ ಹೆಚ್ಚಾಯಿತು. ಧಾರವಾಡ ಪ್ರಾಂತ್ಯವನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ಮರಾಠಿಯ ಪ್ರಭಾವದಿಂದ ಕನ್ನಡ ಭಾಷೆಗೆ ಬಲವಾದ ಹೊಡೆತ ಬಿತ್ತು. ಮೈಸೂರು ಪ್ರಾಂತ್ಯವೊಂದನ್ನು ಬಿಟ್ಟು ಉಳಿದೆಡೆಗಳಲ್ಲಿ ಕನ್ನಡಿಗರು ಬೇರೆ ಭಾಷೆಗಳನ್ನು ಕಲಿಯಬೇಕಾಯಿತು. ಅವರ ಸಂಸ್ಕೃತಿಗೆ ತಮ್ಮನ್ನು ಒಗ್ಗಿಸಿಕೊಳ್ಳಬೇಕಾಯಿತು. ಶಿಕ್ಷಣಕ್ಕಾಗಿ ಬೇರೆ ಬೇರೆ ಪ್ರದೇಶಗಳಿಗೆ ಹೋಗಬೇಕಾದ ಅನಿವಾರ್ಯತೆ ಮತ್ತು ಇಂಗ್ಲೀಷ್, ಉರ್ದು, ಮರಾಠಿ, ತಮಿಳು, ತೆಲುಗು, ಭಾಷೆಗಳನ್ನು ಕಲಿಯಬೇಕಾದ ಸಂಕಷ್ಟ ಕನ್ನಡಿಗರದ್ದಾಗಿತ್ತು.

ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲಿ ಭಾಷೆಯನ್ನು ಉಳಿಸಲು ಅಖಂಡ ಕರ್ನಾಟಕತ್ವದ ಕಲ್ಪನೆಯನ್ನು ಬಿತ್ತಿದವರು ಮತ ಪ್ರಚಾರದ ಉದ್ದೇಶದಿಂದ ಬಂದಂತಹ ಕ್ರಿಶ್ಚಯನ್ನರು. ಇಲ್ಲಿಯ ಭಾಷೆಯ ಶ್ರೀಮಂತಿಕೆ ಅವರನ್ನು ಆಕರ್ಷಿಸಿತು. ಮುದ್ರಣ ಸೌಲಭ್ಯವೂ ಅವರ ಜೊತೆಗಿದ್ದುದರಿಂದ ಇಲ್ಲಿಯ ಸಂಸ್ಕೃತಿ ಆಚಾರ-ವಿಚಾರಗಳ ಕುರಿತು ಬರೆದರು. ಇದರಲ್ಲಿ ಮುಖ್ಯರಾದವರೆಂದರೆ, ಹರ್ಮನ್ ಮೊಗ್ಲಿಂಗ್. ಜೊತೆಗೆ ದೇಸೀ ವಿದ್ವಾಂಸರಾದ ಡೆಪ್ಯೂಟಿ ಚೆನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತುರಮುರಿ, ವೆಂಕಟರಂಗೋ ಕಟ್ಟಿ ಮುಂತಾದವರ ಶ್ರದ್ಧೆಯೂ ಅನನ್ಯವಾದುದು.

ಇದೇ ಸಂದರ್ಭದಲ್ಲಿ ದೇಶಭಾಷೆಯಲ್ಲಿ ಶಿಕ್ಷಣ ಮತ್ತು ಅದಕ್ಕೆ ಪೂರಕವಾದ ಪಠ್ಯಗಳ ರಚನೆಯಾಯಿತು. ಕನ್ನಡ ಶಾಲೆಗಳು, ಕನ್ನಡ ಪುಸ್ತಕಗಳ ಮುದ್ರಣವೂ ಆರಂಭಗೊಂಡಿತು. ಮೊಗ್ಲಿಂಗ್‌ನ ಸಾಧನೆಯಿಂದ 'ಮಂಗಳೂರು ಸಮಾಚಾರ' ಪ್ರಕಟವಾಗಿ ಒಂದೇ ವರ್ಷದಲ್ಲಿ ಅದು 'ಕನ್ನಡ ಸಮಾಚಾರ'ವಾಯಿತು. ಕಿಟ್ಟೆಲ್‌ರ ಮೂಲಕ ಕನ್ನಡ ಶಬ್ದಕೋಶದ ರಚನೆಯೂ ಆಯಿತು. ದೇಸೀ ವಿದ್ವಾಂಸರು ಕನ್ನಡವನ್ನು ಜೀವಂತವಾಗಿಡುವುದರಲ್ಲಿ ಶ್ರಮಿಸಿದರು.

ನಾಡಿನ ಚರಿತ್ರೆಯನ್ನು ಗುರುತಿಸುವ ಕೆಲಸವನ್ನು ಮಾಡಿದ ಇಬ್ಬರು ಮಹನೀಯರು ಕನ್ನಡಿಗರ ಮನದಲ್ಲಿ ಶಾಶ್ವತವಾಗಿ ಉಳಿದಿದ್ದಾರೆ. ಮೈಸೂರು ಕಡೆಯಿಂದ ಲೂಯಿರೈಸ್ ಮತ್ತು ಉತ್ತರಕರ್ನಾಟಕದ ಕಡೆಯಿಂದ ಫ್ಲೀಟ್. 'ಬಿಬ್ಲಿಯಾಥಿಕಾ ಕರ್ನಾಟಿಕ'ದ ಮೂಲಕ ಕನ್ನಡದ ಹಲವು ಅಪೂರ್ವ ಕೃತಿಗಳನ್ನು ಬೆಳಕಿಗೆ ತಂದವರು ರೈಸ್. ಇದರಿಂದ ಕನ್ನಡ ಸಾಹಿತ್ಯದ ಶ್ರೀಮಂತ ಪರಂಪರೆ ಕನ್ನಡಿಗರಿಗೆ ತಿಳಿಯುವಂತಾಯಿತು. ಅದೇ ರೀತಿ ಕರ್ನಾಟಕ ಇತಿಹಾಸಕ್ಕೆ ಆಧಾರವಾದ ಶಿಲಾಶಾಸನಗಳನ್ನು ಉದ್ಧರಿಸಿ, ಅವುಗಳ ಸಹಾಯದಿಂದ ಕನ್ನಡಿಗರ ಇತಿಹಾಸದ ಎಳೆಗಳನ್ನು ಜೋಡಿಸುವ ಕೆಲಸವನ್ನು ಮಾಡಿದವರು ಫ್ಲೀಟ್.

ಕನ್ನಡಿಗರ ಮೇಲೆ ಬೇರೆ ಭಾಷಿಕರ ಧಾಳಿ ನಿರಂತರ ನಡೆದಾಗ ಅದನ್ನು ಪ್ರತಿರೋಧಿಸುವುದಕ್ಕೆ ಸಂಘಟನಾ ಶಕ್ತಿಯ ಅಭಾವ ಕಾಣಿಸಿಕೊಂಡಿತು. ಕನ್ನಡದ ಉಳಿವಿಗಾಗಿ ತಮ್ಮ ಬದುಕನ್ನು ಮುಡಿಪಾಗಿಟ್ಟ ರಾ.ಹ.ದೇಶಪಾಂಡೆಯವರ ಸತತ ಪ್ರಯತ್ನದಿಂದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಉದಯವಾಯಿತು. ಈ ಹಿನ್ನೆಲೆಯಿಂದ ಕನ್ನಡದ ನೆಲೆಗಟ್ಟಿನಲ್ಲಿ ಒಂದೇ ಆಡಳಿತವನ್ನು ರೂಪಿಸುವ ಚಟುವಟಿಕೆಗಳು ಆರಂಭಗೊಂಡವು. ಕನ್ನಡ ಮಾತನಾಡುವ ಪ್ರದೇಶಗಳೆಲ್ಲಾ ಒಂದಾಗದೆ, ಅಖಂಡ ಕರ್ನಾಟಕ ರೂಪುಗೊಳ್ಳದೆ ಕನ್ನಡಿಗರ ಏಳಿಗೆಯು ಅಸಾಧ್ಯವೆಂದು ಪ್ರತಿಪಾದಿಸಿದ ಕನ್ನಡ ಧುರೀಣರು ಏಕೀಕರಣಕ್ಕಾಗಿ ಆಂದೋಲನ ನಡೆಸಿದರು. ಬೆಂಗಳೂರಿನಲ್ಲಿ ಸ್ಥಾಪನೆಗೊಂಡ 'ಕರ್ನಾಟಕ ಸಾಹಿತ್ಯ ಪರಿಷತ್ತು' ಇದಕ್ಕೆ ಕೈ ಜೋಡಿಸಿತು. ಎಲ್ಲರ ಹೋರಾಟದ ಫಲವಾಗಿ ಏಕೀಕರಣ ಸಾಧ್ಯವಾಯಿತು.

ಬೇರೆ ಬೇರೆ ಆಡಳಿತ ಘಟಕಗಳಲ್ಲಿ ಚದುರಿಹೋಗಿದ್ದ ಕನ್ನಡ ಮಾತನಾಡುವ ಜನ ಹೆಚ್ಚಾಗಿದ್ದ ಭಾಗಗಳನ್ನು ಸೇರಿಸಿ 'ವಿಶಾಲಮೈಸೂರುರಾಜ್ಯ' ಅಸ್ತಿತ್ವಕ್ಕೆ ಬಂದಿತು. ಆದರೆ ಕನ್ನಡಿಗರ ಕೆಲವು ಪ್ರದೇಶಗಳು ಈ ಸೂರಿನೊಳಗಡೆ ಸೇರಲಿಲ್ಲ. ಮೈಸೂರು ರಾಜ್ಯ ಉದಯಗೊಂಡ ಅನೇಕ ವರ್ಷಗಳ ನಂತರ, ಅಂದರೆ 1973 ನವೆಂಬರ್ 1ರಂದು ಮೈಸೂರು ರಾಜ್ಯಕ್ಕೆ ಕರ್ನಾಟಕವೆಂಬ ಪುನರ್‌ನಾಮಕರಣ ಮಾಡಲಾಯಿತು. ಇದಾದ ನಂತರವೂ ಆದೋನಿ, ಕಾಸರಗೋಡು,

ಸೊಲ್ಲಾಪುರದಂತಹ ಕನ್ನಡ ಪ್ರದೇಶಗಳು ಬೇರೆಯಾಗಿಯೇ ಉಳಿದವು. ಚದುರಿ ಹೋಗಿದ್ದ ಕನ್ನಡಿಗರನ್ನು ಒಂದುಗೂಡಿಸುವ ಅನಿವಾರ್ಯತೆ ಕಾಣಿಸಿಕೊಂಡಿತು. ಭಾವನಾತ್ಮಕವಾಗಿ ಒಂದುಗೂಡಿಸುವ ಕೆಲಸಕ್ಕಾಗಿ ಇತಿಹಾಸದ ವೈಭವೀಕರಣ, ಪರಂಪರೆಯ ಆಲೋಚನೆ, ವರ್ತಮಾನದ ಅರಿವು ಮುಂತಾದ ನೆಲೆಗಳಲ್ಲೂ ಜನರು ಕ್ರಿಯಾಶೀಲರಾದರು. ಈ ನೆಲೆಯಲ್ಲಿ ಕನ್ನಡ ಮತ್ತು ಕರ್ನಾಟಕತ್ವದ ಕುರಿತು ತಮ್ಮ ಕವನಗಳ ಮೂಲಕ ಚಿಂತಿಸಿದವರು ಶಾಂತಕವಿಗಳು.

ಅಮೂರ್ತದ ಮೂಲಕ ನಾಡನ್ನು ಕಟ್ಟುವ ಮತ್ತು ನಾಡಿನ ಕುರಿತಾದ ಅಭಿಮಾನವನ್ನು ಮೂಡಿಸಿದ್ದು ಕನ್ನಡ ಕವಿಗಳು ಮಾಡಿದ ವಿಶಿಷ್ಟ ಕೆಲಸ. ಈ ಅಮೂರ್ತ ಕಲ್ಪನೆಗೆ ಕಾರಣವಾದುದು ಒಂದು ರೀತಿ ಪ್ರತಿರೋಧದ ನೆಲೆ. ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ಭಾರತವು ಅನೇಕ ಸ್ಥಿತ್ಯಂತರಗಳನ್ನು ಎದುರಿಸಬೇಕಾಯಿತು. ನಮ್ಮ ಪ್ರಾದೇಶಿಕ ಸಂಸ್ಕೃತಿಯನ್ನು ಛಿದ್ರಗೊಳಿಸುವ ಕೆಲಸದ ಜೊತೆಗೆ ಭಾಷೆ, ಧರ್ಮ, ಜನಾಂಗ, ಸಂಸ್ಕೃತಿ, ಸಂಪತ್ತು ಎಲ್ಲವನ್ನೂ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವ ತಂತ್ರಗಾರಿಕೆ ಆರಂಭಗೊಂಡಿತ್ತು. ಆಗ ಸಹಜವಾಗಿಯೇ ಪ್ರಾದೇಶಿಕ ವೈಪರೀತ್ಯಗಳು ದೇಶದ ಒಗ್ಗಟ್ಟನ್ನು, ಸ್ವಾತಂತ್ರ್ಯವನ್ನು ಒಡೆಯದ ರೀತಿಯಲ್ಲಿ ಅರ್ಥಪೂರ್ಣವಾದ ಭೂಮಿಕೆಯೊಂದನ್ನು ಸಿದ್ಧಪಡಿಸುವ ಅನಿವಾರ್ಯತೆಯುಂಟಾಯಿತು. ಹಾಗಾಗಿ ಕನ್ನಡದ ಬಹುತ್ವದ ನೆಲೆಗಳನ್ನು ಶೋಧಿಸುವ, ಅದನ್ನು ಗಟ್ಟಿಗೊಳಿಸುವ ಮತ್ತು ಪುನಾರಚಿಸುವ ಮನಸ್ಸುಗಳ ಫಲವಾಗಿ ಕನ್ನಡದಲ್ಲಿ ಹೊಸತನ ತಲೆದೋರಿತು.

ಕನ್ನಡ ನಾಡು-ನುಡಿಯ ಕುರಿತಾಗಿ ಕನ್ನಡದ ಕವಿಗಳು ಸಾಕಷ್ಟು ಚಿಂತಿಸಿದ್ದಾರೆ. ಜನರಲ್ಲಿ ಸ್ವ ಭಾಷೆ, ಸ್ವದೇಶ, ಸ್ವಸಂಸ್ಕೃತಿಯ ಬಗೆಗಿನ ಅಭಿಮಾನವನ್ನು ಮೂಡಿಸುವ ಪ್ರಯತ್ನ ನಿರಂತರ ನಡೆದಿದೆ. ಈ ನಿಟ್ಟಿನಿಂದ ರಾಷ್ಟ್ರೀಯ ಭಾವನೆಯನ್ನು ಸಶಕ್ತಗೊಳಿಸಲು ರೂಪಕ ಪ್ರತೀಕಗಳನ್ನು ಬಳಸಿಕೊಳ್ಳಲಾಯಿತು. ಈ ಮೂಲಕ ಕನ್ನಡ ಕ್ರಿಯಾಶೀಲ ಮನಸ್ಸುಗಳು ವಸಹಾತುಶಾಹಿಯ ದಬ್ಬಾಳಿಕೆಯನ್ನು ಮುರಿಯುವಲ್ಲಿ ಕೈ ಜೋಡಿಸಿದುವು. ಆಧುನಿಕ ಕನ್ನಡ ಕಾವ್ಯದಲ್ಲಿ ನಾಡಪ್ರೇಮಕ್ಕೆ ಸ್ತ್ರೀತ್ವದ ಚಹರೆ ದೊರೆಯಿತು.

ಪರಂಪರೆಯ ಕಾವ್ಯಗಳನ್ನು ಗಮನಿಸಿದರೆ, 'ಭೂಮಿ', 'ರಾಜ್ಯ'ದ ಪ್ರತೀಕವಾಗಿ 'ಲಕ್ಷ್ಮಿ' ಅಥವಾ 'ರಾಜ್ಯ ಲಕ್ಷ್ಮಿ' ಎಂಬಂತಹ ಪ್ರಯೋಗಗಳು ರೂಢಿಯಲ್ಲಿದ್ದುವು. ಇದು ಪೂಜ್ಯತೆಯ ಭಾವ ಅಥವಾ ಮಮತೆಯ ನೆಲೆ. ನಾಡಿನ ಸಂಸ್ಕೃತಿಯ ರಾಯಭಾರಿಗಳಾದ ಕವಿಗಳು ಇದನ್ನು

ಸ್ತ್ರೀವಾಚಿ ನೆಲೆಯಲ್ಲಿಯೇ ಅನಾವರಣಗೊಳಿಸಿದರು. ಭಾರತೀಯ ಪರಂಪರೆಯನ್ನು ಅರ್ಥೈಸಲು ಇಲ್ಲಿ ಶಕ್ತಿಯ ಆರಾಧನೆಗೆ ಮನ್ನಣೆಯಿತ್ತು. ಬ್ರಿಟಿಷರಿಂದ ಶೋಷಣೆಗೊಳಗಾದ ಭಾರತವನ್ನು ಒಂದು ರೀತಿಯ ಭಾವನಾತ್ಮಕ ನೆಲೆಗಟ್ಟಿನಲ್ಲಿ ಪುನಾರಚಿಸುವ ಅನಿವಾರ್ಯತೆ ಉಂಟಾಯಿತು.

'ಭೂಮಿ'ಯನ್ನು ಮಾತೃಸ್ವರೂಪಿಯಾಗಿ ಪರಿಭಾವಿಸಿದವರು 'ನಾಡ'ನ್ನು ಪ್ರೀತಿಯ ನೆಲೆಯಲ್ಲಿ ತಾಯಿಯಾಗಿ ರೂಪಿಸಿಕೊಂಡರು. ಅದೇ ರೀತಿಯಾಗಿ ಪ್ರಾದೇಶಿಕವಾಗಿಯೂ ಹೆಣ್ಣಿನ ರೂಪಕದ ಸೃಷ್ಟಿಯಾಯಿತು. ಅದು ಮಗಳ ರೂಪಕ. ಕುವೆಂಪು ರಚಿತ ನಾಡಗೀತೆಯನ್ನು ಈ ಹಿನ್ನೆಲೆಯಿಂದ ಗಮನಿಸಬಹುದಾಗಿದೆ. 'ಭಾರತಮಾತೆ', 'ಭಾರತಿ', 'ಜನನಿ', 'ಮಾತೃಭೂಮಿ', 'ಭಾರತೀದೇವಿ' ಮುಂತಾದುವು ರಾಷ್ಟ್ರೀಯ ಮಟ್ಟದ ರೂಪಕಗಳಾದರೆ, 'ತನುಜಾತೆ', 'ಹಿರಿಮಗಳು', 'ಪೆರ್ಮಗಳು', 'ಕನ್ನಡಮ್ಮ', 'ಕರ್ನಾಟಕಮಾತೆ' ಮುಂತಾದುವು ಪ್ರಾದೇಶಿಕ ನೆಲೆಯ ರೂಪಕ–ಪ್ರತೀಕಗಳಾಗಿ ಅನಾವರಣಗೊಂಡುವು.

ಪರಂಪರೆಯ ಸಾಹಿತ್ಯವನ್ನು ಅರ್ಥೈಸಿಕೊಳ್ಳುವಾಗ ಅವರು ಬೇರೆ ಬೇರೆ ಸಂಗತಿಗಳ ಮೂಲಕ ನಾಡನ್ನು ಅಭಿವ್ಯಕ್ತಗೊಳಿಸಿದ ಬಗೆಯನ್ನು ಕಾಣಬಹುದು. ಒಬ್ಬೊಬ್ಬ ಕವಿ ಸೃಷ್ಟಿಸಿದ ಅಮೂರ್ತ ರೂಪ ದಲ್ಲಿಯೂ ಭಿನ್ನತೆಯಿದೆ. ಸೌಂದರ್ಯದ ಆರಾಧನೆಯೂ ಇಲ್ಲಿ ಬಹಳ ಮುಖ್ಯ. ಯಾಕೆಂದರೆ, ಅಮೂರ್ತದಲ್ಲಿ ಸೌಂದರ್ಯಾತ್ಮಕ ಪರಿಕಲ್ಪನೆಯಿದೆ. ನಾಡನ್ನು ಗುರುತಿಸುವಾಗ ಬೆಟ್ಟಗಳು, ಮರಗಿಡಗಳು, ಜಲಪಾತಗಳು, ನದಿಗಳು, ಕೋಗಿಲೆ, ಮಾವು, ಮಲ್ಲಿಗೆ, ತೆಂಗು, ಕಂಗಿನ ಮೂಲಕ ವರ್ಣಿಸುವುದು, ಸೌಂದರ್ಯಾನುಭವದ ಒಂದು ಭಾಗವೇ ಎನ್ನಬಹುದು. ಪರಿಸರ ಮತ್ತು ಮನುಷ್ಯ ಸಂಬಂಧ ಎನ್ನುವುದು ಕವಿಗಳನ್ನು ಕಾಡಿದ ಸಂಗತಿಯಾಗಿದೆ. ಪಂಪನಿಂದ ತೊಡಗಿ ಆಧುನಿಕದವರೆಗೂ, ಇದು ಕಾಣಿಸಿಕೊಳ್ಳುತ್ತದೆ. ಇದು ಬದುಕಿನೊಂದಿಗೆ ನೇರವಾದ ಸಂಬಂಧವುಳ್ಳ ಸಂಗತಿ. ಇದರ ಮೂಲಕ ಹುಟ್ಟಿಕೊಳ್ಳುವ ಮತ್ತು ಅಭಿವ್ಯಕ್ತಗೊಳ್ಳುವ ಜ್ಞಾನ ಶ್ರೇಷ್ಠವಾದುದು. ಮಾವು ಮತ್ತು ಮಲ್ಲಿಗೆಯ ಮೂಲಕ ಪಂಪ ಹೇಳುವ ಸಂಗತಿ ನಾಡಿನ ಸತ್ವದ ಬಗೆಗಿನ ಸಂಗತಿಯೂ ಆಗುತ್ತದೆ. ಒಂದು ಹೂವು ಮತ್ತು ಒಂದು ಹಣ್ಣಿನ ಮೂಲಕ ನಾಡಿನ ಸಮೃದ್ದಿಯನ್ನು ಹೇಳುವ ಪರಿ ವಿಶಿಷ್ಟ. ನೀರು, ಹೂವು, ಹಣ್ಣು, ಭತ್ತ, ಗಿಳಿ, ದುಂಬಿ ಮೊದಲಾದುವುಗಳಿಂದ ಸಮೃದ್ಧವಾದ ನಾಡಿನ ಚಿತ್ರಣವನ್ನು ವ್ಯಕ್ತಗೊಳಿಸಿದ್ದಾನೆ. ಇವೆಲ್ಲಾ ಪ್ರಕೃತಿಯ ಬೇರೆ ಬೇರೆ ಸಂಗತಿಗಳು. ಇವುಗಳ ಮದ್ಯೆ ಒಂದು ರೀತಿಯ ಬಂಧುತ್ವವನ್ನು ಸ್ಥಾಪಿಸುವುದರ ಹಿಂದೆ ಒಂದು ಮೌಲ್ಯಾತ್ಮಕ ನೋಟವಿದೆಯೆಂದು ಅರ್ಥೈಸಿಕೊಳ್ಳಬಹುದು.

ಜೀವಿತದ ಅವಶ್ಯಕತೆಯನ್ನು ಅರಳಿಸುವ ಪ್ರಯತ್ನ ಮಾತ್ರವಲ್ಲದೆ, ಪಂಪ ಪರಿಸರ ಪ್ರೇಮಿಯೂ ಎನ್ನುವುದಕ್ಕೆ ಇದು ಸಾಕ್ಷಿಯಾಗುತ್ತದೆ.

ಆಧುನಿಕ ಕಾವ್ಯದ ಸಂದರ್ಭಕ್ಕೆ ಬಂದಾಗ, ಕನ್ನಡ ಕವಿಗಳು ವಿಶೇಷವಾದ ಕನ್ನಡ ತಾಯಿಯ ಅಮೂರ್ತರೂಪಗಳನ್ನು ಸೃಷ್ಟಿಸಿದ್ದಾರೆ. 'ಮಾತೆಯಾಗಿ', 'ದೇವಿಯಾಗಿ', 'ಚಂಡಿ–ಚಾಮುಂಡಿ'ಯಾಗಿ ಕಾಣುವ ಪರಿ ಗಮನಕ್ಕೆ ಬರುತ್ತದೆ. ಮಾತೃತ್ವದ ಕಲ್ಪನೆ ಆ ಕಾಲಘಟ್ಟಕ್ಕೆ ಅನಿವಾರ್ಯವಾಗಿತ್ತು. ಯಾಕೆಂದರೆ ತಾಯಿ–ಮಕ್ಕಳದ್ದು ಹೊಕ್ಕುಳ ಬಳ್ಳಿಯ ಸಂಬಂಧ. ಮಾತೃತ್ವದ ನೆಲೆ, ದೈವತ್ವದ ನೆಲೆ, ಸಮೃದ್ಧಿಯ ನೆಲೆ, ಗರತಿ– ಮುತ್ತೈದೆ ಮುಂತಾದ ಆಲೋಚನೆಗಳೊಂದಿಗೆ ನಾಡು–ನುಡಿಗೆ ಸ್ತ್ರೀ ಚಹರೆಯನ್ನು ಸೃಷ್ಟಸಿದ ಸಂಗತಿಯನ್ನು ಗಮನಿಸಬಹುದಾಗಿದೆ.

ಹುಟ್ಟಿದ ಊರಿನ ತೊಟ್ಟಿಲ ನೆನಪು, ಆಡಿದ ಅಂಗಳ, ಓಡಾಡಿದ ಊರುಕೇರಿ ಯಾರಿಂದಲೂ ನಿರಾಕರಣೆಗೆ ಒಳಗಾಗುವುದಿಲ್ಲ. ನಾಡಿಗೆ ಮಾತೃ ಸ್ವರೂಪವನ್ನು ಆರೋಪಿಸುವಲ್ಲಿ ಔಚಿತ್ಯಪೂರ್ಣತೆಯಿದೆ. ಯಾಕೆಂದರೆ, ತಾಯಿ ಮಕ್ಕಳನ್ನು ಪೊರೆಯುವವಳು, ಹರಸುವವಳು. ತಪ್ಪು ಮಾಡಿದಾಗ ಸೈರಣೆಯಿಂದ ತಿದ್ದಿ ಕ್ಷಮಿಸುವವಳು. ಹಾಗಾಗಿಯೇ ನಾಡಿಗೆ ತಾಯಿಯ ಚಹರೆ. ವಸಾಹತುಷಾಹಿಯ ದಬ್ಬಾಳಿಕೆಗೆ ಪ್ರತಿರೋಧವಾಗಿ, ಮತ್ತು ಅದನ್ನು ರಾಷ್ಟ್ರಮಟ್ಟದಲ್ಲಿ ಅರ್ಥೈಸಿಕೊಡಲು ಸಹಕಾರಿಯಾಗುವಂತೆ ತಾಯಿಯ ರೂಪಕ ಬಳಕೆಯಾದರೆ ಪ್ರಾದೇಶಿಕ ಹಂತದಲ್ಲಿ ಮಗಳ ರೂಪಕ ಬಳಕೆಯಾಯಿತು.

ಆದಿಯಿಂದ ಅಂತ್ಯದವರೆಗೆ ಮನುಷ್ಯ ಬದುಕನ್ನು ರೂಪಿಸುವ ಪ್ರಯತ್ನ ಮಾಡುವವಳು ತಾಯಿ. ಮನುಷ್ಯ ಜೀವನದ ಎಲ್ಲಾ ಆಗುಹೋಗುಗಳಿಗೂ ಮೂಲ ಭೂಮಿತಾಯಿ. ಹಾಗಾಗಿಯೇ ಭೂಮಿ ಮತ್ತು ತಾಯಿಯ ಏಕತ್ರ ಸ್ವರೂಪ 'ಮಾತೃ ಭೂಮಿ' ಅಥವಾ 'ತಾಯ್ನಾಡು'. ಜನ್ಮ ನೀಡಿ ಪೋಷಿಸುವ ಈ ತಾಯಿ ಮುಂದೆ ರಕ್ಷಕಿ ಮತ್ತು ಶಿಕ್ಷಕಿಯಾಗುತ್ತಾಳೆ. ಈ ಎರಡು ಶಕ್ತಿಗಳ ಮೇಳೈಕೆ ಅವಳಲ್ಲಿದ್ದ ಕಾರಣ ಆಕೆ 'ಶಕ್ತಿದೇವತೆ'. ಕುವೆಂಪು ಹೇಳುವ ನಾಡು ಎನ್ನುವುದು 'ಶಕ್ತಿ ಕಣಾ ಮಂತ್ರ ಕಣಾ ಎನ್ನುವುದು' ಇಲ್ಲಿ ಸಾರ್ಥ್ಯಕ್ಯವನ್ನು ಪಡೆಯುತ್ತದೆ. ರಾಷ್ಟ್ರವನ್ನು ಭಾವನಾತ್ಮಕ ನೆಲೆಯಲ್ಲಿ ಪುನಾರಚಿಸುವ ತುರ್ತು ಉಂಟಾದಾಗ ಭೂಮಿಯನ್ನು ಹೆಣ್ಣಾಗಿ ಪರಿಭಾವಿಸಿ ಆಕೆಯನ್ನು ತಾಯಿಯೆಂದರು. ಪ್ರೀತಿಯ ನೆಲೆಯಲ್ಲಿ ನಾಡು ತಾಯಿಯಾದರೆ, ಭಕ್ತಿಯ ನೆಲೆಯಲ್ಲಿ ದೇವಿಯಾಗುತ್ತಾಳೆ. ಇವೆರಡನ್ನು ಪರಿಭಾವಿಸುವಾಗ ಒಂದು ಲೌಕಿಕವಾದರೆ, ಇನ್ನೊಂದು ಅಲೌಕಿಕ. ಇವೆರಡರ ಸಮೀಕರಣದೊಂದಿಗೆ ಭಾಷೆ ಮತ್ತು ನೆಲದ ಜೊತೆಗೆ ಅನ್ವಯಿಸಿದ ಶಕ್ತಿ

ಕನ್ನಡ ಕವಿಗಳದ್ದು. ಹೀಗೆ ತಾಯಿ–ಮಗಳ ಸಂಬಂಧವನ್ನು ಹೆಣೆದು ಅಮೂರ್ತ ಕಲ್ಪನೆಗಳ ಮೂಲಕ ತಮ್ಮ ಸಂವೇದನೆಯನ್ನು ಅನಾವರಣಗೊಳಿಸಿದರು.

ಶಾಂತಕವಿಗಳಿಗೆ ನಾಡು ಕಂಡದ್ದು ಶಕ್ತಿದೇವತೆಯ ರೂಪದಲ್ಲಿ. ಕನ್ನಡದಲ್ಲಿ ಮೊದಲಿಗೆ ಭುವನೇಶ್ವರಿಯನ್ನು ಪರಿಚಯಿಸಿದ ಕೀರ್ತಿ ಶಾಂತಕವಿಗಳದ್ದು. ಈಕೆ ಇವರ ಕೀರ್ತನೆಯಲ್ಲಿ ಕರ್ನಾಟಕದ ಪ್ರತೀಕವಾಗಿ, ಕನ್ನಡಿಗರ ಅಧಿದೇವತೆಯಾಗಿ, ಕವಿಯ ಇಷ್ಟದೇವತೆಯಾಗಿ ಮನ್ನಣೆ ಪಡೆದಿದ್ದಾಳೆ. ಶಾಂತಕವಿಗಳು ಕನ್ನಡ ಭಾಷೆಯ ಉನ್ನತಿಯನ್ನು ಪರಿಭಾವಿಸಿದವರು. ಕನ್ನಡನಾಡಿನ ಪರಿಸರದಲ್ಲಿದ್ದಂತಹ ಇತರ ಭಾಷೆಗಳ ಸವಾಲಿನಲ್ಲಿ ಕನ್ನಡ ಭಾಷೆಯನ್ನು ಕಟ್ಟುವ ಪ್ರಯತ್ನ ಮತ್ತು ಕನ್ನಡದ ಅನನ್ಯತೆಯನ್ನು ಗುರುತಿಸುವ ಕೆಲಸ ಇವರಿಂದ ನಡೆಯಿತು. ನಾಟಕದ ನಟನದಿಂದ ಕನ್ನಡ ನುಡಿಯ ದುಸ್ಥಿತಿಯನ್ನು ಕಳೆಯಬೇಕೆಂದು 'ಉಷಾಹರಣ' ನಾಟಕವನ್ನು ಬರೆದು ಆಡಿದರು. ಧಾರವಾಡದಲ್ಲಿ ಹುಟ್ಟಿ ಬೆಳೆದ ಶಾಂತಕವಿಗಳು ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸೇರಿದ ಸುಮಾರು ಅರುವತ್ತೈದಕ್ಕಿಂತಲೂ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ. ಶಾಲಾ ಶಿಕ್ಷಕರಾಗಿ ಧಾರವಾಡ, ಬೆಳಗಾವಿ, ಗದಗ, ಹುಬ್ಬಳ್ಳಿ ಮುಂತಾದ ಕಡೆಗಳಲ್ಲಿ ಸಾರ್ಥಕ್ಯದ ಶಿಕ್ಷಣ ಸೇವೆ ಮತ್ತು ಕನ್ನಡ ಸಾಹಿತ್ಯಸೇವೆ ಮಾಡಿದ ಇವರು ಕನ್ನಡದ ದಾಸಯ್ಯನಾಗಿ ಗೆಜ್ಜೆ ಕಟ್ಟಿದ ಅಪೂರ್ವ ಕನ್ನಡ ಪ್ರೇಮಿ.

ಕನ್ನಡಿಗರ ಅಭಿಮಾನ ಶೂನ್ಯತೆ ಶಾಂತಕವಿಗಳಿಗೆ ನೋವನ್ನುಂಟು ಮಾಡಿದ ಸಂಗತಿ ಹಳೆಯ ಪಂಡಿತರು ಮತ್ತು ಇಂಗ್ಲೀಷ್ ವಿದ್ಯಾವಂತರು ಕನ್ನಡ ಸೇವೆ ಮಾಡುತ್ತಿಲ್ಲವೆಂಬ ಕೊರಗಿನಿಂದ ಕನ್ನಡ ಸಾಹಿತ್ಯವನ್ನು ಉದ್ಧರಿಸಬೇಕೆಂಬ ಕಳಕಳಿಯನ್ನು ಇವರು ವ್ಯಕ್ತಪಡಿಸಿದರು. ಸಾಹಿತ್ಯದ ಅರುಣೋದಯ ಕಾಲದ ಪ್ರಮುಖ ಕವಿಯಾದ ಇವರು ಕರ್ನಾಟಕ ಏಕೀಕರಣದ ಹಂಬಲವನ್ನು ಬಿತ್ತಿದ ಹಿರಿಯರಲ್ಲಿ ಒಬ್ಬರು. ಮರಾಠಿ ಮತ್ತು ಉರ್ದುಮಯವಾಗಿದ್ದ ಉತ್ತರ ಕರ್ನಾಟಕದಲ್ಲಿ ಕನ್ನಡದ ಅನನ್ಯತೆಯನ್ನು ಉಳಿಸುವ ಪ್ರಯತ್ನದೊಂದಿಗೆ ಕನ್ನಡದ ಬಾವುಟವನ್ನು ಏರಿಸಿದ ಹಿರಿಮೆ ಇವರದು.

ಶಾಂತಕವಿಗಳದು ಸಂಸ್ಕೃತ ವಿದ್ವಾಂಸರ ಮನೆತನ. ಅಧ್ಯಾಪನ ವೃತ್ತಿಯನ್ನವಲಂಬಿಸಿದ ಇವರು ಹೋದಲ್ಲೆಲ್ಲ ಕೀರ್ತನೆ, ಲಾವಣಿ, ನಾಟಕಗಳ ಮೂಲಕ ಜನಜಾಗೃತಿಯುಂಟುಮಾಡಿದರು. ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಯಶಸ್ಸಿಗಾಗಿ ಕನ್ನಡದ ದಾಸಯ್ಯನಾದರು. ಕನ್ನಡ ಭಾಷೆ ಮತ್ತು ರಕ್ಷಣೆ ತನ್ನ ಏಕಮೇವ ಕರ್ತವ್ಯವೆಂದು ಭಾವಿಸಿದ ಇವರು ರಚಿಸಿದ 'ರಕ್ಷಿಸು ಕರ್ನಾಟಕ ದೇವಿ'ಯು ಮುಂಬೈ

ಕರ್ನಾಟಕದ ನಾಡಗೀತೆಯ ಮನ್ನಣೆ ಪಡೆಯಿತು. ಇಲ್ಲಿ ಕರ್ನಾಟಕದ ವೀರ ಚರಿತ್ರೆಯನ್ನು ಹೇಳುತ್ತಾ ಕರ್ನಾಟಕ ಮಾತೆ ಯಾರಿಂದ ಪೂಜನೀಯಳಾಗಿದ್ದಾಳೆಂಬುದನ್ನು ದಾಖಲಿಸಿದ್ದಾರೆ.

ಕದಂಬಾದಿ ಸಂಪೂಜಿತ ಚರಣೆ
ಗಂಗಾರಾಧಿತ ಪದನಖಸರಣೆ
ಚಾಲುಕ್ಯರುತ್ತಮ ಕಾಂಚೀಕಿರಣೆ
ರಾಷ್ಟ್ರಕೂಟಮಣಿ ಕಂಠಾಭರಣೆ (ರಕ್ಷಿಸು ಕರ್ನಾಟಕ ದೇವಿ)

ಈ ರಾಜವಂಶಗಳೆಲ್ಲ ಕನ್ನಡ ನಾಡನ್ನು ಆಳಿವೆ. ಕರ್ನಾಟಕ ಅರಸು ಮನೆತನದವರು ಈ ತಾಯಿಯ ರಾಜವೈಭವವನ್ನು ಸಮೃದ್ಧಗೊಳಿಸಲು ಪ್ರಯತ್ನಿಸಿದ್ದಾರೆ. ಒಂದು ನಾಡನ್ನು ಆಳಿದ ರಾಜವಂಶಗಳು ಮತ್ತು ಅಂದಿನ ವೈಭವವನ್ನು ವರ್ಣಿಸುತ್ತಾ ತನ್ಮೂಲಕ ನಾಡಿನ ಬಗೆಗಿನ ಅಭಿಮಾನಕ್ಕಾಗಿ ಪ್ರೇರೇಪಿಸುವ ನೆಲೆಯನ್ನು ಇಲ್ಲಿ ಕಾಣಬಹುದು.

ಧಾರವಾಡದ ಬೀದಿಯಲ್ಲಿ 'ಬೇಡಲು ಕನ್ನಡ ದಾಸಯ್ಯ ಬಂದಿಹನು ನೀಡಿರಮ್ಮ ತಡ ಮಾಡದಲೆ' ಎನ್ನುತ್ತಾ, ಮನೆಮನೆಯ ಮುಂದೆ ನಿಂತು ಕೊಟ್ಟದ್ದನ್ನು ಸ್ವೀಕರಿಸಿ, ಕೊಟ್ಟವರನ್ನು ಹರಸಿದವರು ಶಾಂತಕವಿಗಳು. ಇವರು ಬೇಡಿದ್ದು ತಮಗಾಗಿ ಅಲ್ಲ, ಕನ್ನಡಕ್ಕಾಗಿ. ವೃದ್ಧಾಪ್ಯದಲ್ಲೂ ಹರೆಯದ ಹುರುಪು ಭಾಷೆಯ ಉಳಿವಿಗಾಗಿ. ಧಾರವಾಡದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಆಯೋಜಿಸಬೇಕೆಂಬ ಉತ್ಕಟ ಅಪೇಕ್ಷೆಯೊಂದಿಗೆ ಯತಿಯಂತೆ ಬೇಡಿದರು. ಯಾಕೆಂದರೆ, ಕನ್ನಡ ಇವರ ಉಸಿರು. ಆ ಕಾಲದ ಕನ್ನಡದ ತೇಜೋಹೀನ ಸ್ಥಿತಿಯ ಬಗೆಗೆ ದನಿಯೆತ್ತಿ ನಾಡು ಮತ್ತು ನುಡಿಯ ಬಗೆಗೆ ಅಭಿಮಾನ ಮೂಡುವ ನಿಟ್ಟಿನಲ್ಲಿ ನಿರಂತರ ಪ್ರಯತ್ನ ಮಾಡಿದರು. ಕವಿ ಹೇಳುವಂತೆ, ಕನ್ನಡ ಮಕ್ಕಳ ಹೆತ್ತವರು ಕನ್ನಡ ಮಾತಿನ ತಂದೆತಾಯಂದಿರು. ಆ ಮಕ್ಕಳು ಆಲಿಸಿದ್ದು ಕನ್ನಡ ಮಾತಿನ ಜೋಗುಳ. ಆಡಿದ್ದು ಕನ್ನಡದ ತೊಟ್ಟಿಲಲ್ಲಿ. ಬೆಳೆದದ್ದು, ಸಿರಿವಂತರಾದದ್ದು, ಕೀರ್ತಿಗಳಿಸಿದ್ದು ಎಲ್ಲವೂ ಕನ್ನಡ ದೇಶದಲ್ಲಿ. ಹಾಗಾಗಿ ಅದನ್ನು ತೀರಿಸುವ ಪ್ರಯತ್ನಕ್ಕಾದರೂ ಮುಂದಾಗಿ ಎಂದು ಕಳಕಳಿಯಿಂದ ಕೇಳಿಕೊಳ್ಳುತ್ತಾರೆ.

ಏಕೀಕರಣಪೂರ್ವದ ನಾಡು-ನುಡಿಯನ್ನು ಗಮನಿಸಿದರೆ, ಈ ಪರಿಕಲ್ಪನೆಯ ಬಗೆಗೆ ಒಂದು ರೀತಿಯ ಆರಾಧನಾ ಭಾವ ಇದ್ದುದನ್ನು ಕಾಣಬಹುದು. ನಾಡನ್ನು ತಾಯಿಯಾಗಿ, ನುಡಿಯನ್ನು 'ಸರಸ್ವತಿ' ಯಾಗಿ ಪರಿಭಾವಿಸಿದ ಬಗೆ ಕಂಡು ಬರುತ್ತದೆ. ನಾಡು-ನುಡಿಯ ಅಭಿಮಾನವನ್ನು ಮೂಡಿಸುವ ಉದ್ದೇಶದಿಂದ ಕನ್ನಡ ಕವಿಗಳು ಇದಕ್ಕೆ ಪೂರಕವಾದ ಸಂಗತಿಗಳನ್ನೊಳಗೊಂಡ ಕವನಗಳನ್ನು ರಚಿಸಿದರು. ಕನ್ನಡ ನಾಡು ಮತ್ತು ಸಾಹಿತ್ಯಕ್ಕೆ ವೈಭವ

ಪೂರ್ಣವಾದ ಪ್ರಾಚೀನ ಪರಂಪರೆಯಿದೆ. ಚಕ್ರವರ್ತಿಗಳು, ರಾಜಮಹಾರಾಜರು, ಯೋಧರು, ರೈತರು, ಕವಿಗಳು, ಶಿಲ್ಪಿಗಳು, ಚಿಂತಕರು, ದಾರ್ಶನಿಕರು, ಸಮಾಜಸುಧಾರಕರು, ಕಲೋಪಾಸಕರು, ಕ್ರಾಂತಿಕಾರರು ಸಾವಿರಾರು ವರ್ಷಗಳಿಂದ ಈ ನಾಡನ್ನು ಅಭಿವೃದ್ಧಿ ಪಥದತ್ತ ಸಾಗಿಸುತ್ತಿದ್ದಾರೆ.

ನಾಡು ಎಂದಾಗ ಒಂದು ಕೂಡುಕುಟುಂಬದ ಕಲ್ಪನೆ ಕಾಣಿಸಿಕೊಳ್ಳುತ್ತದೆ. ಕುಟುಂಬವನ್ನು ಸಾರ್ಥಕತೆಯೊಂದಿಗೆ ಮುನ್ನಡೆಸುವವಳು 'ತಾಯಿ'. ಹಾಗಾಗಿ ನಾಡನ್ನು 'ತಾಯಿ'ಯ ರೂಪಕದ ಮೂಲಕ ಕನ್ನಡ ಕವಿಗಳು ಗುರುತಿಸಿದ್ದಾರೆ. ಈ ಕುಟುಂಬದೊಳಗೆ ಅನೇಕ ಸದಸ್ಯರು. ಅಲ್ಲಿ ಎಷ್ಟೇ ಅಂತಃ ಕಲಹಗಳಿದ್ದರೂ ಪರರ ಆಕ್ರಮಣವಾದಾಗ ಕುಟುಂಬದೊಳಗೆ ಒಗ್ಗಟ್ಟು ಕಾಣಿಸಿಕೊಳ್ಳುತ್ತದೆ. ಅವಿಭಕ್ತ ಕುಟುಂಬದ ಪ್ರತಿಯೊಬ್ಬ ಸದಸ್ಯನಿಗೂ ಆ ಕುಟುಂಬದ ಘನತೆಯನ್ನು ಕಾಪಾಡುವ ಉಳಿಸುವ ಜವಾಬ್ದಾರಿಯಿದೆ. 'ನಾಡು' ಎಂಬ ವಿಚಾರಕ್ಕೆ ಬಂದಾಗಲೂ ಹೀಗೆಯೇ. ನಾಡಿನ ಪ್ರತಿಯೊಬ್ಬರಲ್ಲೂ ಇದು ತನ್ನದೆಂಬ ಅಭಿಮಾನ ಇದ್ದರೆ ಮಾತ್ರ ಆ ನಾಡಿಗೆ ಉಳಿಗಾಲ. ಇಂತಹ ಅಭಿಮಾನ ದೂರಾಗಿ ಅನ್ಯ ಸಂಸ್ಕೃತಿ, ಭಾಷೆಯ ಬಗೆಗೆ ಆಕರ್ಷಣೆ ಉಂಟಾದಾಗ ಎಚ್ಚರಿಸುವ ಪ್ರಮೇಯ ಬರುತ್ತದೆ. ಅಖಂಡ ಕರ್ನಾಟಕದ ವೇದಿಕೆಯನ್ನು ಸಿದ್ಧಗೊಳಿಸುವಲ್ಲಿ ಕವಿಗಳ ಪಾತ್ರ ಹಿರಿದಾದುದು. ಹರಿದು ಹಂಚಿಹೋದ ಕರ್ನಾಟಕ ಕವಿಗಳಿಗೆ ಅಂಗಾಂಗಗಳನ್ನು ಕಳೆದುಕೊಂಡ ದೇಹದಂತಾಗಿತ್ತು. ಇದನ್ನು ಮತ್ತೆ ಒಟ್ಟು ಸೇರಿಸುವಲ್ಲಿ ಕಾರ್ಯ ಶಕ್ತಿಯ ಕೊರತೆ ಕಾಣಿಸುತ್ತಿತ್ತು. ಯಾವುದೇ ನಾಡಿನ ಅಭಿವೃದ್ಧಿಗೆ ಜನಬಲ, ಧನಬಲ, ಮನಬಲದ ಅಗತ್ಯವಿದೆ. ಅದರಲ್ಲಿಯೂ 'ಮನಬಲದ'ದಲ್ಲಿ ಕೊರತೆಯುಂಟಾದರೆ ನಾಡು ಐಕ್ಯವಾಗಿರುವುದಕ್ಕೆ, ಸಮೃದ್ಧವಾಗಿರುವುದಕ್ಕೆ ಸಾಧ್ಯವೇ ಇಲ್ಲ.

ಕರ್ನಾಟಕ ಸಂಸ್ಕೃತಿ ಶ್ರೇಷ್ಠವಾದದ್ದು. ಶಿಲ್ಪ ಮತ್ತು ವಾಸ್ತು ಶಿಲ್ಪಗಳ ಮೂಲಕ ಒಂದು ಜನಾಂಗದ ನಾಗರೀಕತೆಯನ್ನು ಅಳೆಯಬಹುದೆಂಬುದು ಬಲ್ಲವರ ಮಾತು. ಕರ್ನಾಟಕದ ಶಿಲ್ಪ ವಾಸ್ತುಶಿಲ್ಪಗಳು ಹೊಸಗನ್ನಡದ ಕವನಗಳಲ್ಲೂ ಇಣುಕು ಹಾಕುತ್ತವೆ. ಈ ನಾಡಿನಲ್ಲಿ ಶಿಲೆಯೆಲ್ಲ ಕಲೆಯೇ. ಗೋವಿಂದಪೈಯವರ 'ಕನ್ನಡಿಗರ ತಾಯಿ' ಕವನದಲ್ಲಿ,

> ಹಳೆಯ ಬೀಡ ಬೇಲನಾಡು ಮಾಡಮೆನಿತೊ ಸುಂದರಂ
> ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂದುರಂ
> ಇಲ್ಲಿಲ್ಲದ ಶಿಲ್ಪಿಮಿಲ್ಲ
> ನಿನ್ನ ಕಲ್ಲೆ ನುಡಿವುದಲ್ಲ (ಕನ್ನಡಿಗರ ತಾಯಿ)

ಎಂಬ ಮಾತುಗಳು ಕರ್ನಾಟಕದ ಶಿಲ್ಪಕಲೆಯ ಬಗ್ಗೆ ಹೇಳುತ್ತವೆ. ಜಕ್ಕಣನ ಶಿಲ್ಪಕಲೆ ಅಚ್ಚರಿ ಮೂಡಿಸುವಂತದ್ದು. ಡಿ.ವಿ.ಜಿ ಯವರ 'ಬೇಲೂರಿನ ಶಿಲಾಬಾಲಿಕೆಯರು' ಅರ್ಥವತ್ತಾದ ಕವನ.

ಶ್ರವಣಕೆ ಸಿಲುಕದ ಲಲಿತಾ
ರವ ಸುಖವಂ ರಸನೆಗೊದಗದಮೃತ ದ್ರವಮಂ
ಎವೆಯಿಕ್ಕದ ನಯನಗಳಿಂ
ಸವಿವುದು ನೀವೆಂಬ ಮಾಯಗಾತಿಯರಿವರಾರ್ (ಬೇಲೂರಿನ ಶಿಲಾಬಾಲಿಕೆಯರು)

ಶಿಲ್ಪ ಕಲೆಯ ಸೌಂದರ್ಯದ ಅನಾವರಣದ ಮೂಲಕ ನಾಡಿನ ಬಗೆಗೆ ಅಭಿಮಾನ ಮೂಡಿಸುವ ಪ್ರಯತ್ನ ಇಲ್ಲಿದೆ. ಕನ್ನಡ ನಾಡು ಹರಿದು ಛಿದ್ರವಾದ ಸಂಕಟವನ್ನು ಕವನದ ಮೂಲಕ ತೋಡಿಕೊಂಡವರು ಮಾಸ್ತಿ. ಅವರ 'ಕನ್ನಡ ನಾಡಿನ ಸ್ಥಿತಿಯನ್ನು ನೆನೆದು' ಎಂಬ ಕವನವನ್ನು ಗಮನಿಸಿದರೆ ನಾಡಿನ ಸ್ಥಿತಿಗಾಗಿ ಮರುಗಿದ ಮನಸ್ಸನ್ನು ಅರ್ಥೈಸಿಕೊಳ್ಳಬಹುದು.

ಹರಿದು ತುಂಡಾಗಿಹುದು ಇಂದು ಕನ್ನಡನಾಡು
ಅಣ್ಣ ತಮ್ಮದಿರು ತಾವಣ್ಣ ತಮ್ಮದಿರೆಂದು
ತಿಳಿಯಲಾರರು ನಡೆಯಲಾರರು : ಬಾ ಬಂಧು
ಎಂದು ಕರೆಯಲು, (ಕನ್ನಡ ನಾಡಿನ ಸ್ಥಿತಿಯನ್ನು ನೆನೆದು)

ಹರಿದು ಹಂಚಿಹೋದ ನಾಡಿನಲ್ಲಿ ಸಹೋದರತೆಗೆ ಬೆಲೆಯಿಲ್ಲ, ಅದನ್ನು ಗುರುತಿಸ ಹೊರಟರೆ,

ಸ್ವಾಮಿ ನನ್ನೂರು ದಾರ್ವಾಡ
ನನ್ನೂರು ಮೈಸೂರು, ನನ್ನೂರು ಎರಕಾಡು
ಮರ್ಯಾದೆಯಿಂದ ಕರೆಯಿರಿ ನನ್ನ ಎನ್ನುವರು

ಈ ನೋವನ್ನು ವ್ಯಕ್ತಪಡಿಸಿದ ಕವಿ ಮನಸ್ಸು ವಿಶಾಲವಾದದ್ದು. ಹಾಗಾಗಿಯೇ ಅದು 'ಕನ್ನಡದ ನಾಡ ಜನವೆಲ್ಲವೂ ನನ್ನವರು' ಎನ್ನುತ್ತದೆ. 'ನಾವೆಲ್ಲ ಒಂದು ಮನೆಯವರಣ್ಣತಮ್ಮದಿರು, ನಮ್ಮೆಲ್ಲರನು ಪಡೆದುದೊಂದೆ ನಾಡಿನುಸಿರು ಎಂದು ನಾವರಿದೆವೇ ನಮಗೆ ಇನ್ನಾರೆದುರು. ಹಾ ನನ್ನ ಸೋದರರೆ ಬನ್ನಿ ಒಂದಾಗಿ' ಎಂದು ಕರೆಕೊಡುತ್ತಾರೆ. ಇಡೀ ಕರ್ನಾಟಕ ಒಂದು ಕುಟುಂಬದಂತೆ. ಅಲ್ಲಿ ಕಾಣಬೇಕಾದದ್ದು ಸಹೋದರತೆಯ ನೆಲೆ. ಕನ್ನಡ ನಾಡನ್ನು ಒಂದು ಗೂಡಿಸುವ ಅಭಿಲಾಷೆಯನ್ನು ಕವನ ವ್ಯಕ್ತಪಡಿಸುತ್ತದೆ.

ಚೆಲುವಕನ್ನಡನಾಡಿನ ಉದಯಕ್ಕಾಗಿ ಕಾಯುತ್ತಿದ್ದ ಕಾತರದ ಕ್ಷಣ. ಉದಯವಾಗಬೇಕಾಗಿದ್ದ ಕನ್ನಡ ನಾಡಿನ ಚೆಲುವು ಹುಯಿಲಗೋಳರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಕವನದಲ್ಲಿ ಅನಾವರಣಗೊಂಡಿದೆ. ಯಾವುದೇ ಒಂದು ನಾಡು

ಚೆಲುವಾಗಿ ಕಾಣುವುದು ಅದು ಬೆಳೆದು ಬಂದ ರೀತಿಯಿಂದ, ಅದರ ಪರಂಪರೆಯಿಂದ, ಅಥವಾ ಪ್ರಕೃತಿ ಸೌಂದರ್ಯದಿಂದ. ಕವಿಯ ಪ್ರಕಾರ ಕನ್ನಡ ನಾಡು ಚೆಲುವಿನ ನಾಡು ಸದಭಿಮಾನದ ಗೂಡು. ಪೌರಾಣಿಕ ಪ್ರತಿಮೆಗಳ ಮೂಲಕ, ಶಿಲ್ಪ ಕಲೆಯ ಅಚ್ಚರಿಯ ಮೂಲಕ, ವಿದ್ವತ್ತಿನ ಮೂಲಕ ಶೋಭಾಯಮಾನವಾದ ಈ ನಾಡು 'ಕಾವೇರಿ ಗೋದೆಯರು, ಮೈದೊಳೆವ ನಲುನಾಡು' ಎನ್ನುವಾಗ, ನದಿಯಿಂದ ನಾಡಿಗೆ ಪಾವಿತ್ರ್ಯ ನಾಡಿನಿಂದ ನದಿಗೆ ಹಿರಿಮೆ.

ಕನ್ನಡದ ಕವಿಗಳು ಮುಂದೊಂದು ಜನ್ಮವಿದ್ದಲ್ಲಿ ಮತ್ತೆ ಇದೇ ನಾಡಿನಲ್ಲಿ ಹುಟ್ಟುವ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ವೀ.ಸೀಯವರು ನಾಡಿನ ವರ್ಣನೆಯನ್ನು ಮಾಡುತ್ತಾ 'ನೂರು ಭವ ಭವದಲ್ಲಿ ಇಲ್ಲೆ ಬಾಳ್' ಬಯಸುತ್ತಾರೆ. ದಾನದ ಮೂಲಕ ಧನ್ಯತೆಯನ್ನು ಪಡೆದ ನಾಡು ಎನ್ನುತ್ತಾ,

ಕಂಡಲ್ಲಿ ಗುಣಕೆ ಕೈಮುಗಿದು ಕೊಂಡಾಡಿ ಕರೆವ
ಎತ್ತಿ ಮಡಲಲಿ ತೂಗಿ ಜಗಕ್ಕೆಲ್ಲ ತೋರಿ ತಣಿವ
ಹಾಲ್ ಬೆಣ್ಣೆ ಹೆಜ್ಜೇನು ಕೆನೆಮೊಸರನೂಡಿ
ಬಿಳ್ಪನುಪಚರಿಸಿ ಉಪಚರಿಸಿ ಮಣಿವ
ಧನ್ಯದಾನದ ನೆಲೆಯು ನಮ್ಮ ಹೊನ್ನಾಡು (ಕನ್ನಡ ನಾಡು)

ಅತಿಥಿ ಸತ್ಕಾರಕ್ಕೆ ಹೆಸರಾದ ನಾಡು ಕರ್ನಾಟಕ. ಗುಣಕ್ಕೆ ಮತ್ಸರವಿಲ್ಲ ಎಂಬಂತೆ ಉತ್ತಮ ಗುಣಕ್ಕೆ ಮಾನ್ಯತೆ ನೀಡಿದ ನಾಡು. ಹಾಲು, ಬೆಣ್ಣೆ, ಹೆಜ್ಜೇನು, ನಮ್ಮ ಉಪಚಾರದ ರೀತಿಯನ್ನು ತಿಳಿಸುತ್ತವೆ. ಸಮೃದ್ಧವಾದ ನಾಡಿನ ಗ್ರಹಿಕೆಯನ್ನು ಇಲ್ಲಿ ಮಾಡಿಕೊಳ್ಳಬಹುದು. ಇಂತಹ ಉಪಚಾರದಿಂದ ಆರೋಗ್ಯ ಭಾಗ್ಯ, ಉಪಚಾರಕ್ಕಾಗಿ ಧನಧಾನ್ಯ ಸಂಪತ್ತು. ಒಟ್ಟಿನಲ್ಲಿ ಇದು ನಮ್ಮ ಪುಣ್ಯವನ್ನು ತೂಗಿ ತೊನೆಯುವ ತೊಟ್ಟಿಲು.

ಈ ನಾಡಿನಲ್ಲಿ ಹುಟ್ಟಿದುದಕ್ಕೆ ಧನ್ಯತೆಯ ಭಾವ ಅನೇಕ ಕವನಗಳಲ್ಲಿ ಅಭಿವ್ಯಕ್ತಗೊಂಡಿದೆ. ಕನ್ನಡನಾಡಿನಲ್ಲಿ ಕನ್ನಡದ ಕುಲವಿದೆ. ಕನ್ನಡ ಕುಲದ ದೇಗುಲವಿದೆ. 'ಭಾರತವೆ ಸಾವಿತ್ರಿ ಕನ್ನಡವೆ ಗಾಯತ್ರಿ' ಎಂಬ ಗ್ರಹಿಕೆಯಿದೆ. ಈ ದೇವಿಯರಿಗೆ ಎತ್ತ ಬೇಕಾಗಿರುವ ಆರತಿ ಸೇವೆಯೆಂಬುದು. ಕರ್ತವ್ಯ ಸಫಲತೆ ಇಲ್ಲಿ ನೀಡುವ ಪಾದಕಾಣಿಕೆ. ನಾಡು ಒಂದಾಗುವುದೆಂಬ ಹಂಬಲದಿಂದ ಎಲ್ಲರೂ ಭಿನ್ನತೆಯನ್ನು ಮರೆತು ಒಂದಾಗಬೇಕೆಂಬ ಕರೆಯನ್ನು ಕಡೆಂಗೋಡ್ಲು ಶಂಕರಭಟ್ಟರ 'ಮಂಗಲ ಗೀತೆ'ಯಲ್ಲಿ ಕಾಣಬಹುದು. ಆಶಾವಾದದಲ್ಲಿ ಮುಂದುವರಿಯುವ ಈ ಕವನ ಕನ್ನಡದ ಜೀವಕಳೆ ಕನ್ನಡಿಗರ ತನು, ಮನಗಳಲ್ಲಿ ತುಂಬಿ ಹರಿಯುವುದನ್ನು ಗುರುತಿಸಿಕೊಡುತ್ತದೆ.

ಹಗಲುಕನಸಾಗಿದ್ದ ಹಳೆಯ ಬಯಕೆಗಳು ಕೈಗೂಡಿ ಬಂದ ಬಗೆಯನ್ನು ಗುರುತಿಸುತ್ತದೆ. ಕನ್ನಡಿಗರಿಗೆ ಮಂಗಲವಾಗುವ ಸಮಯ ಬಂದಿದೆ. ಹಾಗಾಗಿ 'ಒಸಗೆತೋರಣ' ಕಟ್ಟಲು ಸೂಚನೆಕೊಡುತ್ತಾರೆ. ಆದರ್ಶದ ಬೆನ್ನುಹತ್ತಿ ಕನ್ನಡ ನಾಡು – ನುಡಿಯ ಚಿಂತನೆಯನ್ನು ಮಾಡಿದವರು ಕಡೆಂಗೋಡ್ಲು ಶಂಕರಭಟ್ಟರು. ಪ್ರತಿಯೊಂದು ಕನ್ನಡ ಜೀವವೂ ಈ ನೆಲದಲ್ಲಿ ಹುಟ್ಟಿದ್ದಕ್ಕೆ ಧನ್ಯತೆಯನ್ನು ಅನುಭವಿಸಲಿ ಎಂಬ ಭಾವ ಇಲ್ಲಿದೆ.

ಕನ್ನಡ ಮಕ್ಕಳನ್ನು ಒಟ್ಟು ಸೇರಿಸಿಕೊಂಡು ಕನ್ನಡ ತಾಯಿ ಮತ್ತೆ ಆಗಮಿಸಿಸುವುದಕ್ಕಿದ್ದಾಳೆ ಅವಳನ್ನು ಎದುರುಗೊಳ್ಳುವುದಕ್ಕೆ ಎಲ್ಲರೂ ಸೇರಬೇಕಾದ ಬಗೆಯನ್ನು ಕಾವ್ಯಾನಂದರ 'ತಾಯಬರವು' ಕವನ ತಿಳಿಸಿಕೊಡುತ್ತದೆ. ಇಲ್ಲಿರುವ ಎಲ್ಲ ಸಂಗತಿಗಳ ಮೇಲೆ ಸಾಕ್ಷಿ ಹೇಳುತ್ತಾ,

> ಯೋಗನಿದ್ರೆಯ ತೊರೆದು ಪೂರ್ಣರೂಪವ ತಳೆದು
> ಮತ್ತೆ ಮೈದೋರುವಳು ಕನ್ನಡದ ತಾಯಿ
> ಬನ್ನಿ ತಾಯ್ನಾಡಿಗರೆ ತಾಯಡಿಯ ಪೂಜೆಗೆ
> ತನ್ನಿ ತನಿವಗೆಯೆಂಬ ಹೂ ಹಣ್ಣು ಕಾಯಿ (ತಾಯಬರವು)

ಎನ್ನುತ್ತಾ, ಕನ್ನಡಿಗರು ಎಲ್ಲೇ ಹಂಚಿಹೋಗಿದ್ದರೂ ಕನ್ನಡ ನಾಡಲ್ಲಿ ಮತ್ತೆ ಒಂದಾಗಬೇಕೆಂಬ ಕಳಕಳಿ ಇಲ್ಲಿದೆ. ಈಗ ಕನ್ನಡ ಮನಸ್ಸುಗಳು ಒಂದಾಗದಿದ್ದರೆ ತಾಯಿ ಕೈತಪ್ಪಿ ಹೋಗುವ ಸಾದ್ಯತೆಯಿದೆ. ನಾಡು ಉಳಿಯಬೇಕಾದರೆ ಒಂದಾಗುವುದು ಅನಿವಾರ್ಯ. ಕನ್ನಡ ತಾಯಿಯನ್ನು ಬರಮಾಡಿಕೊಳ್ಳುವುದಕ್ಕೆ ಒಂದು ವಿಶಿಷ್ಟ ಕಲ್ಪನೆಯನ್ನು ಕವಿ ಆಗುಮಾಡಿಕೊಡುತ್ತಾರೆ.

> ತಿಪಟೂರೆ ತೆಂಗುಬಡೆ ಶಿವಮೊಗ್ಗೆ ಅಡಕೆ ಕೊಡು
> ಸಹ್ಯಾದ್ರಿ ಮದಗಜವೆ ಚವರಿ ಬೀಸು
> ನೀಲಗಿರಿ ತೊಡೆ ನಿನ್ನ ಶ್ರೀಗಂಧ ಲೇಪವನು
> ಬಳ್ಳಾರಿ ಹರಳುಗಳ ಹಾಸಿಗೆಯ ಹಾಸು (ತಾಯಬರವು)

ಕನ್ನಡ ನಾಡಿನಲ್ಲಿ ಅಗಾಧವಾದ ಸಂಪತ್ತಿದೆ. ಆ ಸಂಪತ್ತಿನ ಮೂಲಕವೇ ಆಕೆಯನ್ನು ಆರಾಧಿಸುವ ಪರಿಕಲ್ಪನೆಯಿದೆ. ತೆಂಗು, ಅಡಿಕೆ ಇಲ್ಲಿಯ ವಾಣಿಜ್ಯ ಬೆಳೆಗಳು. ಇದು ಶ್ರೀಗಂಧದ ನಾಡು. ಅವುಗಳ ಮೂಲಕವೇ ತಾಯಿಯನ್ನು ಆರಾಧಿಸಬೇಕಿದೆ. ಅದಕ್ಕಿಂತಲೂ ಮುಖ್ಯವಾಗಿ ಅದನ್ನು ತೆಗೆದುಕೊಂಡು ಆಯಾ ಪ್ರದೇಶದವರು ಒಟ್ಟು ಸೇರುವ ಒಂದು ಸಾಂಪ್ರದಾಯಿಕ ಹಿನ್ನೆಲೆ ಇಲ್ಲಿದೆ. ನಾಡನ್ನು ಪರಿಚಯಿಸುತ್ತ ನಾಡಿನವರನ್ನು ಒಟ್ಟು ಸೇರಿಸುವ ಪರಿಕಲ್ಪನೆ ಸೊಗಸಾಗಿದೆ.

ಕವನದ ಮೂಲಕ ಕನ್ನಡತಾಯಿಗೆ ಕಾಣಿಕೆ ನೀಡಿದವರು ಸು.ರಂ ಎಕ್ಕುಂಡಿಯವರು. ತನ್ನ ಪ್ರಿಯನಾಡಿನ ಜನ್ಮದಿನದಂದು ತಾನು ಯಾವ ಕಾಣಿಕೆ ಕೊಡಲೆಂಬುದು ಕವಿಯ ಪ್ರಶ್ನೆ.

ಮಲೆನಾಡ ಕಣಿವೆಗಳ ಹಸಿರು ಮೌನದೊಳಿರುವ
ನಿನಗಾಗಿ ನಾನೊಂದು ಗಿಳಿಯ ತರಲೆ (ಕಾಣಿಕೆ)

ಎನ್ನುವ ಕವಿ ಉಡುಗೊರೆಗಳ ಪಟ್ಟಿಯನ್ನೆ ಮುಂದಿಡುತ್ತಾರೆ. ಈ ಉಡುಗೊರೆಗಳು ವಿಶಿಷ್ಟವಾದುವು. ಕಾಮನಬಿಲ್ಲು, ಮಂದಾನಿಲದ ವೀಣೆ, ಕಲ್ಪವೃಕ್ಷ ಸಸಿ, ಪಲ್ಲಕ್ಕಿ, ಚಾಮರ, ಯಾವುದೂ ಕವಿಗೆ ತೃಪ್ತಿ ನೀಡುವುದಿಲ್ಲ ಹಾಗಾಗಿ,

ಏನೇನೂ ನೀಡಿದರೂ ನಿನ್ನ ಋಣತೀರದು
ನನ್ನೊಳೇನೂ ಇಲ್ಲ ನನ್ನದೆಂದು
ಓ ನನ್ನ ಪ್ರಿಯನಾಡೆ ಅಂತೆ ಸ್ವೀಕರಿಸು
ಪ್ರೀತಿಯೆಸಳಿನ ನನ್ನ ಹಾಡನೊಂದು (ಕಾಣಿಕೆ)

ಕೊನೆಗೆ ಕಾಣಿಕೆ ಮುಕ್ತಾಯಗೊಳ್ಳುವುದು ಹಾಡಿನ ಎಸಳಿನ ಮೂಲಕ. ತಾಯ್ನಾಡಿನ ಋಣವನ್ನು ಏನು ಕೊಟ್ಟರೂ ತೀರಿಸುವುದಕ್ಕೆ ಸಾಧ್ಯವೇ ಇಲ್ಲ ಎಂಬ ಭಾವ ಇಲ್ಲಿದೆ. ಕನ್ನಡನಾಡಿನಲ್ಲಿ ಹುಟ್ಟಿ ಎಲ್ಲೇ ಬದುಕನ್ನು ಕಟ್ಟಿಕೊಂಡರೂ ನಾಡಿನ ಅಭಿಮಾನ ಸದಾ ಜೊತೆಗಿರುವಂತದ್ದು. ಅದನ್ನು ಕುರಿತು ಕುವೆಂಪುರವರು ಹೇಳಿದ ಮಾತು ಅರ್ಥಗರ್ಭಿತವಾಗಿದೆ.

ನೀ ಮೆಟ್ಟುವ ನೆಲ ಅದೆ ಕರ್ನಾಟಕ
ನೀನೇರುವ ಮಲೆ ಸಹ್ಯಾದ್ರಿ (ಮೆಟ್ಟುವ ನೆಲ ಅದೆ ಕರ್ನಾಟಕ)

ಕನ್ನಡಿಗರು ಕಾಲಿಟ್ಟ ಜಾಗ ಕರ್ನಾಟಕ, ಯಾವುದೇ ಬೆಟ್ಟವನ್ನೇರಲಿ ಅದು ಸಹ್ಯಾದ್ರಿ. ಇವರು ಗುರುತಿಸಿದ ನಾಡು ಭೌಗೋಳಿಕ ನಾಡಲ್ಲ; ಅದೊಂದು ಸಾಂಸ್ಕೃತಿಕವಾದ ನಾಡು.

ಕರ್ನಾಟಕ ಎಂಬುದೇನು
ಹೆಸರೆ ಬರಿಯ ಮಣ್ಣಿಗೆ?
ಮಂತ್ರ ಕಣಾ । ದೇವಿಕಣಾ
ಬೆಂಕಿ ಕಣಾ । ಸಿಡಿಲು ಕಣಾ
ಕಾವ ಕೊಲುವ ಒಲವ ಬಲವ
ಪಡೆದ ಚಲದ ಚಂಡಿಕಣಾ । (ಅಖಂಡ ಕರ್ನಾಟಕ)

ಸಾಂಸ್ಕೃತಿಕವಾಗಿ ಕನ್ನಡಿಗರು ಗಟ್ಟಿಯಾಗಬೇಕಾದ ಸಂದೇಶ ಇಲ್ಲಿದೆ. ನಾಡನ್ನು ಒಂದು ಮಂತ್ರ, ಶಕ್ತಿ, ಬೆಂಕಿ, ಸಿಡಿಲು ಎಂದೆಲ್ಲಾ ಗುರುತಿಸುವುದು ಅಸಾಮಾನ್ಯ ಕಲ್ಪನೆ. 'ಎಲ್ಲಾದರೂ ಇರು ಎಂತಾದರೂ ಇರು ಎಂದೆಂದಿಗು ನೀ ಕನ್ನಡವಾಗಿರು' ಎಂಬುದೇ ಕವಿಯ ಕಲ್ಪನೆಯ ನಾಡಿನ ಅಧಿಷ್ಟಾನ ಸೂತ್ರ. ನಾಡನ್ನು ಶ್ರೀಗಂಧದ ನಾಡು, ಹೊನ್ನಿನ ಗಣಿ ಎಂದಾಗ ಅದು ಅಮೂಲ್ಯವಾದುದು, ಪವಿತ್ರವಾದುದು ಎಂಬ ಗ್ರಹಿಕೆ ಇದೆ. ಕರ್ನಾಟಕದ ಎಲ್ಲೋ ಒಂದು ಕಡೆ ಶ್ರೀಗಂಧವಿರಬಹುದು. ಎಲ್ಲೋ ಒಂದು ಕಡೆ ಚಿನ್ನದ ಗಣಿ ಇರಬಹುದು. ಆದರೆ ಇದನ್ನು ಇಡೀ ನಾಡಿಗೆ ಚಾಚುವ ಕೆಲಸವನ್ನು ಕವಿಗಳು ಮಾಡಿದ್ದಾರೆ.

ಅಖಂಡ ಕರ್ನಾಟಕದ ಹೋರಾಟದ ಸಂದರ್ಭದಲ್ಲಿ ರಚನೆಯಾದ ಕುವೆಂಪು ಅವರ ಕವನಗಳಲ್ಲಿ ಒಂದು ರೀತಿಯ ಆವೇಶವಿದೆ. ಎಲ್ಲೇ ಇದ್ದರೂ ಕನ್ನಡಿಗರು ಕನ್ನಡಿಗರಾಗಿಯೇ ಉಳಿಯಬೇಕೆಂಬ ಭಾವ ಅವರ ರಚನೆಗಳಲ್ಲಿವೆ. ತಾನು ಯಾವ ನೆಲವನ್ನೇ ಮೆಟ್ಟಲಿ ಅದು ಕರ್ನಾಟಕ, ಯಾವ ಬೆಟ್ಟವನ್ನೇ ಏರಲಿ ಅದು ಸಹ್ಯಾದ್ರಿ, ಮುಟ್ಟುವ ಮರ ಶ್ರೀಗಂಧ, ಕುಡಿಯುವ ನೀರು ಕಾವೇರಿ ನೀರು ಎಂಬ ಭಾವನೆ ಬಲಗೊಳ್ಳಬೇಕು. ಇಲ್ಲಿ ಕರ್ನಾಟಕದ ಗಡಿಗುರುತುಗಳಾವುವೂ ನೆನಪಾಗುವುದಿಲ್ಲ. ಬಹುಶಃ ಕವಿ ಸಾರಿದ ವಿಶ್ವ ಮಾನವತೆಯ ಬೀಜರೂಪ ಇಲ್ಲೇ ಇದೆಯೇನೋ ಅನ್ನಿಸುತ್ತದೆ. ಕವಿಯ ಮಾತುಗಳಲ್ಲೇ ಹೇಳುವುದಾದರೆ, 'ಕರ್ನಾಟಕ ಕಾವ್ಯಸಂಸ್ಕೃತಿಯನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡ ಕನ್ನಡಿಗನು ಭೌಗೋಳಿಕವಾದ ಎಲ್ಲೆಗಳಿಂದ ಹೆದರಬೇಕಾದ್ದಿಲ್ಲ... ಕನ್ನಡ ಕಾವ್ಯಗಳನ್ನೋದುವಾತನು ಅಮೇರಿಕೆಯಲ್ಲಿದ್ದರೂ ಅದು ಕರ್ನಾಟಕವೆ. ಪಂಪನನ್ನೋದುವ ನಾಲಗೆ ಮಿಸಿಸಿಪಿಯ ಹೊಳೆಯ ನೀರನ್ನೀಂಟಿದರೂ ಅದು ಕಾವೇರಿಯೆ. ಕುಮಾರವ್ಯಾಸನನನ್ನಾಲಿಪ ಕಿವಿ ಆ್ಯಂಡಿಸ್ ಪರ್ವತವನ್ನೇರಿದರೂ ಅದು ಸಹ್ಯಾದ್ರಿಯೆ. ಕಾವೇರಿಯಿಂದ ಮಾ ಗೋದಾವರಿ ವರಮಿರ್ದನಾಡು ಎಂದು ಬಣ್ಣಿಸಿದ ಕರ್ನಾಟಕ ನೆಲದ ಎಲ್ಲೆ ಇಂದು ಭೌಗೋಳಿಕವಾಗಿ ವ್ಯತ್ಯಸ್ತವಾಗಿರುವುದಕ್ಕಾಗಿ ನಾವು ಪರಿತಪಿಸುವುದು ಅನಾವಶ್ಯಕ'. (೧೯೭೬ ಪು.೬೯) ಇದು ಕವಿ ಮಾಡಿಕೊಂಡ ವಿಸ್ತಾರವಾದ ಕರ್ನಾಟಕದ ಪರಿಕಲ್ಪನೆ. ಈ ಕಲ್ಪನೆಯಲ್ಲಿ ಚಲನಶೀಲತೆಯ ನೆಲೆಯಿದೆ. ಇದು ಕಾವೇರಿಯಿಂದ ತೊಡಗಿ ಮಿಸಿಸಿಪಿಯವರೆಗೂ ವಿಸ್ತರಿಸುತ್ತದೆ. ಸಹ್ಯಾದ್ರಿಯಿಂದ ಆ್ಯಂಡಿಸ್‌ವರೆಗೂ ತೆರೆದುಕೊಳ್ಳುತ್ತದೆ. ಒಟ್ಟಿನಲ್ಲಿ ಕನ್ನಡಿಗನ ವಿಸ್ತಾರವೇ ಕರ್ನಾಟಕದ ವಿಸ್ತಾರವಾಗುತ್ತದೆ.

ರಾಷ್ಟ್ರಪ್ರೇಮ, ಭಾಷಾಪ್ರೇಮವನ್ನು ಹೃದಯದಲ್ಲಿ ಅನನ್ಯವಾಗಿ ತುಂಬಿ ಕೊಂಡವರು ಕುವೆಂಪು.

ಇಂದು ಬಂದು ನಾಳೆ ಸಂದು
ಹೋಹ ಸಚಿವ ಮಂಡಳಿ
ರಚಿಸುವೊಂದು ಕೃತಕವಲ್ತೋ
ಸಿರಿಗನ್ನಡ ಸರಸ್ವತಿಯ
ವಜ್ರ ಕರ್ಣಕುಂಡಲ
ಅಖಂಡ ಕರ್ನಾಟಕ
ಅಲ್ತೋ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ
ನೃಪತುಂಗನೆ ಚಕ್ರವರ್ತಿ
ಪಂಪನಲ್ಲಿ ಮುಖ್ಯಮಂತ್ರಿ (ಅಖಂಡ ಕರ್ನಾಟಕ)

ಅಶಾಶ್ವತವಾದ ಒಂದು ರಾಜಕೀಯ ಪ್ರಕ್ರಿಯೆಯ ಟೀಕೆ ಇಲ್ಲಿದೆ. ಕವಿಗೆ ಶತಮಾನಗಳಿಂದ ದತ್ತವಾದ ಸಾಂಸ್ಕೃತಿಕ ಏಕೀಕರಣವೇ ಮುಖ್ಯವೆನಿಸುತ್ತದೆ. ಹಾಗಾಗಿ ಅಲ್ಲಿ ಕವಿ–ಕಾವ್ಯ ಪರಂಪರೆಯ ನಿತ್ಯ ಮಂತ್ರಿ ಮಂಡಲವನ್ನು ರೂಪಿಸುತ್ತಾರೆ. ಇದು ತಾಯಿ ಸರಸ್ವತಿಯಿಂದ ರಚಿತವಾದ ಕಾರಣ ಈ ಸಚಿವಮಂಡಲಕ್ಕೆ ನೃಪತುಂಗ, ಪಂಪನೆ ಮೊದಲಾದವರು ಸದಸ್ಯರಾಗಿರುತ್ತಾರೆ. ಇದಕ್ಕೆ ರಾಜಕೀಯದ ಯಾವ ಹಂಗೂ ಇಲ್ಲ. ಕನ್ನಡತನ ಅಂದರೆ ಆ ರಾಜ್ಯದ ಜನರ ಬದುಕಿನ ನೆಮ್ಮದಿಯೂ ಹೌದು. ಕನ್ನಡದ ನಿಜವಾದ ಅರ್ಥ ಸಾಕ್ಷಾತ್ಕಾರಗೊಳ್ಳಬೇಕಾದರೆ ಶಾಂತಿ, ಸೌಹಾರ್ದತೆ, ನೆಮ್ಮದಿಯ ಅಗತ್ಯವಿದೆ. ಆಗ ಅಖಂಡಕರ್ನಾಟಕವು ಸಾರ್ಥಕ್ಯವನ್ನು ಪಡೆದುಕೊಳ್ಳುತ್ತದೆ. ಇಲ್ಲಿ ರಾಷ್ಟ್ರೀಯತೆ ಮನುಷ್ಯನ ಮೂಲಭೂತ ಸಮಸ್ಯೆಗಳನ್ನು ಪರಿಹಾರ ಮಾಡುವ ಮಹೋನ್ನತ ತತ್ವವೆಂಬುದಾಗಿ ಕವಿ ವ್ಯಾಖ್ಯಾನಿಸುತ್ತಾರೆ.

ಕರ್ನಾಟಕದ 'ತನುಜಾತೆ'ಯ ರೀತಿಯಲ್ಲಿ ಉಳಿದ ರಾಜ್ಯಗಳು ಪರಸ್ಪರ ಸಾಮರಸ್ಯದ ಬದುಕನ್ನು ಕಾಣಬೇಕೆಂಬ ನಿಲುವು ಕುವೆಂಪುರವರದು. ಇದು ಕವಿಯ ಬಹು ಸಂಸ್ಕೃತಿಯ ಪ್ರತಿಪಾದನೆಗೆ ನಿದರ್ಶನವಾಗುತ್ತದೆ. ನೆರೆಯ ಭಾಷಿಕರ ನಾಡು–ನುಡಿಯ ಅಭಿಮಾನವನ್ನು ಕಂಡ ಕವಿ ಕನ್ನಡಿಗರಿಂದ ಅದನ್ನು ನಿರೀಕ್ಷಿಸುತ್ತಾರೆ. 'ನುಡಿ ನಿಮ್ಮ ರಕ್ಷಿಸುವ ಖರ್ಪರ ಧರ್ಮ'. ಅದಕ್ಕಾಗಿ ಎಲ್ಲರೂ ನಾಡು–ನುಡಿಯ ಅಭಿಮಾನವುಳ್ಳವರಾಗಬೇಕೆಂಬ ಹಂಬಲವನ್ನು ವ್ಯಕ್ತಪಡಿಸಿದ್ದಾರೆ.

ಕುವೆಂಪು ವೀರತ್ವದ ರೂಪಕಗಳನ್ನು ಬಳಸಿದ್ದನ್ನು ಕಾಣಬಹುದು. ವಸಾಹತುಶಾಹಿ ಸಂಸ್ಕೃತಿಯ ಕುರುಡು ಅನುಕರಣೆಯಿಂದ ಹೇರಿದ ಭಾಷಾ ನೀತಿಯ ಬಗೆಗೆ ಅವರು ತಾಳುವ ನಿಲುವು ಮತ್ತು ಅದರಿಂದ ತಮಗೊದಗುವ ದುರವಸ್ಥೆಯಿಂದ ಆತ್ಮರಕ್ಷಣೆ ಮಾಡಿಕೊಳ್ಳಲು,

ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ

ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ

ನಿಮ್ಮ ನುಡಿ, ನಿಮ್ಮ ಗಂಡಸುತನಕೆ ಹಿರಿಸಾಕ್ಷಿ

ಎಂದು ಕರೆ ನೀಡುತ್ತಾರೆ. ರಾಜನುಡಿ, ರಾಷ್ಟ್ರನುಡಿ, ದೇವನುಡಿಗಳೆಂಬ ನೆಪವನ್ನು ಮುಂದಿಟ್ಟುಕೊಂಡು ಅನ್ಯಭಾಷೆಗಳ ಹೊರೆಯನ್ನು ಹೇರಿದ ಅಮಾನವೀಯತೆಯ ಖಂಡನೆ ಇಲ್ಲಿದೆ.

ಹೆಣ್ಣು ಸಂಕಥನದ ಸೌಮ್ಯರೂಪಿ ಮತ್ತು ರೌದ್ರರೂಪಿ ಎಂಬಂತಹ ಎರಡೂ ಚಹರೆಗಳು ಕುವೆಂಪು ಕಾವ್ಯ ಸೃಷ್ಟಿಯಲ್ಲಿವೆ. ಅವರಿಗೆ ನಾಡು ಎನ್ನುವುದು ಮಾತೆ, ದೇವಿ, ಮಗಳು, ತನುಜಾತೆ, ಬೆಂಕಿ, ಸಿಡಿಲು, ಮಂತ್ರ, ಚಂಡಿ, ಕ್ರಾಂತಿಕಾಳಿ ಮುಂತಾದ ರೂಪಗಳಲ್ಲಿ ಕಾಣಿಸಿಕೊಂಡಿದೆ. 'ಕ್ರಾಂತಿಕಾಳಿ'ಯ ರೂಪ ಭಯಾನಕವಾದುದು. ಈಕೆಯೂ ಪ್ರಾಣವನ್ನೆಲ್ಲ ಬೇಡುತ್ತಾಳೆ. ಕಾವ್ಯದ ಪಾರಂಪರಿಕ ತಿಳುವಳಿಕೆಯನ್ನು ಪ್ರಶ್ನಿಸುವ ಧೋರಣೆ ಈ ಕವನದ ಆಶಯ. ಒಪ್ಪಿಸಿದ ಜವಾಬ್ದಾರಿಯನ್ನು ಮರೆತು ಬದಲಾದ ಭೋಗಿಯಂತೆ ರಸಾಸ್ವಾದನೆಗೆ ಹೊರಟ ಕವಿಯನ್ನು ಕುರಿತು ಕ್ರಾಂತಿಕಾಳಿ 'ನಾನು, ಕೈ ಬೀಸಿ ಕರೆಯೇ ಬಾ ಪೂಜೆಗೈ ಹೃದಯ ರಕ್ತವ ಸೂಸಿ' ಎಂದು ಆಹ್ವಾನಿಸುತ್ತಾಳೆ. ಕವನ ಗುರುತಿಸಿಕೊಡುವಂತೆ ಅವಳದು ಭಯಾನಕ ರೂಪ. ಜವಾಬ್ದಾರಿಯಿಂದ ಹಿಂಜರಿದ 'ಹೆಂಬೇಡಿ'ಗೆ ಮರಣವೇ ಶಿಕ್ಷೆ ಎಂದು ಗುರುತಿಸಿದಂತೆ. ಬೇಂದ್ರೆಯವರ ಚಾಮುಂಡಿ ಕೇಳಿದಂತೆ ಕುವೆಂಪುರವರ 'ಕ್ರಾಂತಿಕಾಳಿ'ಯೂ ಬಲಿಯನ್ನೇ ಕೇಳುತ್ತಾಳೆ. ಇಲ್ಲಿ ರೌದ್ರ ರೂಪದ ಚಹರೆಯ ಅನಾವರಣವಿದೆ.

ಕುವೆಂಪು ಬರೆದ 'ಕರ್ನಾಟಕ ರಾಜ್ಯೋದಯ ಶ್ರೀಗೀತೆ' ರಾಷ್ಟ್ರ ಮತ್ತು ರಾಜ್ಯದ ಸಂಬಂಧವನ್ನು ಬಲಗೊಳಿಸುವ ಸ್ವರೂಪವನ್ನು ಹೊಂದಿದೆ. ರಾಜ್ಯೋದಯವಾದ ಹಿನ್ನೆಲೆಯಲ್ಲಿ ಅವರು ರಚಿಸಿದ ಗೀತೆ ಇದು.

ಬರಿಯ ಚದರ ಮೈಲಿಗಳಲ್ತು ಕರ್ನಾಟಕ ದೇಶ ವಿಸ್ತೀರ್ಣಂ

ನೆನೆ ನೆನೆ ಮನೋಮಯದ ಸಂಸ್ಕೃತಿಯ ಕೋಶ ವಿಸ್ತೀರ್ಣಂ

ಮರೆಯದಿರು ಚದರ ಸಂವತ್ಸರದ ಶತಮಾನಗಳ ಕಾಲ ವಿಸ್ತೀರ್ಣಂ

ಪ್ರಾಣಮಯ ಭಾವ ಪ್ರದೇಶ ವಿಸ್ತೀರ್ಣಂ (ಕರ್ನಾಟಕ ರಾಜ್ಯೋದಯ ಶ್ರೀಗೀತೆ)

'ನಮ್ಮ ಕರ್ನಾಟಕ ಬರಿಯ ದೇಶ ವಿಸ್ತೀರ್ಣಕ್ಕೆ ಸಂಬಂಧ ಪಟ್ಟುದಲ್ಲ. ಕಾಲ ವಿಸ್ತೀರ್ಣವನ್ನು ನಾವು ಪ್ರಮುಖವಾಗಿ ಭಾವಿಸುತ್ತೇವೆ. ಅದನ್ನು ಚದರ ಮೈಲಿಗಳಿಂದ ಅಳೆದರೆ ಸಾಲದು. ಚದರ ವರ್ಷಗಳಿಂದ ಗುರುತಿಸಬೇಕು. ವ್ಯಷ್ಟಿರೂಪವಾದ ವ್ಯಕ್ತಿಗಳಿಗೆ ಕೋಶಗಳಿರುವಂತೆ, ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆಯೆಂದು ಭಾವಿಸುವುದಾದರೆ ಕರ್ನಾಟಕಕ್ಕೆ ಅನ್ನಮಯ ರೂಪವಾದ ಭೂಪ್ರದೇಶವಿರುವಂತೆಯೇ ಪ್ರಾಣಮನೋಮಯ ರೂಪವಾದ ಚಿತ್ ಪ್ರದೇಶವೂ ಇದೆ' (೧೯೭೬, ಪು. ೬೯) ಈ ಮಾತುಗಳ ಮೂಲಕ ಕವಿ ನಾಡಿನ ಜನಗಳಿಗೆ ಕರ್ನಾಟಕವನ್ನು ಗ್ರಹಿಸಿಕೊಡುವ ಬಗೆ ಅನನ್ಯವಾದುದು. ಅಳೆಯಲಾಗದ ವಿಸ್ತಾರವನ್ನು ಕರ್ನಾಟಕವು ಬೇರೆ ಬೇರೆ ಸ್ವರೂಪಗಳಲ್ಲಿ ಹೊಂದಿದೆ. ಭೂವಿಸ್ತೀರ್ಣಕ್ಕಿಂತ ಮಿಗಿಲಾಗಿ ಇಲ್ಲಿ ಮನೋಮಯ ಸಂಸ್ಕೃತಿಯ ಕೋಶವಿದೆ. ಪ್ರಾಣಮಯ ಭಾವ ಪ್ರದೇಶ ವಿಸ್ತೀರ್ಣವಿದೆ. ಕರ್ನಾಟಕವನ್ನು ಗ್ರಹಿಸಬೇಕಾದ ಬಗೆಯ ಅರ್ಥಪೂರ್ಣವಾದ ಚಿಂತನೆ ಇಲ್ಲಿದೆ.

ಕನ್ನಡ ನಾಡನ್ನು ಸಂಘಟಿಸುವ ಸಂದರ್ಭದಲ್ಲಿ, ಕನ್ನಡಿಗರನ್ನು ಹೋರಾಟಕ್ಕೆ ಸಿದ್ಧಗೊಳಿಸಿ ಸ್ಫೂರ್ತಿ ತುಂಬುವ ಸಂದರ್ಭದಲ್ಲಿ ದುಸ್ಥಿತಿಯ ಸಂಕೇತವಾಗಿ ಕಾಣಿಸಿಕೊಳ್ಳುವುದು ಹಂಪೆಯ ಚಿತ್ರಣ. ಹಾಳಾದ ಹಂಪಿಯನ್ನು ಗುರುತಿಸುವ ಮೂಲಕ ನಾಡಿನ ಕುರಿತು ಗೌರವದ ಭಾವನೆಯನ್ನು ಮೂಡಿಸುವ ಪ್ರಯತ್ನವಿದು. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಹಂಪಿ ಅತ್ಯಂತ ವೈಭವದ ನಾಡಾಗಿತ್ತು. ವಾಸ್ತುಶಿಲ್ಪ, ಶಿಲ್ಪಕಲೆಯಲ್ಲಿ ವಿಶೇಷವಾಗಿ ಗುರುತಿಸಲಾದ ನಾಡು. ಇದು ಕನ್ನಡದ ಕವಿ ಶ್ರೇಷ್ಠರಿಗೆ ಕಾರ್ಯಕ್ಷೇತ್ರವೂ ಆಗಿತ್ತು. ಅದು ವೈಭವವನ್ನು ಕಳೆದುಕೊಂಡು 'ಹಾಳು ಹಂಪೆ'ಯಾಗಿ ಪರಿಣಮಿಸಿದಾಗ ಅದರ ದುಸ್ಥಿತಿಗೆ ಮರುಗಿದ ಕವಿ ಮನಸ್ಸು ಅದನ್ನು ಅಕ್ಷರ ರೂಪದಲ್ಲಿ ದಾಖಲಿಸಿವೆ. ಕನ್ನಡ ತಾಯಿ ದೀನಗಳಾಗಿದ್ದಾಳೆ. ಅವಳ ಇಂತಹಾ ಸ್ಥಿತಿಗೆ ತಾವೇ ಕಾರಣವೆಂಬ ಅಪರಾಧಿ ಭಾವ ಕಾಣಿಸಿಕೊಳ್ಳುತ್ತದೆ.

ನಿದ್ದೆ ಬಾರದು ಇನ್ನು ಈ ಜನ್ಮಕೆ
ಬಿದ್ದ ಹಂಪೆಯಕಂಡು ಕಣ್ಗೆಟ್ಟೆನು
ಕನ್ನಡದ ತಾಯ್ ಬೇರು ನೀರಡಿಸಿದೆ
ಹೊನ್ನು ಹೊಳೆ ಅದರ ಬಳಿ ತಾಳೊಣಗಿದೆ
ಚೆನ್ನು ಚೆಲುವಿನ ಹಂಪೆ ಹೆಳವಾಗಿದೆ
ಎನ್ನ ತಾಯ್ ಮನೆ ಧೇನು ಬರಡಾಗಿದೆ (ಹಂಪೆಗೆ)

ಇದು ಲಕ್ಷ್ಮಣರಾವ್ ಇವರ 'ಹಂಪೆಗೆ' ಎಂಬ ಕವನದ ಸಾಲುಗಳು. ಹಂಪೆ ಬಿದ್ದು ಹೋಗಿದೆಯೆಂಬ ವಿಷಾದ, ಚೆಲುವಾದ ಹಂಪೆ ಹೆಳವಾಗಿದೆಯೆಂಬ ದುಃಖ ಇಲ್ಲಿ ವ್ಯಕ್ತಗೊಂಡಿದೆ. ಇದೇ ಹಂಪಿಯ ಬಗೆಗೆ ಬೇಂದ್ರೆಯವರು,

ಹಾಳುಗಳ ಹೊರವೊಳಗೆ ಹಾಳುಗಳ ಸಾಲುಗಳು
ಬೀಳುಗಳ ಬದಿಬದಿಗೆ ಬೀಳುಗಳ ಬಾಳುಗಳು
ಕಾಳರಕ್ಕಸನ ಕಡೆಕೊಳು – ಬಾಳಕವಾದ
ನಾಡ ನಡುಮನೆಯ ಕಂಡೆ (ಹಂಪಿ – ವಿಜಯನಗರದ ದರ್ಶನ)

ಬೇಂದ್ರೆಯವರ 'ಹಂಪಿ – ವಿಜಯನಗರದ ದರ್ಶನ' ಕವಿತೆಯ ಸಾಲುಗಳಿವು. ಕವಿಯ ಪ್ರಕಾರ ಹಂಪಿಯೆನ್ನುವುದು ನಾಡಿನ ನಡುಮನೆ. ಹಂಪೆ ಹಾಳುಹಂಪೆಯಾಗಿ ಕಾಣಿಸುತ್ತದೆ. ಒಳ – ಹೊರಗೆಲ್ಲ ಪಾಳುಬಿದ್ದ ಸ್ಥಿತಿಯಿದೆ. ಕಾಲನ ಕಾಲ್ತುಳಿತಕ್ಕೆ ಸಿಕ್ಕಿ ಹಾಳಾಗಿಹೋಗಿದೆ. ವಿದೇಶಿಯರೂ ಸೇರಿದಂತೆ ಎಲ್ಲರ ಗಮನ ಸೆಳೆದಿದ್ದ ನಾಡು ಹಂಪೆ. ಇದು ಮಹಮದೀಯ ಧಾಳಿಯಿಂದಾಗಿ ನಾಶವನ್ನು ಕಂಡಿತು. ಅಳಿದು ಉಳಿದ ಅವಶೇಷಗಳು ಕನ್ನಡಿಗರ ಹೆಮ್ಮೆಯ ಸಂಕೇತವಾಗಿ ಕಾಣಿಸಿಕೊಂಡುವು.

ಬೆಳಗಾವಿಯ ಅಧಿವೇಶನದ ಸಂದರ್ಭವೊಂದನ್ನು ಶೇಖರ್ ಅವರು ನೆನಪಿಸಿಕೊಳ್ಳುತ್ತಾರೆ. 'ಅಧಿವೇಶನ ನಡೆಯುವ ಸ್ಥಳಕ್ಕೆ ವಿಜಯನಗರವೆಂದು ಹೆಸರಿಡಲಾಗಿತ್ತು. ಅಲ್ಲಿಗೆ ನೀರು ಪೂರೈಸಲು ಮಾಡಿದ ಕೆರೆಗೆ 'ಪಂಪಾಸರೋವರ' ಎಂದು ಹೆಸರಿಟ್ಟರು. ಸಮ್ಮೇಳನದ ಮಹಾದ್ವಾರವನ್ನು ಹಂಪೆಯ ಗೋಪುರದಂತೆ ನಿರ್ಮಾಣ ಮಾಡಲಾಯಿತು. ಹೀಗೆ ರಾಷ್ಟ್ರದ ಮೂಲೆ ಮೂಲೆಗಳಿಂದ ಬಂದ ಅತಿಥಿಗಳಿಗೆ ಹಂಪೆಯ ಬಗ್ಗೆ ಕುತೂಹಲ ಮೂಡುವಂತಾಯಿತು'. (೨೦೧೧ ಪು. ೮೪) ಇದೇ ಹಂಪೆ ಅನೇಕರ ಸೃಜನಶೀಲ ಶಕ್ತಿಗೆ ಸ್ಫೂರ್ತಿಯಾಯಿತು.

ಮುರಿದು ಬಿದ್ದ ಹಂಪೆ ಮತ್ತೆ ಮತ್ತೆ ಕನ್ನಡಿಗರ ಧ್ವನಿಯಾಗುತ್ತದೆ. ಕುವೆಂಪುರವರ 'ಹಂಪೆಯಲ್ಲಿ' ಕವಿತೆ ವೈಭವವೊಂದರ ನಾಶವನ್ನು ಗುರುತಿಸಿಕೊಡುತ್ತದೆ. 'ಹಂಪೆಯಿದು ಕಲಿಯುಗದ ಹಸಿಯ ಹಿರಿಮಸಣ' ಎಂದು ಆರಂಭವಾಗುವ ಈ ಕವನ ಹಂಪೆಯನ್ನು ಕಾಶಿಯಾಗಿ ಕಾಣುತ್ತದೆ. 'ಹಂಪೆ ತೆಂಕಣ ಕಾಶಿ' ಎನ್ನುವುದು ಕವಿಯ ಅಭಿಪ್ರಾಯ. ಪ್ರತಿಯೊಬ್ಬ ಕನ್ನಡಿಗನೂ ಕಂಬನಿ ಮಿಡಿಯುವ ಪರಿಸ್ಥಿತಿ ನಿರ್ಮಾಣಗೊಂಡಿದೆ. ಕನ್ನಡಿಗರ ಮನಸ್ಸು

ಆರ್ದ್ರಗೊಳ್ಳುವ ಸನ್ನಿವೇಶವನ್ನು ಕವಿ ಸೃಷ್ಟಿಸಿ ವರ್ತಮಾನದಲ್ಲಿ ಎಚ್ಚೆತ್ತುಕೊಳ್ಳಬೇಕಾದ ಸಂದೇಶವನ್ನು ಸಾರುತ್ತಾರೆ.

'ಹಂಪಿಯ ಬಂಡೆಗಳು' ಚಂದ್ರಶೇಖರ ಕಂಬಾರರ ಕವನ. ಕನ್ನಡಮ್ಮನಿಗೆ ವಿಶಿಷ್ಟವಾದ ಸುಪ್ರಭಾತ ಹಾಡಿದವರು ಕಂಬಾರರು. ಕವಿಯ ಪ್ರಕಾರ ತಾಯಿ 'ಸಾವಿರದ ಶರಣವ್ವ'.

ಪಡುಗಡಲ ತೆರೆಗಳಲಿ ಪಾದತೊಳೆದವಳೆ
ಬೆಟ್ಟ ಬಯಲುಗಳನ್ನು ತೊಟ್ಟು ನಿಂತವಳೆ
ಮಲೆನಾಡ ಶಿಖರದಲಿ ಮಳೆಬಿಲ್ಲ ಮುಡಿದವಳೆ
ಅವ್ವಾ ಅಂದಾಗೊಮ್ಮೆ ಸಾಕಾರಗೊಂಬವಳೆ
ನಗೆ ಮೊಗದ ಜಗದಂಬೆ ಬೆಳಕಿನ ತಾಯೆ (ಕನ್ನಡ ತಾಯಿಯ ಸುಪ್ರಭಾತ)

ಅಲಂಕೃತಗೊಂಡ ಕನ್ನಡ ತಾಯಿಯ ಚಿತ್ರ ಕಣ್ಮುಂದೆ ನಿಲ್ಲುತ್ತದೆ. ಹಂಪೆಯ ಬಂಡೆಗಳು ಅಲ್ಲಿಯ ಸ್ಥಿತಿಗತಿಯನ್ನು ಸೂಚಿಸುವ ಕವನ. 'ಅರಳಲು ಕಾತರಿಸಿರುವ ಕತೆಗಳು, ಸವೆದು ಸವೆದು ಲಿಂಗವೂ ಆಗದ ಲಿಂಗಕ್ಕೆ ಅಂಗವೂ ಆಗದ ನಿಸ್ಸಂಗಿಗಳು ಈ ಬಂಡೆಗಳು' ಎನ್ನುತ್ತಾ ಇವು ಚರಿತ್ರೆಯಲ್ಲುರಿದ ದುರಾಸೆಗಳು ಎಂಬುದಾಗಿ ಗುರುತಿಸುತ್ತಾರೆ.

ವಿಜಯನಗರ ಸಾಮ್ರಾಜ್ಯವನ್ನು ಅದರ ವೈಭವವನ್ನು ನೆನಪಿಸಿಕೊಳ್ಳುವ ಬಗೆ ಅಡಿಗರ 'ವಿಜಯನಗರದ ನೆನಪು' ಕವನದ ವಸ್ತು. ನಾಡಿನ ಧೀರ ಗಂಭೀರತೆಯನ್ನು, ತತ್ವಸತ್ವದ ಉನ್ನತಿಯನ್ನು ನೋಡಬೇಕೆಂಬ ಕರೆ ಇಲ್ಲಿದೆ. ವಿಸ್ತಾರವಾದ ಸಾಮ್ರಾಜ್ಯ ಕವಿಯ ಕಣ್ಣಿಗೆ ಕಾಣುವುದು,

ನಮ್ಮ ಹೆಮ್ಮೆಯ ಮಕುಟ, ಗಂಡುತನದೇರಾಟ
ನಮ್ಮ ಸಂಸ್ಕೃತಿಕಲೆಗಳೊಂದು ಸವಿಯೂಟ
ನಮ್ಮ ಬೆಳ್ವಸದ ಗುಡಿ, ಸಾಹಸದ ತುತ್ತ ತುದಿ
ನಮ್ಮ ಸ್ವತ್ವದ ಸತ್ವದುರಿ ವಿಜಯನಗರಿ (ವಿಜಯನಗರದ ನೆನೆಪು)

ಪರಂಪರೆಯನ್ನು ಗೌರವಿಸುವ ಕನ್ನಡ ಮನಸ್ಸು ಎಲ್ಲಾ ಕಾಲ ಘಟ್ಟದಲ್ಲಿ ಕಾಣುವಂತದ್ದು. ಹೊಸಗನ್ನಡದ ಕವಿಗಳೂ ಇದರಿಂದ ಹೊರತಾಗಿಲ್ಲ. ಪರಂಪರೆಯ ಕಾವ್ಯಗಳೂ ಆಧುನಿಕರ ಮೇಲೆ ಪ್ರಭಾವ ಬೀರುತ್ತವೆ. ಕೃತಿಯ ಒಳಗಡೆ, ಆಯ್ಕೆ ಮಾಡಿಕೊಂಡ ವಸ್ತು, ಅದರ ಶೈಲಿ, ಮುಂತಾದವುಗಳಲ್ಲಿ ಸತ್ವವಿಲ್ಲದಿದ್ದರೆ ಯಾವುದೇ ಕೃತಿ ಅಥವಾ ಕವಿ ಸ್ಮರಣೀಯನಾಗುವುದಿಲ್ಲ. ಬಹುಶಃ ಆಧುನಿಕ ಕವಿಗಳೆಲ್ಲ ಪದೇ ಪದೇ ನೆನಪಿಸಿಕೊಳ್ಳುವುದು ಪಂಪ, ರನ್ನ, ಕುಮಾರವ್ಯಾಸ,

ಲಕ್ಷ್ಮೀಶ ಮುಂತಾದವರನ್ನು. ಬೇಂದ್ರೆ, ಕುವೆಂಪು ಮೊದಲಾದ ಕವಿಗಳು ಇವರ ಕಾವ್ಯಗಳನ್ನು ಪುನರ್ ವ್ಯಾಖ್ಯಾನಿಸುವ ಕೆಲಸವನ್ನು ಮಾಡಿದ್ದಾರೆ. ಪರಂಪರೆಯ ಕೃತಿಯೊಂದು ನಂತರದ ಕವಿಗಳ ಮೇಲೆ ಪ್ರಭಾವ ಬೀರಬೇಕಾದರೆ ಆ ಕೃತಿಯೊಳಗಿನ ಸತ್ವ ಮತ್ತು ಶಕ್ತಿ ಎರಡೂ ಅಗಾಧವಾಗಿರಬೇಕು. ಕನ್ನಡದ ಓದುಗರು ಸಾಹಿತ್ಯಕ್ಕೆ ಪ್ರವೇಶ ಪಡೆದುಕೊಳ್ಳುವುದು ಪರಂಪರೆಯ ಪಠ್ಯಗಳ ಅಧ್ಯಯನದಿಂದ.

ಪ್ರಾಚೀನ ಕವಿಗಳನ್ನು ಸ್ಮರಿಸಿಕೊಳ್ಳುವುದರ ಮೂಲಕ ಆಧುನಿಕ ಕನ್ನಡ ಕವನಗಳು ನಾಡು – ನುಡಿಯನ್ನು ಪ್ರತಿನಿಧೀಕರಿಸಿವೆ. ಕೆಲವು ಉದಾಹರಣೆಗಳ ಮೂಲಕ ಅವುಗಳನ್ನು ಗಮನಿಸಬಹುದಾಗಿದೆ.

ಅವಿದ್ಯೆ, ಅಸಮಾನತೆ, ಜಾತೀಯತೆ ಮುಂತಾದ ಸಂಗತಿಗಳು ಯಾವುದೇ ನಾಡಿನ ಅವನತಿಗೆ ಕಾರಣವಾಗುವ ಮಹಾದೋಷಗಳು. ಇಂತಹಾ ಪಿಡುಗುಗಳನ್ನು ನಿವಾರಿಸುವ ಪ್ರಯತ್ನವನ್ನು ಸಾಹಿತ್ಯದ ಮೂಲಕ ಮಾಡಿದ ಕವಿಗಳು ಕನ್ನಡ ನಾಡಿನ ಹೃದಯವಂತರು.

**ಕವಿಗಳ ಮೂಲಕ ಗ್ರಹಿಸಿದ ನಾಡು**

ಕನ್ನಡ ನಾಡು ಅನೇಕ ಹೃದಯವಂತ ಕವಿಗಳಿಗೆ ಜನ್ಮ ನೀಡಿದೆ. ಕನ್ನಡ ತಾಯಿ ಧನ್ಯತೆಯನ್ನು ಅನುಭವಿಸುವಂತಹ ಕಾವ್ಯ ರಚನೆ ನಾಡಿನಲ್ಲಿ ನಡೆದಿದೆ. ಅದರಲ್ಲೂ ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶರು ಜನಮಾನಸದಲ್ಲಿ ನೆಲೆ ನಿಂತವರು. ಪಂಪ ರನ್ನನು ಪಂಡಿತ ಮಂಡಳಿಗೆ ಪ್ರಿಯರಾದರೆ ಉಳಿದಿಬ್ಬರು ಗಮಕ ಕಲೆಯ ಮೂಲಕ ಮನೆ ಮನೆಗಳಲ್ಲಿ ಇಂದಿಗೂ ನಲಿಯುತ್ತಿರುವವರು. ಕನ್ನಡ ತಾಯಿಯ ಇಂತಹಾ ಸುಪುತ್ರರು ಹೊಸಗನ್ನಡದ ಕವಿಗಳ ಬಾಯಿಯಲ್ಲೂ ಕುಣಿದಾಡಿದ್ದಾರೆ. ಈ ಹಿನ್ನೆಲೆಯಿಂದ 'ಕನ್ನಡಿಗರ ತಾಯಿ' 'ರನ್ನ ಮಹಾಕವಿಗೆ' 'ಮಹಾಕವಿ ಕುಮಾರವ್ಯಾಸನಿಗೆ', 'ಕನ್ನಡದ ಬಾವುಟ', 'ಜೈಭಾರತ ಜನನಿಯ ತನುಜಾತೆ', 'ನೀ ಮೆಟ್ಟುವ ನೆಲ', 'ಕುಮಾರವ್ಯಾಸ', 'ಕನ್ನಡವೆಂದರೆ', 'ಕನ್ನಡ ಕುಲ' ಮೊದಲಾದ ಕವನಗಳನ್ನು ಅಧ್ಯಯನ ಮಾಡಬಹುದು.

ಗೋವಿಂದ ಪೈಯವರ 'ಕನ್ನಡಿಗರ ತಾಯಿ' ಜನಪ್ರಿಯ ಕವಿತೆ. 'ತಾಯೆಬಾರ ಮೊಗವ ತೋರ ಕನ್ನಡಿಗರ ಮಾತೆಯೆ ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ' ಎಂದು ಆರಂಭವಾಗುವ ಈ ಕವನ ಕನ್ನಡಿಗರ ಹೃದಯ ಕಮಲದಲ್ಲಿ ಸದಾ ಮಾರ್ದನಿಸುತ್ತಾ ಗೌರವವನ್ನು ಪಡೆದುಕೊಂಡಿದೆ. ಜನ್ಮದಾತೆಯನ್ನು ಸ್ತುತಿಸುವ ಮತ್ತು ಸಾಕ್ಷಾತ್ಕರಿಸಿಕೊಳ್ಳುವ

ಪರಿಕಲ್ಪನೆ ಇಲ್ಲಿದೆ. ಅಲ್ಲದೆ ನಾಡಿನ ಇತಿಹಾಸ, ಪರಂಪರೆ, ಸಂಸ್ಕೃತಿ, ವೈಭವಗಳ ದಾಖಲೆ ಇಲ್ಲಿದೆ. ಪರಿಪರಿಯ ಮರಗಳಿಂದ, ತರತರದ ಲತೆಗಳಿಂದ, ನದಿ, ನಗರ, ಖಗ-ಮೃಗಗಳಿಂದ ಶೋಭಾಯಮಾನವಾದ ನಾಡು. ಕವಿಗಳಿಗೂ ಜನ್ಮ ನೀಡಿದ ಧನ್ಯತೆಯನ್ನು ಪಡೆದಿದೆ. ಕವಿ ಈ ಕವನ ರಚಿಸಿದ ಸಂದರ್ಭವನ್ನು ಗಮನಿಸಿದರೆ, ದೇಶಪ್ರೇಮ, ದೇಶಭಕ್ತಿ ಕೋಟ್ಯಂತರ ಜನರ ಹೃದಯದಲ್ಲಿ ನೆಲೆ ನಿಂತ ಸಂದರ್ಭ. ಭಾರತಾಂಬೆ ಮತ್ತು ಕನ್ನಡಾಂಬೆಯನ್ನು ಏಕಕಾಲಕ್ಕೆ ಸ್ತುತಿಸುವ ರೀತಿ ಕಾಣಿಸಿಕೊಂಡಿದೆ. ಕನ್ನಡ ತಾಯಿ ನಮ್ಮ ತಪ್ಪನ್ನು ಮನ್ನಿಸಿ ಪ್ರೀತಿಯಿಂದ ನಮ್ಮನ್ನು ಆಳಬೇಕಾದವಳು. ಅವಳೇ ನಮ್ಮ ಬದುಕು, ತನು, ಮನ, ಧನ ಕನ್ನಡ ಎಂಬ ಅಭಿಮಾನದೊಂದಿಗೆ ಕವಿ ಪರಂಪರೆಯ ಕವಿತ್ವ ಶಕ್ತಿಯನ್ನು ನೆನಪಿಸಿಕೊಳ್ಳುತ್ತಾರೆ.

ಶರ್ವ ಪಂಪ ರನ್ನರ
ಲಕ್ಷ್ಮೀಪತಿ ಜನ್ನರ
ಪುರಂದರ ವರೇಣ್ಯರ
ತಾಯೆ, ನಿನ್ನ ಬಸಿರೆ ಹೊನ್ನಗನಿವಿದ್ಯಾರಣ್ಯರ (ಕನ್ನಡಿಗರ ತಾಯಿ)

ಪಂಪ, ರನ್ನ, ಲಕ್ಷ್ಮೀಶ, ಜನ್ನ, ಷಡಕ್ಷರಿ, ಮುದ್ದಣ, ಪುರಂದರದಾಸರೆಲ್ಲ ಕವಿಯ ಗೌರವಕ್ಕೆ ಪಾತ್ರರಾಗಿದ್ದಾರೆ. ಹಾಗೂ ಪ್ರೇರಕ ಶಕ್ತಿಗಳಾಗಿ ಪರಿಣಮಿಸಿದ್ದಾರೆ. ಪ್ರಾಚೀನ ಕವಿಗಳ ಅನನ್ಯತೆಯನ್ನು ನೆನಪಿಸಿಕೊಳ್ಳುತ್ತಾ ಪೈಯವರು ದೇಶ ಮತ್ತು ನಾಡಿನ ಕುರಿತಾದ ಪ್ರೇಮವನ್ನು ಅನಾವರಣಗೊಳಿಸುತ್ತಾರೆ.

ಬಿ.ಎಂ. ಶ್ರೀಯವರ 'ಕನ್ನಡ ಬಾವುಟ' ಕವನವನ್ನು ಈ ನಿಟ್ಟಿನಿಂದ ಗಮನಿಸಿಕೊಳ್ಳಬಹುದು. ಕನ್ನಡ ಬಾವುಟ ಬಾನೆತ್ತರಕ್ಕೆ ಏರಿ ಹಗೆಯ ಬೀಡು ಹಾಳು ಸುರಿಯಬೇಕೆಂಬ ಆಶಯ ಈ ಕವನದಲ್ಲಿದೆ. ಕನ್ನಡಾಂಬೆಯ ಮಕ್ಕಳು ಚೆನ್ನಾಗಿ ಬದುಕಿದವರು.

ಪಂಪನೋ, ರನ್ನನೋ, ಬಸವನೋ, ಮಾಧವನೋ
ಆ ಅಕ್ಕಮಹಾದೇವಿ, ನಾರಣಪ, ಚಿಕದೇವ (ಕನ್ನಡ ಬಾವುಟ)

ಇದು ಶ್ರೀಯವರು ನೆನಪಿಸಿಕೊಳ್ಳುವ ಕವಿ ಬಳಗ. ಇವರೆಲ್ಲ ಕನ್ನಡ ತಾಯಿಯ ಗರ್ಭದಲ್ಲಿ ಜನಿಸಿ ಚೆನ್ನಾದ ಬದುಕನ್ನು ಕಟ್ಟಿಕೊಂಡವರು. ಕನ್ನಡ ಸಾಹಿತ್ಯದ ಶ್ರೀಮಂತಿಕೆಗೆ ಸಾಕ್ಷಿಯಾದವರು. ನಂತರದ ಕವಿಗಳಿಗೆ ದಾರಿಯನ್ನು ಹಾಕಿಕೊಟ್ಟ ಪಂಪ ರನ್ನಾದಿಗಳು ಯಾವ ಪಟ್ಟಿಯಿಂದಲೂ ಹೊರಗುಳಿದಿಲ್ಲವೆಂಬುದನ್ನು ಗಮನಿಸಬಹುದು. ಅಕ್ಕಮಹಾದೇವಿಯೂ ಇಲ್ಲಿ ಸೇರ್ಪಡೆಗೊಳ್ಳುತ್ತಾಳೆ.

ಕುಮಾರವ್ಯಾಸ ಜನಮನ್ನಣೆಗೆ ಪಾತ್ರನಾದ ಕವಿ. ಗೋವಿಂದ ಪೈ ಮತ್ತು ಕುವೆಂಪು ಕವನಗಳ ಮೂಲಕ ಈ ಕವಿಗೆ ಗೌರವವನ್ನು ಸಲ್ಲಿಸಿದ್ದಾರೆ. ಭಾಮಿನಿ ಷಟ್ಪದಿಯಲ್ಲಿ ಕೃತಿ ರಚಿಸಿದ ಹಿರಿಮೆ ಕುಮಾರ ವ್ಯಾಸನದು. ಇದೇ ಷಟ್ಪದಿಯಲ್ಲಿ ಪೈಯವರು 'ಮಹಾಕವಿ ಕುಮಾರವ್ಯಾಸನಿಗೆ' ಎಂಬ ಕವನವನ್ನು ರಚಿಸಿದ್ದಾರೆ. ಪೈಯವರ ಪಾಲಿಗೆ ಈತ ಮಹಾಕವಿ ಮಾತ್ರವಲ್ಲ, ಕವಿಗಳ ಕವಿ.

ಪಂಪನಲಿ ಬನವಾಸಿ ದೇಶದ ಸೊಂಪ,
ರನ್ನನೊಳು ಚಾಲುಕ್ಯರ ಅಲಂಪು
ಲಕ್ಷ್ಮೀಶನಲಿ ಹಂಪೆಯನಾಳ್ದವರ ಪೆಂಪನ್ನು (ಮಹಾಕವಿ ಕುಮಾರವ್ಯಾಸನಿಗೆ)

ಗುರುತಿಸಿದ ಕವಿ 'ಅಖಿಲ ಕನ್ನಡದಿಂಪು ನಿನ್ನಯ ಭಾರತದಿ ಮೆಯ್ಯಂ ಪಡೆವೊಲೇಂ ನೆಳಲನಿಕ್ಕಿತೆ ಬೇರೆ ಭಾರತದಿ?' ಎಂದು ಪ್ರಶ್ನಿಸುವುದರೊಂದಿಗೆ ಸಮಗ್ರ ಭಾರತ ಕುಮಾರವ್ಯಾಸನಲ್ಲಿ ಮರುಹುಟ್ಟು ಪಡೆದದ್ದನ್ನು ಗುರುತಿಸುತ್ತಾರೆ. ಹಾಗಾಗಿಯೇ 'ಕನ್ನಡದ ಶಾರದೆಯೆ ಕನ್ನಡವಕ್ಕಿಯೊಲು ಬೆಸಲಾದಳೆ ನಿನ್ನ?' ಎಂಬ ಕುತೂಹಲ ಕವಿಗೆ. ಇನ್ನು ಕವಿಯ ಕಾವ್ಯರಚನಾ ರೀತಿ ಪೈಯವರ ಮಾತುಗಳಲ್ಲಿ ಹೀಗಿದೆ.

ನಿಡುಗತೆಯೊ ಬಾನೆಡೆಯೊ? ಬೆಡಗಿನ
ನುಡಿಯ ಠೀವಿಯೊ ಗುಡುಗೊ? ಬಣ್ಣದ
ಮಿಡುಕೊ ಮಿಸುಕುವ ಮಿಂಚೊ? ಕವಿತಾರಸವೊ ತನಿಮಳೆಯೊ?
ತಡವರಿಯುವರ್ಥ ಪ್ರವಾಹವೋ
ಮಡಲ್ವ ನಿರತೆಯೊ ಹಸುರ ನೆರತೆಯೋ
ನಡೆನಲಿವ ಮನ್ಮನವೊ ಸೋಗೆಯೊ ನಿನ್ನ ಕಾವ್ಯದಲಿ?

(ಮಹಾಕವಿ ಕುಮಾರವ್ಯಾಸನಿಗೆ)

ವಿಸ್ತಾರವಾದ ಭಾರತ ಕಥೆ, ಗುಡುಗಿನಂತಿರುವ ಬೆಡಗಿನ ನುಡಿ, ಮಿಂಚಿನಂತಿರುವ ಬಣ್ಣದ ಮಿಡುಕು, ತನಿ ಮಳೆಯಂತಿರುವ ಕವಿತಾರಸ, ಪ್ರವಾಹದಂತಿರುವ ತಡೆವರಿಯುವರ್ಥ, ಅದಕ್ಕೆ ಶರಣಾಗಿ ನಲಿಯುವ ಮನಸ್ಸು – ಇದು ಕುಮಾರವ್ಯಾಸ ಕಂಡರಿಸಿದ ಭಾರತ ಕಥೆಯ ನೆಲೆ. ಅವನದೇ ಭಾಷೆ, ಛಂದಸ್ಸಿನಲ್ಲಿ ಪೈಯವರು ಅದನ್ನು ಪುನರ್ನಿರ್ಮಾಣ ಮಾಡಿದ್ದು ವಿಶೇಷ. ಪೈಯವರ ಇಡೀ ಕವನದಲ್ಲಿ ಪ್ರಶ್ನೆಗಳಿವೆ. ಕರ್ಣಾಟ ಭಾರತ ಕಥಾಮಂಜರಿಯನ್ನು ಮತ್ತೆ ನೆನಪಿಸುವ ಶಕ್ತಿ ಈ ಕವನಕ್ಕೆ ಪ್ರಾಪ್ತವಾಗಿದೆಯೆಂದರೆ ಉತ್ಪ್ರೇಕ್ಷೆಯಿಲ್ಲ. ಇಂತಹಾ ಕವಿಯನ್ನು ಹೊತ್ತ ಕನ್ನಡತಾಯಿಯನ್ನು ಕುರಿತು ಕವಿ,

ಬಚ್ಚಿದಳೆ ಕನ್ನಡದ ಭಾರತಿ

ಮುಚ್ಚುವಳೆ ಮಧು ಮಧುರ ಕಂಠವ

ಎಂದು ಪ್ರಶ್ನಿಸುತ್ತಾ, ಅವನ ಕಾವ್ಯಕ್ಕೆ ಮಂಗಳವನ್ನು ಹಾರೈಸುತ್ತಾರೆ. ಕಾವ್ಯದ ಸತ್ವವನ್ನು ತಿಳಿಸುವುದರೊಂದಿಗೆ ಕವಿಶಕ್ತಿಯನ್ನು ಗುರುತಿಸಿಕೊಡುವ ಪ್ರಯತ್ನ ಇಲ್ಲಿದೆ. ಇದೇ ಕವಿಯ ಬಗೆಗೆ ಕುವೆಂಪು ಕವನವನ್ನು ರಚಿಸಿದ್ದಾರೆ.

ಕುಮಾರ ವ್ಯಾಸನು ಹಾಡಿದನೆಂದರೆ

ಕಲಿಯುಗ ದ್ವಾಪರವಾಗುವುದು

ಭಾರತ ಕಣ್ಣಲಿ ಕುಣಿಯುವುದು

ಮೈಯ್ಯಲಿ ಮಿಂಚಿನ ಹೊಳೆ ತುಳುಕಾಡುವುದು (ಕುಮಾರವ್ಯಾಸ)

ಎಂದು ಆರಂಭಗೊಳ್ಳುವ ಕವನ ಕುಮಾರವ್ಯಾಸನನ್ನು ಮತ್ತೆ ನೆನಪಿಸುತ್ತದೆ. ಆ ನೆನಪಿನಲ್ಲಿ ಭಾರತ ಕತೆ ಮತ್ತೆ ಮಾರ್ದನಿಗೊಳ್ಳುವ ರೀತಿಯೊಂದಿಗೆ ಕವನ ಮುಂದುವರಿಯುತ್ತದೆ. ಭಾರತ ಸಂಗ್ರಾಮದಲ್ಲಿ ಒಬ್ಬೊಬ್ಬರ ಸ್ಥಿತಿಯನ್ನೂ ಕವಿತೆ ವಿವರಿಸುತ್ತಾ, ಕಲಿಯುಗವೇ ದ್ವಾಪರವಾಗುವ ನೆಲೆಯನ್ನು ವಿವರಿಸುತ್ತದೆ. ಅತ್ಯಂತ ಚುರುಕಿನ ನಡೆಯೊಂದಿಗೆ ಆವೇಶದ ಮನಸ್ಥಿತಿ ಇಲ್ಲಿದೆ. ಪೈಯವರು ನಾಡಿಗೂ ಕವಿಗೂ ಇರುವ ಭಾವನಾತ್ಮಕ ಸಂಬಂಧವನ್ನು ನಾಜೂಕಾಗಿ ಗುರುತಿಸಿದರೆ, ಕುವೆಂಪು ಅವನ ಕಾವ್ಯದ ಫಲಶೃತಿಯನ್ನು ವಿವರಿಸುತ್ತಾರೆ. ಇಬ್ಬರ ಕಣ್ಣಲ್ಲೂ ಮನಸಲ್ಲೂ, ಹೃದಯದಲ್ಲೂ ಪ್ರತಿಷ್ಠಾಪಿಸಲ್ಪಟ್ಟವನು ಕುಮಾರವ್ಯಾಸ. ಆದರೆ ಇಬ್ಬರೂ ಕವಿಯನ್ನು ಗ್ರಹಿಸಿದ ರೀತಿಯಲ್ಲಿ ಭಿನ್ನತೆಯಿದೆ.

ಕವಿಗಳ ಮೂಲಕ ಗ್ರಹಿಸಿದ ಕನ್ನಡನಾಡು ಎಂಬ ನೆಲೆಯಲ್ಲಿ ಗಮನಿಸಬಹುದಾದ ಇನ್ನೊಂದು ಕವನವೆಂದರೆ ಕುವೆಂಪು ನಿರ್ಮಿತ 'ಜಯಹೇ ಕರ್ನಾಟಕ ಮಾತೆ'. ಈ ಗೀತೆ ದೇಶದ ಚಿತ್ರಣವನ್ನು ಮುಂದಿಡುತ್ತದೆ. ಇಲ್ಲಿ ಭಾರತ ತಾಯಿ, ಕರ್ನಾಟಕ ಮಗಳು. ಭಾರತ ಮಾತೆಯ ಮಗಳಿಗೆ ಜಯವಾಗಲೆಂಬ ಹಾರೈಕೆಯೊಂದಿಗೆ ಕವನ ಆರಂಭವಾಗುತ್ತದೆ. ರಾಷ್ಟ್ರ ಮತ್ತು ರಾಜ್ಯವನ್ನು ಏಕಕಾಲಕ್ಕೆ ಸ್ತುತಿಸುವ ಗೀತೆ ಇದಾಗಿದೆ.

ರನ್ನಷಡಕ್ಷರಿ ಪೊನ್ನ

ಪಂಪ ಲಕುಮಿಪತಿ ಜನ್ನ

ಕಬ್ಬಿಗರುದಿಸಿದ ಮಂಗಳಧಾಮ

ಕವಿ ಕೋಗಿಲೆಗಳ ಪುಣ್ಯಾರಾಮ

ವಿಶ್ವಮಾನವತೆಯನ್ನು ಸಾರಿದ ಕವಿ ಕುವೆಂಪು. ಇವರು ಸ್ಥಳೀಯ ಭಾಷೆಯ ಮೂಲಕ ವಿಶ್ವಕ್ಕೆ ಮುಖಾಮುಖಿಯಾದವರು. ನವೋದಯ ಸಾಹಿತ್ಯ ಸಂದರ್ಭದಲ್ಲಿ ನಾಡು – ನುಡಿಯ ಬಗೆಗಿನ ಚಿಂತನೆ ಇವರ ಕೃತಿಗಳ ಧೋರಣೆಯಾಗಿ ಅನಾವರಣಗೊಂಡಿವೆ. 'ನಾಡಗೀತೆಯೆಂದು ಮನ್ನಣೆ ಪಡೆದ ಈ ಗೀತೆ ಬಹುತ್ವಕ್ಕೆ ಅತ್ಯುತ್ತಮ ಉದಾಹರಣೆ. ಪರಂಪರೆಯನ್ನು ಗೌರವಿಸುತ್ತಾ, ಕವಿವರೇಣ್ಯರನ್ನು ಸ್ಮರಿಸುವ ಕೆಲಸವನ್ನು ಕುವೆಂಪು ಮಾಡಿದ್ದಾರೆ. ಕರ್ನಾಟಕವು ಕಬ್ಬಿಗರುದಿಸಿದ ಮಂಗಳಧಾಮ'. ಇಂತಹ ಕವಿಗಳನ್ನು ಹೊಂದಿದ ಭಾರತದ ತನುಜಾತೆಗೆ ಜಯವಾಗಲೆಂಬ ಹಾರೈಕೆ ಕವಿಯದು. ಎಲ್ಲೇ ಇದ್ದರೂ, ಹೇಗೇ ಇದ್ದರೂ ನಾವು ಕನ್ನಡಿಗರೆಂಬ ಪ್ರಜ್ಞೆ ಇರಬೇಕೆಂಬ ಅಪೇಕ್ಷೆಯನ್ನು ಕವಿ ವ್ಯಕ್ತಪಡಿಸುತ್ತಾರೆ. ಮೆಟ್ಟುವ ನೆಲ ಕರ್ನಾಟಕವೆಂಬ ಕವನದಲ್ಲಿಯೂ,

ಪಂಪನನೋದುವ ನಿನ್ನಾ ನಾಲಗೆ
ಕನ್ನಡವೇ ಸತ್ಯ
ಕುಮಾರವ್ಯಾಸನನಾಲಿಪ ಕಿವಿಯದು
ಕನ್ನಡವೇ ನಿತ್ಯ
ಹರಿಹರ ರಾಘವರಿಗೆ ಎರಗುವ ಮನ
ಹಾಳಾಗಿಹ ಹಂಪೆಗೆ ಕೊರಗುವ ಮನ
ಕನ್ನಡವೇ ಸತ್ಯ (ಮೆಟ್ಟುವ ನೆಲ ಅದೆ ಕರ್ನಾಟಕ)

ಪಂಪ, ಕುಮಾರವ್ಯಾಸ, ಹರಿಹರ, ರಾಘವಾಂಕರನ್ನು ಓದುವ ನಾಲಗೆ ಕನ್ನಡ. ಅವರ ಕವಿತ್ವಕ್ಕೆ ಎರಗುವ ಮನ ಕನ್ನಡ ಎನ್ನುತ್ತಾ, ಸಾಹಿತ್ಯ ಪರಂಪರೆಗೆ ಗೌರವ ಸಲ್ಲಿಸುತ್ತಾರೆ. ಕವಿಗಳನ್ನೋದುವ ಯೋಗ್ಯತೆಯುಳ್ಳ ಸಹೃದಯರನ್ನು ಕನ್ನಡಿಗರೆನ್ನುತ್ತಾರೆ ಕವಿ. ಕನ್ನಡ ಸತ್ಯ – ನಿತ್ಯವಾಗುವುದು ಇಂತಹ ಕವಿಗಳನ್ನು ಸ್ಮರಿಸಿಕೊಂಡಾಗ ಮತ್ತು ಅವರ ಶಕ್ತಿಗೆ ತಲೆಬಾಗಿದಾಗ ಎಂಬ ವಿನಮ್ರತೆ ಈ ಕವನದಲ್ಲಿ ವ್ಯಕ್ತಗೊಳ್ಳುತ್ತದೆ. ಇಂತಹಾ ಓದು ಕನ್ನಡಿಗನಿಗೆ ಸಿದ್ಧಿಸಿದಾಗ ಕನ್ನಡಕ್ಕೆ ಚಿರಂಜೀವಿತ್ವ ಎಂಬ ಆಶಯ ಇಲ್ಲಿದೆ.

'ವಿಶ್ವಭಾರತಿಗೆ ಕನ್ನಡದಾರತಿ' ಎಂಬ ಕಣವಿಯವರ ಕವನವು ಕನ್ನಡವು 'ವಿಶ್ವವಿನೂತನ, ವಿದ್ಯಾಚೇತನ, ಸರ್ವ ಹೃದಯ ಸಂಸ್ಕಾರಿ' ಎಂದು ವರ್ಣಿಸಿ, ಕನ್ನಡನಾಡು ವಿಶ್ವದಲ್ಲಿ ವಿನೂತನವಾದುದು ನುಡಿ ಸರ್ವಹೃದಯವನ್ನೂ ಸಂಸ್ಕಾರಗೊಳಿಸುವಂತದ್ದು ಎಂಬ ಕಲ್ಪನೆಯನ್ನು ಮುಂದಿಡುತ್ತಾರೆ.

ಪಂಪ, ರನ್ನ, ನೃಪತುಂಗ, ಹರೀಶ್ವರ

ರಾಘವಾಂಕ, ಸರ್ವಜ್ಞ, ಪುರಂದರ

ಕುಮಾರವ್ಯಾಸ, ರತ್ನಾಕರ, ಜನಪದ ಕಾವ್ಯ ಸಮುದ್ರವಿಹಾರಿ

ಸಾಯಣ, ವಿದ್ಯಾರಣ್ಯ, ಭಾಸ್ಕರ

ಮಹಾದೇವಿ, ಮುಕ್ತಾಯಿ

ಕಂತಿ-ಹಂಪ, ಸುಮನೋರಮೆ –ಮುದ್ದಣ ಸರಸ ಹೃದಯಿ

(ವಿಶ್ವಭಾರತಿಗೆ ಕನ್ನಡದಾರತಿ)

ನಾಡಿನ ಶಿಷ್ಟ ಮತ್ತು ಜನಪದ ಪರಂಪರೆ ಶ್ರೀಮಂತವಾದುದು. ಕರುನಾಡ ಸಂಸ್ಕೃತಿ ವಿಶ್ವಕ್ಕೆ ವಿನೂತನವಾದುದೆಂಬ ಅಭಿಮತ ಇಲ್ಲಿದೆ. 'ನಮೋದೇವಿ ನಮೋ ತಾಯಿ' ಎಂದು ಕನ್ನಡ ಮಾತೆಗೆ ನಮಿಸಿದವರು ಕವಿ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು. 'ಪಂಪ ಬಸವ ನಾರಣಪ್ಪ, ನೇಯ್ದು ಕಾವ್ಯ ಚಿತ್ರ'. ಕನ್ನಡ ತಾಯಿ ದೇಶಕ್ಕೆ ಹಿರಿಯವಳೆಂಬುದನ್ನು ಸಾರುತ್ತಿದೆಯೆಂಬ ಅಭಿಪ್ರಾಯವನ್ನು ಕವಿ ವ್ಯಕ್ತ ಪಡಿಸಿದ್ದಾರೆ. ಪಂಪನ ನುಡಿ ಮಿಂಚಿನ ಮಣಿಜ್ವಾಲೆ, ನಾರಣಪ್ಪ ಕಡೆದ ಭಾವ ಜ್ವಾಲೆಯಿಂದ ಸೌಂದರ್ಯ ಪಡೆದವಳು ಈ ತಾಯಿ. ಇದು ಸಾಟಿಯಿಲ್ಲದ ಸೌಂದರ್ಯ. ಇಂತಹಾ ತಾಯಿ ನಮ್ಮ ಭಾಗ್ಯವನ್ನು ಬೆಳೆಸಲೆಂಬ ಹಾರೈಕೆ ಇಲ್ಲಿದೆ.

ಸಿ.ಪಿ.ಕೆ.ಯವರ 'ಕನ್ನಡ ಕುಲ' ಗಮನಿಸಬಹುದಾದ ಇನ್ನೊಂದು ಕವನ. ಹೆಸರೇ ಸೂಚಿಸುವಂತೆ ಇಡೀ ಕನ್ನಡ ಕವಿಕುಲದ ಆಲೋಚನೆ ಇಲ್ಲಿದೆ. ಕವನದ ಮೂಲಕ ವೈವಿಧ್ಯತೆಯಿಂದ ಕೂಡಿದ ಒಂದು ಕನ್ನಡ ಸಾಮ್ರಾಜ್ಯ ನಿರ್ಮಾಣಗೊಂಡಿದೆ.

ಇದು ಕನ್ನಡ ಸಾಮ್ರಾಜ್ಯ; ನೃಪ ತುಂಗನು ಪರಮ ಪೂಜ್ಯ

ಅವನದೆ ಚಕ್ರಾಧಿಪತ್ಯ; ಪಂಪನಿಲ್ಲಿ ವರಅಮಾತ್ಯ (ಕನ್ನಡ ಕುಲ)

ಕವಿ ನಿರ್ಮಾಣ ಮಾಡಿದ ಕನ್ನಡ ಸಾಮ್ರಾಜ್ಯದ ಅಧಿಪತಿ ನೃಪತುಂಗನಾದರೆ, ಪಂಪ ಮಂತ್ರಿಯಾಗಿದ್ದಾನೆ. ಇಂತಹ ಕನ್ನಡ ಸಾಮ್ರಾಜ್ಯ ರಕ್ಷಕನಾಗಿ ರನ್ನನಿದ್ದಾನೆ. ಅಲ್ಲದೆ 'ಪೊನ್ನ-ನಾಗಚಂದ್ರರಿರಲು ಬಹುದೆ ಕಂಟಕ? ಇಂತಹಾ ಕವಿಶ್ರೇಷ್ಠರು ಕನ್ನಡವನ್ನು ರಕ್ಷಿಸುತ್ತಾರೆಂಬ ನಂಬಿಕೆ ಕವಿಯದು. ಕನ್ನಡದ ಆಶ್ರಮದಲ್ಲಿ ನಿರಂತರ ಕೇಳುವುದು ಬಸವಣ್ಣನ ಭಕ್ತಿವಾಣಿ. ಬದುಕಿಗೆ ಚಿರಪುಷ್ಟಿಯಾದ ಗೋಷ್ಠಿ ನಿರಂತರ ನಡೆಯುವುದರಿಂದ ದೇಗುಲದ ಕಲ್ಪನೆ ಇಲ್ಲಿದೆ. ಹರಿಹರ ಕುಮಾರವ್ಯಾಸರ ಭಕ್ತಿ ದಿವ್ಯ ದಾಸಕೂಟದ ಪರಿಮಳದಿಂದ ಕನ್ನಡದ ಬಾವುಟ ಎತ್ತರಕ್ಕೇರುವುದು.

ರಾಘವಾಂಕ ಲಕ್ಷ್ಮೀಶ ಇವರ ಪಡೆದು ಧನ್ಯದೇಶ,

ನರಹರಿ, ಚಾಮರಸ, ಗದ್ಯದ ಕವಿ ಮುದ್ದಣ

ಹೊನ್ನಮ್ಮ ಕಂತಿ – ಇವರು ಕನ್ನಡಕ್ಕೆ ಭೂಷಣ

ಸರ್ವಜ್ಞ-ಷಡಕ್ಷರಿ ಎಲ್ಲರನ್ನೂ ಕವಿ ಇಲ್ಲಿ ನೆನಪಿಸಿಕೊಂಡಿದ್ದಾರೆ. ಈ ಕವಿಗಡಣದಿಂದ ದೇಶ ಸಾರ್ಥಕ್ಯವನ್ನು ಅನುಭವಿಸಿದೆಯೆಂಬ ಅಭಿಪ್ರಾಯ ಕವಿಯದು.

ಪೂರ್ವ ಪಶ್ಚಿಮಗಳ ಮಥಿಸೆ ಮೂಡಿತು ನವನೀತ

ಕನ್ನಡವದನುಂಡಾಯಿತು ಅಮರ ಸುವಿಖ್ಯಾತ

ಇಷ್ಟೆ ಕನ್ನಡ ಕುಲ; ಇದು ಕೇವಲ ಬಿಂದುವಲ್ಲ

ಕರ್ನಾಟಕ ವಾಗ್ದೇವಿಗೆ ಹಚ್ಚಿ ಸೇವೆ ದೀವಿಗೆ

ದೀಕ್ಷೆವಹಿಸಿ ಕನ್ನಡ ಸುತರಿಹರು ಲಕ್ಷಲಕ್ಷ

ಹರಸುತೆಮ್ಮ ಕಾಪಾಡಲಿ ತಾಯ ಅಮೃತವಕ್ಷ (ಕನ್ನಡ ಕುಲ)

ಶ್ರೀ ವಿಜಯನಿಂದ ತೊಡಗಿ ಬೇಂದ್ರೆಯವರೆಗೆ ಇಡೀ ಕನ್ನಡ ಸಾಹಿತ್ಯ ಮತ್ತೆ ಇಲ್ಲಿ ಗೌರವ ಪಡೆದಿದೆ. ಇದು ಕವಿ ಗುರುತಿಸುವ ಕನ್ನಡದ ಕುಟುಂಬ. ಕನ್ನಡ ತಾಯಿಯ ಸೇವೆ ಇಲ್ಲಿ ನಿರಂತರ ನಡೆಯುತ್ತಿದೆ. ಕನ್ನಡ ಕುವರರೆಲ್ಲಾ ದೀಕ್ಷಿತರಾದರೆ, ಕನ್ನಡತಾಯಿಯ ಅಮೃತವಕ್ಷ ಎಲ್ಲರನ್ನೂ ಹರಸಿ ಕಾಪಾಡಿದರೆ ಕನ್ನಡದ ಅನನ್ಯತೆ ಉಳಿಯುತ್ತದೆ ಎಂಬ ಭಾವ ಇಲ್ಲಿದೆ. ಉಳಿದೆಲ್ಲ ಕವಿಗಳಿಂದ ಭಿನ್ನವಾಗಿ ಸಿ.ಪಿ.ಕೆ.ಯವರು ಕವಿ ಸಮೇತವಾದ ಕನ್ನಡ ನಾಡಿನ ಪ್ರತಿನಿಧೀಕರಣವನ್ನು ಇಲ್ಲಿ ಮಾಡಿದ್ದಾರೆ. ಇವರ ಪಟ್ಟಿಯಲ್ಲಿ ಪಂಪ ಶ್ರೇಷ್ಠ ಅಮಾತ್ಯ; ರನ್ನ ಶಕ್ತಿಶಾಲಿಯಾದ ಕನ್ನಡದ ರಕ್ಷಕ. ಇಲ್ಲಿ ಒಂದು ಸಾಮ್ರಾಜ್ಯದ ನೆಲೆ; ಭಕ್ತಿಯ ಆಲೋಚನೆ ಬಂದಾಗ ದೇಗುಲದ ನೆಲೆ ಕಾಣಿಸಿಕೊಂಡು, ಇದು ಒಂದು ವಿಶಿಷ್ಟ ಕವನವೆಂದು ಮನ್ನಣೆ ಪಡೆಯುತ್ತದೆ.

ಆಸೆ, ಮೋಹ, ಮಮತೆ, ಚಪಲ ಇವೆಲ್ಲ ಯಾವುದರ ಮೇಲಿರಬೇಕೆಂಬುದನ್ನು ಪಿ.ಎಸ್. ರಾಮಾನುಜಂ ಇವರ 'ಕನ್ನಡಕ್ಕೆ ನಮನ' ಎಂಬ ಕವನ ಗುರುತಿಸುತ್ತದೆ.

ರನ್ನಗಳ ಮೇಲಿರುವ ಆಸೆ

ರನ್ನನ ಮೇಲಿದ್ದಿದ್ದರೆ

ಲಕ್ಷ್ಮಿಯ ಮೇಲಿರುವ ಮಮತೆ

ಲಕ್ಷ್ಮೀಶನ ಮೇಲಿದ್ದಿದ್ದರೆ

ಕನಕದ ಮೇಲಿರುವ ಮೋಹ

ಕನಕದಾಸನ ಮೇಲಿದ್ದಿದ್ದರೆ

ಕಮನೀಯ ಕೇಶರಾಶಿಯ

ಮೇಲಿರುವ ಸೆಳೆತ

ಕೇಶೀರಾಜನ ಮೇಲಿದ್ದಿದ್ದರೆ

ಪರಸತಿಯ ಮೇಲಿನ ಚಪಲ

ಸರಸತಿಯ ಮೇಲಿದ್ದಿದ್ದರೆ

ನಾವೆಲ್ಲ ಮಾತೃಗರ್ಭಕ್ಕೆ

ಭಾರಭೂತರಾಗಿರದೆ

ಸಾರಭೂತರಾಗಿರುತ್ತಿದ್ದೆವು (ಕನ್ನಡಕ್ಕೆ ನಮನ)

ಅನಗತ್ಯವಾಗಿ ಯಾವುದನ್ನೋ ಇಷ್ಟಪಡುವುದರಿಂದ ಬದುಕು ಸಾರ್ಥ್ಯಕ್ಯವನ್ನು ಕಾಣಲಾರದು. ಸಾಹಿತ್ಯ ಉಳಿಯಬೇಕಾದರೆ, ಅದರ ಜೊತೆಗೆ ನಾಡು-ನುಡಿ ಉಳಿಯಬೇಕಾದರೆ ಮೋಹ, ಆಸೆ ಮಮತೆ ಅಗತ್ಯವಾಗಿ ಬೇಕು. ಇವನ್ನೆಲ್ಲಾ ಅಳವಡಿಸಿಕೊಳ್ಳಬೇಕಾದ ನೆಲೆಯನ್ನು ಗುರುತಿಸುವಾಗ ಕನ್ನಡ ಕವಿಗಳು ಕಾಣಿಸಿಕೊಳ್ಳುವುದರಿಂದ ಕವನ ಸಾರ್ಥಕತೆಯನ್ನು ಪಡೆಯುತ್ತದೆ.

ಪರಂಪರೆ ಎಳೆದ ಕನ್ನಡದ ತೇರನ್ನು ಆಧುನಿಕರಾದ ನಾವೂ ಎಳೆಯಬೇಕೆಂಬ ತವಕ ಈ ಕವಿಗಳ ಧ್ವನಿಯಾಗಿದೆ. ಎಳೆಯಬೇಕಾದರೆ ಪರಂಪರೆಯ ಜ್ಞಾನಬೇಕು. 'ಹಳೆ ಬೇರು- ಹೊಸ ಚಿಗುರು ಕೂಡಿದರೆ ಮರ ಸೊಬಗು' ಎಂಬಂತೆ ಪರಂಪರೆ ಮತ್ತು ಆಧುನಿಕದ ಮೇಳೈಕೆಯೊಂದಿಗೆ ನಾಡು ವಿಶ್ವಾತ್ಮಕವಾದ ನೆಲೆಗೆ ತಲುಪಬೇಕೆಂಬ ಬದ್ಧತೆಯೊಂದಿಗೆ ಕವಿಗಳು ಕಾವ್ಯ ರಚನೆ ಮಾಡಿದ್ದಾರೆ. ಇದು ಆಧುನಿಕ ಕವಿಗಳು ನಾಡನ್ನು ಪ್ರಾಚೀನ ಕವಿಗಳ ಮೂಲಕ ಪ್ರತಿನಿಧೀಕರಿಸಿದ ಬಗೆಯಾಗಿದೆ.

ರಾಷ್ಟ್ರೀಯತೆ ಮತ್ತು ಕನ್ನಡದ ಅನನ್ಯತೆಯನ್ನು ಕನ್ನಡಿಗರಿಗೆ ತಿಳಿಯಪಡಿಸುವ ಅನಿವಾರ್ಯತೆಯಿದ್ದಾಗ ಇಂತಹ ವೈಭವೀಕರಣದ ನೆಲೆ ಅಗತ್ಯವಾಗುತ್ತದೆ. ಪರಂಪರೆಯ ಕವಿವರೇಣ್ಯರ ಸಾಧನೆ ಆಧುನಿಕರಿಗೆ ಸ್ಫೂರ್ತಿಯಾಗುತ್ತದೆ. ಕನ್ನಡ ಸಾಹಿತ್ಯವನ್ನು ಬೆಳೆಸಿದ ವಿವಿಧ ಕವಿಗಳನ್ನು ಪ್ರಸ್ತಾಪಿಸುವುದರೊಂದಿಗೆ ಸಾಹಿತ್ಯ ಪ್ರೇಮ, ಭಾಷಾ ಪ್ರೇಮವನ್ನು ಮೂಡಿಸಬೇಕಾದರೆ

ಇದು ಅನಿವಾರ್ಯವಾಯಿತು. ಈ ಕೆಲಸವನ್ನು ಹೊಸಗನ್ನಡದ ಕವಿಗಳು ಶ್ರದ್ಧೆಯಿಂದ ಮಾಡಿದ್ದಾರೆನ್ನಬಹುದು.

**ಭೌಗೋಳಿಕ ಪ್ರತಿಮೆಗಳು**

ಶತಮಾನದ ಕವಿಗಳ ಕೃತಿಗಳ
ರಾಜರ ಸಂತರ ಜನ ಸಾಮಾನ್ಯರ
ಹೊಳೆಗಳ, ಗುಡಿಗಳ ಹಸಿರಿನ, ಉಸುರಿನ
ಸತ್ವದ ಹಿನ್ನೆಲೆಗೀ ಹೆಸರು (ಕನ್ನಡ ರಾಜ್ಯೋದಯ)

ಇದು ಜಿ.ಎಸ್.ಎಸ್. ಅವರ 'ಕನ್ನಡ ರಾಜ್ಯೋದಯ' ಕವನದ ಸಾಲುಗಳು. 'ನಾಡು' ಎನ್ನುವುದು ಈ ಎಲ್ಲವುಗಳ ಸಂಗಮ. ಇಂತಹಾ ನಾಡನ್ನು ಬೇರೆ ಬೇರೆ ಆಲೋಚನೆಗಳ ಮೂಲಕ ಗ್ರಹಿಸುವ ಕೆಲಸವನ್ನು ಕನ್ನಡದ ಕವಿಗಳು ಮಾಡಿದ್ದಾರೆ. ಅದರಲ್ಲಿ ಭೌಗೋಳಿಕ ಸಂಗತಿಯೂ ಒಂದು. ಯಾವುದೇ ಒಂದು ನಾಡನ್ನು ಪರಿಭಾವಿಸುವಾಗ ಭೂಗೋಳದ ಒಂದು ನಕ್ಷೆ ಕಣ್ಣ ಮುಂದಿರುತ್ತದೆ.

ಭೌಗೋಳಿಕ ಸಂಗತಿಯೆಂದರೆ ಬರೀ ನದಿ ಮಾತ್ರವಲ್ಲ; ಪ್ರಕೃತಿಯ ಎಲ್ಲ ಆಲೋಚನೆಗಳೂ ಈ ವರ್ತುಲದೊಳಗೆ ಸೇರಿ ಹೋಗುತ್ತವೆ. ಈ ಹಿನ್ನೆಲೆಯಿಂದ ಕೆಲವು ಕವನಗಳನ್ನು ಗಮನಿಸಬಹುದು. ಬಿ.ಎಂ. ಶ್ರೀಯವರ 'ಕನ್ನಡ ತಾಯ ನೋಟ' ಕವಿ ಕನ್ನಡ ನಾಡನ್ನು ಸುತ್ತಿ ಬಂದ ಬಗೆಯನ್ನು ವಿವರಿಸುತ್ತದೆ. ಇದು ಕವಿಯ ಪವಿತ್ರ ಯಾತ್ರೆ. ಈ ಯಾತ್ರೆಯಲ್ಲಿ ನಾಡು ಕವಿಗೆ ಕಂಡದ್ದು ಚಿನ್ನದ ನಾಡಾಗಿ. ಒಲುಮೆಯ ನಾಡಾಗಿ, ಚೆಲುವು ಚೆಲ್ಲುವ ನಾಡಾಗಿ. 'ಕಾವೇರಿಯಿಂದಮಾ ಗೋದಾವರಿಯವರೆಗೆ ಚಾಚಿರುವ ನಾಡು' ಎಂಬುದಾಗಿ ಅದರ ನಕ್ಷೆಯನ್ನು ಶ್ರೀಯವರು ಗುರುತಿಸಿದ್ದಾರೆ. ಎರಡು ನದಿಗಳ ಮೂಲಕ ನಾಡನ್ನು ಗುರುತಿಸುವ ಪ್ರಜ್ಞೆ ಶ್ರೀವಿಜಯನಿಂದ ಆರಂಭಗೊಂಡಿತ್ತು. ಶ್ರೀಯವರ ಗುರುತಿಸುವಿಕೆಯೂ ಅದನ್ನು ಅನುಸರಿಸಿಯೇ ಇದೆ. ನಾಡಿನ ಸೌಂದರ್ಯ ಕವಿಯನ್ನು ವಿಶೇಷವಾಗಿ ಆಕರ್ಷಿಸಿದೆ.

'ಮೆಲ್ಲ ಮೆಲ್ಲನೆ ತೇಲಿ, ಆಳದಲಿ ಮಲೆಯೆಡೆಯೊಳಲುಗದೆಯೆ ಅಲುಗಿ, ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಳಂಗೆಡೆವ ನೀರ್. ಬೀಳಬೆಳ್ಪು' (ಕನ್ನಡ ತಾಯ ನೋಟ) ಎನ್ನುತ್ತಾ, ಎತ್ತರದಿಂದ ಧುಮುಕುವ ನೀರ ನೆಲೆಯನ್ನು ವರ್ಣಿಸುತ್ತಾರೆ. ಈ ಚೆಲುವನ್ನು ಸವಿಯದವರಾರು? ಇಂತಹ ಪ್ರಕೃತಿಯ ಅಚ್ಚರಿಗೆ ಮಣಿಯದವರಾರು? ಎನ್ನುವುದು ಕವಿಯ ಪ್ರಶ್ನೆ.

ಭೌಗೋಳಿಕವಾಗಿ ಕರ್ನಾಟಕವನ್ನು ಕರಾವಳಿ ಪ್ರದೇಶ, ಸಹ್ಯಾದ್ರಿ ಪರ್ವತದ ಪ್ರದೇಶ, ಮಲೆನಾಡು ಪ್ರದೇಶ, ಉತ್ತರ ಬಯಲು ಪ್ರದೇಶ, ದಕ್ಷಿಣ ಬಯಲು ಪ್ರದೇಶವೆಂದು ವಿಂಗಡಿಸಿಕೊಳ್ಳಬಹುದು. ಈ ಪ್ರದೇಶಗಳಲ್ಲೆಲ್ಲ ಸಾಂಸ್ಕೃತಿಕ, ಐತಿಹಾಸಿಕ ಪರಂಪರೆಯನ್ನು ಸಾರುವ ಪಟ್ಟಣಗಳಿವೆ. ಶ್ರೀಯವರ 'ಕನ್ನಡ ತಾಯ ನೋಟ'ದಲ್ಲಿ ಇವುಗಳ ಗ್ರಹಿಕೆಯಿದೆ. ವಿಜಯನಗರ ಉತ್ಸವದಲ್ಲಿ ಪಾಲ್ಗೊಳ್ಳುವ ಮುನ್ನ ಕವಿಯ ಪರ್ಯಟನೆ ನಡೆದಿತ್ತು. ಈ ಪರ್ಯಟನೆಯ ಆನಂದವನ್ನು ಕವನವಾಗಿ ರೂಪಿಸಿದ್ದಾರೆ. ಉದ್ದಕ್ಕೂ ತಾವು ಕಂಡ ಭೌಗೋಳಿಕ ವಿಶೇಷತೆಯನ್ನು ಗುರುತಿಸಿದ್ದಾರೆ. ಇಲ್ಲಿಯ ಕಪ್ಪುಮಣ್ಣು ಅವರ ಗಮನ ಸೆಳೆದಿದೆ. ಕಪ್ಪು ಎನ್ನುವುದೇ ಇಲ್ಲಿ ಅಭಿಮಾನದ ಸಂಗತಿಯಾಗಿದೆ. ಕಪ್ಪು ಬಣ್ಣ ಮತ್ತು ಕಪ್ಪು ಮಣ್ಣು ಎರಡನ್ನೂ ಕವಿ ಸಮರ್ಥಿಸಿಕೊಂಡ ಬಗೆ ಅನ್ಯಾದೃಶ್ಯವಾದುದು. ಕವಿಯ ಈ ತಿರುಗಾಟದ ಹಿಂದೆ ಒಂದು ಬಲವಾದ ಉದ್ದೇಶವಿತ್ತು. ಇದು ನಾಡಿನ ಏಕೀಕರಣದ ಸಂದರ್ಭವಾದುದರಿಂದ ಇಡೀ ನಾಡು ಒಂದು ಎಂಬ ಗ್ರಹಿಕೆ ಮೂಡಿಸುವ ದೃಷ್ಟಿಯಿಂದ ಈ ಪ್ರಯಾಣ ಔಚಿತ್ಯ ಪೂರ್ಣವೆನ್ನಬಹುದು.

ಕಾವೇರಿಯ ಯಾನ ಡಿ.ವಿ.ಜಿಯವರ 'ಶಿವನ ಸಮುದ್ರ'ದಲ್ಲಿ ಹೃದಯಂಗಮವಾಗಿ ಹರಿದಿದೆ.

ಅತ್ತಲಿತ್ತ ಸುಳಿದು ಸುತ್ತಿ ಇತ್ತಲಿತ್ತ ಮೆಲ್ಲನೊತ್ತಿ
ಅಲ್ಲಿ ಬಳುಕುತಿಲ್ಲಿ ಬಾಗಿ ಅಲ್ಲಿ ಬಳಸುತ್ತಿಲ್ಲಿ ಸಾಗಿ
ನೊರೆಯ ಸೇಸೆಗಳನ್ನು ಸೂಸಿ ತೆರೆಯ ಚವರಗಳನೆ ಬೀಸಿ
ಬಾಲೆಯಂತೆ ನಲಿದು ಕುಣಿದು ಕಾಳಿಯಂತೆ ಕನಲಿ ಮೊರೆದು

(ಶಿವನ ಸಮುದ್ರ)

ನದಿಯ ಹರಿವನ್ನು ಕಣ್ಣಿಗೆ ಕಾಣಿಸುವಂತಹ ಪದ ಬಳಕೆ, ಬಾಗಿ ಬಳುಕುವ ನದಿಯ ಲೀಲೆ, ಒಮ್ಮೆ ಬಾಲೆಯಂತೆ, ಇನ್ನೊಮ್ಮೆ ಕಾಳಿಯಂತೆ ಕಾಣಿಸುವ ಆಕರ್ಷಕ ಶೈಲಿ ಇಲ್ಲಿದೆ. ಪ್ರಕೃತಿಯೂ ಕೆಲವೊಮ್ಮೆ ಕಾಳಿಯಂತೆ ಕನಲುವ ಪರಿ ಹೊಸತೇನಲ್ಲ. ಶಿವನ ಸಮುದ್ರದಲ್ಲಿ ಕಾವೇರಿ ಧುಮ್ಮಿಕ್ಕುವ ರೀತಿಯನ್ನು ವಿವರಿಸುವ ಪ್ರಯತ್ನವಿದೆ. 'ಪರಿವಳೀ ಕವೇರತನಯೆ ಧೀರ ಜನನಿಯೆನಿಸುಂ' ಎಂದು ಮುಕ್ತಾಯವಾಗುವ ಈ ಕವನ ಭುವನ ರಚನೆ ಎಷ್ಟು ಬೆರಗು ಮೂಡಿಸುವಂತಿದೆ; ಭುವನ ಜನನಿ ಎಂತಹಾ ಚತುರಳೆಂಬುದನ್ನು ಸಾರುತ್ತದೆ.

ಕೃಷ್ಣೆ, ಭೀಮೆ, ಕಾವೇರಿ, ಗೋದಾವರಿ, ತುಂಗಭದ್ರೆಯರನ್ನು ಸ್ತುತಿಸದ ಕವಿಗಳಿಲ್ಲ. ಈ ನದಿಗಳೆಲ್ಲ ಪಾವನ ನದಿಗಳೆಂಬ ನಂಬಿಕೆ. ಇವರೆಲ್ಲ ಮೈತೊಳೆದ ನಾಡು ಕನ್ನಡ ನಾಡು

ಎಂಬುದು ಹುಯಿಲಗೋಳರ ಅಭಿಮತ. ಕುವೆಂಪು ನಾಡಗೀತೆಯಲ್ಲಿ ಕೃಷ್ಣಾ, ಶರಾವತಿಯನ್ನು ಗುರುತಿಸಿದ್ದಾರೆ. ಇವೆಲ್ಲ ಕರ್ನಾಟಕದ ಜೀವನದಿಗಳು. ಕನ್ನಡನಾಡು ಭೌಗೋಳಿಕ ನೆಲೆಯಿಂದ ಶ್ರೀಮಂತವಾಗಿರುವ ಸಂಗತಿ ತೀ.ನಂ. ಶ್ರೀಕಂಠಯ್ಯನವರ 'ಸ್ವಾಗತ' ಕವನದಲ್ಲಿದೆ.

ಪಡುಗಡಲ ತೆರೆ ಮೊಳಗಿ, ಹಲವು ಹೊಳೆಗಳು ಮಿನುಗಿ
ಸೊಬಗು ಸುಳಿಯುವ ಸುಖದ ಬೀಡಿನಿಂದ
ತುಳು ನೆರೆಯ ನಾಡಿನಿಂದ,
ವನದೇವಿಜಲದೇವಿಯರಿಗೆ ತೌರೂರೆನಿಸಿ
ಜನದ ಕಣ್ ಮನಗಳನು ಸೆಳೆದು ಸೆರೆಸಿಕ್ಕಿಸುವ
ಪ್ರಕೃತಿರಚನೆಯ ಬೆಡಗು ಬೆಡಗಿನಿಂದ
ಮಲೆನಾಡು ಕೊಡಗಿನಿಂದ (ಸ್ವಾಗತ)

ಕನ್ನಡದ ಸೇವೆಗೆ ಬಂದವರನ್ನೆಲ್ಲಾ ಕವಿ ಸ್ವಾಗತಿಸಿದ ಬಗೆ ಇಲ್ಲಿ ದಾಖಲಾಗಿದೆ. ತುಳುನಾಡು ಮತ್ತು ಕೊಡಗಿನ ಸೌಂದರ್ಯವನ್ನು ಕವಿ ವರ್ಣಿಸಿದ್ದಾರೆ. ಒಂಡೆದೆ ಕಡಲಿನ ಅಬ್ಬರವಿದ್ದರೆ, ಇನ್ನೊಂದೆಡೆ ಕಣ್ ಸೆಳೆಯುವ ಪ್ರಕೃತಿ ರಚನೆಯ ಬೆಡಗಿದೆ. ನಾವೆಲ್ಲರೂ ಕನ್ನಡತಾಯಿಯ ಗರ್ಭಸಂಜಾತರು, ಕನ್ನಡ ತಾಯಿಯ ಎದೆ ಹಾಲು ಕುಡಿದವರು. ನಮಗೆಲ್ಲಾ ಒಬ್ಬಳೇ ತಾಯಿ. ಆಕೆ ಕನ್ನಡದ ತಾಯಿ. ಈ 'ತಾಯಿ'ಯ ಕಲ್ಪನೆ ಅನನ್ಯವಾದುದು. ಕನ್ನಡಿಗರ ಕನಸು ನನಸಾಗಬೇಕಾದರೆ ಎಲ್ಲರೂ ಒಂದಾಗಬೇಕೆಂಬ ಹಂಬಲವನ್ನು ಇದು ವ್ಯಕ್ತ ಪಡಿಸುತ್ತದೆ.

ಕೆ. ಎಸ್. ನರಸಿಂಹ ಸ್ವಾಮಿಯವರ 'ಕರ್ನಾಟಕ ಗೀತೆ' ಸಿರಿಗನ್ನಡ ನಾಡಿನ ಸೌಂದರ್ಯವನ್ನು ಕಣ್ಣ ಮುಂದಿಡುತ್ತದೆ. ಸಿರಿಗನ್ನಡ ನಾಡು

ಪಡುವಣ ಕಡಲಿನ ನೀಲಿಯಬಣ್ಣ
ಹೊಳೆಗಳ ಸೆರಗಿನ ಪಚ್ಚೆಯ ಬಯಲು
ಬಿರು ಮಳೆಗಂಜದ ಬೆಟ್ಟದ ಸಾಲು
ಇಲ್ಲಿ ಅರಳದಿಹ ಹೂವುಗಳಿಲ್ಲ
ಹಾಡಲು ಬಾರದ ಹಕ್ಕಿಗಳಿಲ್ಲ (ಕರ್ನಾಟಕ ಗೀತೆ)

ಕನ್ನಡ ನಾಡಿನ ವೈಶಿಷ್ಟ್ಯವು ಕನ್ನಡದ ಕವಿಗಳ ಹೃದಯವನ್ನು ಮತ್ತೆ ಮತ್ತೆ ಮಿಡಿದಿದೆ. ಅರಳುವ ಹೂಗಳಿಂದ, ಹಕ್ಕಿಗಳಿಂದ, ಹಕ್ಕಿಗಳ ಹಾಡಿನಿಂದ ಕನ್ನಡ ನಾಡು ಧನ್ಯತೆಯನ್ನು ಪಡೆದಿದೆ. ಪರಂಪರೆಯಿಂದ ತೊಡಗಿ ಹೊಸಗನ್ನಡ ಕವನಗಳಲ್ಲೂ, ಹೂಗಳ ಪರಿಕಲ್ಪನೆ,

ಪ್ರಕೃತಿಯ ವೈಭವ, ಪ್ರಾಣಿ ಪಕ್ಷಿಗಳ ವಿಸ್ಮಯ ಮತ್ತು ಇವುಗಳಿಂದ ಮೂಡುವಂತಹ ಪರಿಸರ ಪ್ರಜ್ಞೆ, ನಾಡಿನ ಅಭಿಮಾನವನ್ನು ಸಾಹಿತ್ಯದುದ್ದಕ್ಕೂ ಗಮನಿಸಬಹುದು.

ಕನ್ನಡತಾಯಿಯ ಆಗಮನವನ್ನು ಹಾರೈಸುವ ಆಶಯ ಹೊಂದಿರುವ ಸಿದ್ಧಯ್ಯ ಪುರಾಣಿಕರ 'ತಾಯ ಬರವು' ಕವನದಲ್ಲಿ ಇಡೀ ಕರ್ನಾಟಕ ಅನಾವರಣಗೊಳ್ಳುತ್ತದೆ. ನಾಡಿನ ಪ್ರತಿಯೊಂದು ಪ್ರದೇಶಕ್ಕೂ ಅದರದೇ ಆದ ಒಂದು ವೈಶಿಷ್ಟ್ಯವಿದೆ. ಅದನ್ನು ಕವಿ ಗುರುತಿಸಿದ ಪರಿ ಸುಂದರವಾಗಿದೆ.

ಕಾಲ ತೊಳೆಯಲು ಬನ್ನಿ ಕಾವೇರಿ ಕೃಷ್ಣೆಯರೆ
ಮೈದೊಳೆಯ ಬನ್ನಿ ಓ ಭೀಮ ಗೋದೆಯರೆ
ಮಲೆನಾಡೆ ತಾ ನಿನ್ನ ಪಚ್ಚ ಪಸುರಿನ ಸೀರೆ
ಕೊಡುಗೆ ಕೊಡು ರಂಜಿಸುವ ಮಂಜುರವಿಕೆ
ಕಾರವಾರವೆ ತಾರಾ ತೋರ ಮುತ್ತಿನಹಾರ
ಮಂಗಳೂರಿದು ನಿನ್ನ ವಜ್ರದಂಗುಲಿಕೆ
ಮುಡಿಗೆ ತಾ ಮೈಸೂರೆ ಮನಸೆಳೆವ ಮಲ್ಲಿಗೆಯ
ಕೋಲಾರ ಕೊಡು ನಿನ್ನ ಚಿನ್ನದೋಲೆ
ಬೆಳವಳದ ಒಕ್ಕಲಿತಿ ಉಡಿಯಕ್ಕಿಯನು ತುಂಬು
ಹಾವೇರಿ ತಾ ನಿನ್ನ ಯಾಲಕ್ಕಿ ಮಾಲೆ
ತಿಪಟೂರೆ ತೆಂಗು ಒಡೆ ಶಿವಮೊಗ್ಗೆ ಅಡಕೆ ಕೊಡು
ಸಹ್ಯಾದ್ರಿ ಮದಗಜವೆ ಚವರಿ ಬೀಸು
ನೀಲಗಿರಿ ತೊಡೆ ನಿನ್ನ ಶ್ರೀಗಂಧ ಲೇಪವನು
ಬಳ್ಳಾರಿ ಹರಳುಗಳ ಹಾಸಿಗೆಯ ಹಾಸು (ತಾಯ ಬರವು)

ಒಬ್ಬಾಕೆ ಹೆಣ್ಣು ಶುಚಿರ್ಭೂತಳಾಗಿ ಅಲಂಕರಿಸಿಕೊಳ್ಳಬೇಕಾದ ಎಲ್ಲ ಸಾಮಗ್ರಿಗಳ ಯಾದಿ ಇಲ್ಲಿದೆ. ಅತ್ಯಂತ ಸಮೃದ್ಧವಾದ ನಾಡಿನ ಗ್ರಹಿಕೆ ಇದು. ಇಲ್ಲಿ ಇಲ್ಲದುದು ಯಾವುದೂ ಇಲ್ಲ ಎಂಬ ಭಾವ ಕವನದಲ್ಲಿ ಅಂತರ್ಗತಗೊಂಡಿದೆ.

ನಮ್ಮ ನಾಡಿನ ಕರಾವಳಿಯ ಸೊಬಗು ಸುಂದರವಾದುದು. ಅಲ್ಲಿಯ ಕಡಲಿನ ಸೊಬಗನ್ನು ವರ್ಣಿಸುವ ಗೋವಿಂದ ಪೈಯವರ 'ಕಡಲಿಗೆ' ಕವನದ ಸಾಲುಗಳು,

ಉರುಳುರುಳು, ಹೊರಳು ಹೊರಳಾಡು ನೀಲಾಂಬೋಧಿ

ಗುಡುಗಂತೆ ಗುಡುಗಾಡು। ಸಿಡಿಲಂತೆ ಸಿಡಿದಾಡು

ಜಗವನದ್ದಿಸಲೆದ್ದು ಬಾರಾ। ಅದ್ದದೆ ಜಾರಾ (ಕಡಲಿಗೆ)

ಕಡಲಿನ ಪ್ರಚಂಡ ಶಕ್ತಿಯನ್ನು ಗೋಚರ ಮಾಡುತ್ತವೆ. ಪೈಯವರು ಪ್ರಕೃತಿ ವರ್ಣನೆಗಾಗಿಯೇ ಬರೆದ ಕವಿತೆಗಳು ವಿರಳ. ಯಾಕೆಂದರೆ, ಪ್ರಕೃತಿಯನ್ನು ಇವರು ಭಗವಂತನ ಸೃಷ್ಟಿಯ ಒಂದು ಅಂಶವೆಂದು ಪರಿಗಣಿಸಿದ್ದಾರೆ. ಈ ನಾಡಿನಲ್ಲಿ ಬೀಸುವ ಗಾಳಿ, ಶ್ರೀಗಂಧದ ಪರಿಮಳವನ್ನು ಹೊತ್ತು ಮಲ್ಲಿಗೆಯ ಸುವಾಸನೆಯನ್ನು ಗರ್ಭೀಕರಿಸಿಕೊಂಡು ಬೀಸುತ್ತದೆ. ಅಲ್ಲದೆ ಕರಾವಳಿಯ ಮೀನಿನ ಗಂಧವೂ ಸೇರಿಕೊಂಡು ಬೀಸುವ ಮಂದಾನಿಲ. ಇದು ಧುಮ್ಮಿಕ್ಕಿ ಹರಿಯುವ ನದಿಗಳ ನಾಡು ಮಾತ್ರವಲ್ಲ ಪ್ರಕೃತಿಸಿರಿಯ ಅನುಪಮ ಬೀಡು. ನಾಡಿನ ಒಂದೊಂದು ಸಂಗತಿಯ ಮೂಲಕ ಆಕರ್ಷಣೀಯವಾಗಿದೆ.

ವಿ.ಸೀ.ಯವರ ಪ್ರಕಾರ ಇದು ಕಸ್ತೂರಿ ನಾಡು. 'ಕಲ್ಲರಳಿ ಹೂವಾಗಿ, ಹೂವು ತಾರಗೆಯಾಗಿ ಚೆಲುವು ಅಮರತೆಗೇರಿದ ನಾಡು'.

ತುಂಬಿ, ಗಿಳಿ, ಕೋಕಿ, ಕೊರವಂಕ, ತೇನೆ, ಬೆಳ್ಳಕ್ಕಿ

ಕೊಳಗಳಲಿ ಮಾರ್ತೊಳಗಿ, ಸುಗ್ಗಿ ಸಂತಸಗಳಿಗೆ ಸೊಕ್ಕಿ

ಚಿಗುರು ಹೂ ಹಣ್ ಸವಿದು' ಋತು ಸವಿಯನುಂಡು

ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ

ಕಣ್ಕಟ್ಟು ಮೋಹನವ ಡಾಳಿಸುವ ನಾಡು (ಕನ್ನಡ ನಾಡು)

ಹಕ್ಕಿಗಳಿಂದ, ಹೂ-ಹಣ್ಣುಗಳಿಂದ ಪ್ರಕೃತಿ ನಳನಳಿಸುವ ಚಿತ್ರಣ ಆಕರ್ಷಿಸುವಂತಿದೆ. ಸುಗ್ಗಿಯ ಸಂಭ್ರಮದಲ್ಲಿ ಇವುಗಳೆಲ್ಲ ಪಾಲುದಾರಿಕೆಯನ್ನು ಪಡೆದಿವೆ. ಮಾತ್ರವಲ್ಲ ಕೊಳ, ಹೊಳೆ, ಗಣಿ, ತೋಡು, ಯಾಲ, ಬಾವನ್ನ, ಮೆಳಸು, ರಸದಾಳಿ ಎಲ್ಲವುಗಳಿಂದ ಶೋಭಾಯಮಾನವಾದ ರೇಸಿಮೆಗೆ ನಯವಾದ ನಯದ ಬೀಡು. ಮನಮೋಹಕವಾದ ದೃಶ್ಯವೊಂದು ಕಣ್ಣ ಮುಂದೆ ನಿಲ್ಲುತ್ತದೆ. ಕನ್ನಡಿಗ ಮೆಟ್ಟುವ ನೆಲ ಕರ್ನಾಟಕವೆಂಬುದು ಕುವೆಂಪು ಅವರ ಮಾತು. ಕನ್ನಡದ ಬಗೆಗೆ ಯೋಚಿಸುವ ಮನಸ್ಸು ಯಾವ ದೇಶದಲ್ಲಿದ್ದರೂ ಸರಿ, ಅದು ಕನ್ನಡ. ಇದನ್ನು ಗುರುತಿಸುವಾಗ ಕವಿಗೆ ನೆನಪಾಗುವುದು ಹಕ್ಕಿಗಳು, ಶಿಲ್ಪಗಳು, ಜಲಪಾತಗಳು, ಕವಿಗಳು ಮತ್ತು ಮಲೆನಾಡು. ಇವೆಲ್ಲವುಗಳಿಂದ ಶೋಭಿಸುವ ಒಂದು ನಾಡಿನ ಗ್ರಹಿಕೆ ಇಲ್ಲಿದೆ.

'ನೆಲದ ಸಿರಿಯ ಸವಿಯದವನ ಬಾಳು ಬಾಳೇ ಅಲ್ಲ ಗೋಳು' ಎನ್ನುವುದು ಕವಿ ನಿಸಾರರ ಅಭಿಪ್ರಾಯ. ಅಂತೆಯೇ ಸೂರ್ಯೋದಯ, ಸೂರ್ಯಾಸ್ತ, ಬೆಳದಿಂಗಳು, ಋತುವಿಲಾಸ, ಜಲಪಾತಗಳೆಲ್ಲ ಇವರನ್ನು ಬೆರಗುಗೊಳಿಸಿವೆ. ಇವರ 'ನಿತ್ಯೋತ್ಸವ' ಕವನವನ್ನು ಗಮನಿಸಿದರೆ,

ಇತಿಹಾಸದ ಹಿಮದಲ್ಲಿನ ಸಿಂಹಾಸನ ಮಾಲೆಯಲ್ಲಿ
ಗತಸಾಹಸ ಸಾರುತಿಸುವ ಶಾಸನಗಳ ಸಾಲಿನಲ್ಲಿ
ಓಲೆಗರಿಯ ಸಿರಿಗಳಲ್ಲಿ, ದೇಗುಲಗಳ ಬಿತ್ತಿಗಳಲಿ
ನಿತ್ಯೋತ್ಸವ ತಾಯೆ ನಿತ್ಯೋತ್ಸವ (ನಿತ್ಯೋತ್ಸವ)

ಶಾಸನ, ಓಲೆಗರಿ, ದೇಗುಲ, ತುಂಗೆ, ತೆನೆ ಅದರ ಬಳುಕು, ಸಹ್ಯಾದ್ರಿ ಉತ್ತುಂಗತೆ, ತೇಗ ಗಂಧಗಳ ನಿತ್ಯಹರಿದ್ವರ್ಣದ ಕಾನನ, ಶಾಸನ, ಸಿಂಹಾಸನಗಳ ವೈಭವಪೂರ್ಣ ನೆಲೆಯೊಂದಿಗೆ ನಾಡಿನ ಸಮೃದ್ಧಿಯನ್ನು ಗುರುತಿಸಿದ್ದಾರೆ. ನಾಡನ್ನು ವಿವರಿಸುವಾಗ 'ಎಲ್ಲಿ ಎಲ್ಲಿ ರಮ್ಯ ತಾಣ, ಅಲ್ಲಿ ನಿನಗೆ ವಂದನ ಎಲ್ಲಿ ಎಲ್ಲಿ ಪುಣ್ಯಧಾಮ, ಹೂವು ದವನ ಚಂದನ' (ಕನ್ನಡ ರಾಜೇಶ್ವರಿ) ಎಂದು ಭಕ್ತಿಭಾವದಿಂದ ನೆನೆಯುತ್ತಾರೆ.

ಕವಿ ಮತ್ತು ಪ್ರಕೃತಿಗೆ ನಿಕಟವಾದ ಸಂಬಂಧವಿದೆ. ಕವಿ ತನ್ಮಯನಾಗುವುದು ಪ್ರಕೃತಿಯಲ್ಲಿ ಆ ರೀತಿ ತಾದ್ಮಾತ್ಯತೆ ಹೊಂದಿದಾಗಲೇ ಹಾರುವ ಬೆಳ್ಳಕ್ಕಿಗಳ ಸಾಲು ದೇವರು ರುಜು ಮಾಡಿದಂತೆ ಕಾಣುವುದು. ಕನ್ನಡ ಕವಿಗಳು ಪ್ರಕೃತಿಯನ್ನು ಸಾಹಿತ್ಯ ಶರೀರದ ಅಂಗವಾಗಿ ಭಾವಿಸಿದ್ದಾರೆ. ಬೇಂದ್ರೆ ಅವರಿಗೆ ಪ್ರಕೃತಿಯೆನ್ನುವುದು ಸಜೀವವಾದ ಚೈತನ್ಯದ ಚಿಲುಮೆ. ಹೂತ ಹುಣಸೆಯ ಮರ ಕೂಡಾ ಕವಿಗೆ ಕಾವ್ಯ ಬದುಕಿನ ಭಾಗವಾಗಿದೆ. ನಿಸರ್ಗ ವೈಭವವೆನ್ನುವುದು ಕವಿಗಳಿಗೆ ಉಲ್ಲಾಸವನ್ನು ಮೂಡಿಸುವ ನೆಲೆಯಾಗಿದೆ. ಗುಡ್ಡಬೆಟ್ಟಗಳು, ಹಳ್ಳಕೊಳ್ಳಗಳು, ನದಿ ಸಾಗರಗಳು, ಭೂಮಿ, ಆಕಾಶ, ಸೂರ್ಯಚಂದ್ರ, ನವಿಲಿನ ನರ್ತನ, ಕೋಗಿಲೆಯ ಗಾನ ಇವೆಲ್ಲವೂ ನಾಡಿನ ಬದುಕಿನೊಳಗಡೆ' ಸೇರಿ ಹೋಗಿ ಕವನಗಳಲ್ಲಿ ಇಣುಕು ಹಾಕಿವೆ.

**ಪೌರಾಣಿಕ ಪ್ರತಿಮೆಗಳು**

ಕನ್ನಡಿಗರಲ್ಲಿ ಕರ್ನಾಟಕತ್ವವನ್ನು ಮೂಡಿಸುವ ದೃಷ್ಟಿಯಿಂದ ಪುರಾಣದ ಪ್ರತಿಮೆಗಳನ್ನು ಬಳಸಲಾಯಿತು. ಪುರಾಣದ ಕೆಲವು ಪಾತ್ರಗಳು ಕಾವ್ಯದೊಳಗೆ ಭೂಮಿಯಲ್ಲಿ ಬದುಕನ್ನು ಕಟ್ಟಿಕೊಂಡ ಪಾತ್ರಗಳಾಗಿ ಪರಿಚಿತವಾಗುತ್ತವೆ. ಕುಮಾರವ್ಯಾಸನ 'ಕೃಷ್ಣ' ಲೀಲಾಮಯನಾದರೂ ಆತ ಎಲ್ಲರ ಜೊತೆಯಲ್ಲಿ ಬದುಕುವ ವ್ಯಕ್ತಿಯಾಗುತ್ತಾನೆ. ಜೈಮಿನಿ ಭಾರತದಲ್ಲಿಯೂ ಎಲ್ಲ ಭಕ್ತರಿಗೂ ಬದುಕಿನ ಪರಮ ಉದ್ದೇಶ ಕೃಷ್ಣನನ್ನು ಕಾಣುವುದೇ ಆಗಿದೆ. ಆಧುನಿಕ ಕವಿತೆಗಳು

ನಾಡನ್ನು ಗುರುತಿಸುವಾಗ ಅಗಸ್ತ್ಯರ ತಪದ ಮಣೆ, ಕಾವೇರಿ ತಾಯ ತವರ್ಮನೆ' (ಹುತ್ತರಿಹಾಡು) ಎಂದು ಹೇಳಿದ್ದಾರೆ. ಗಂಗೆಯನ್ನು 'ದೇವಗಂಗಾ ನದಿ' ಎಂದು ಗುರುತಿಸಲಾಗಿದೆ. ಕಾವೇರಿಯ ಉಗಮದ ಕುರಿತು ಪೌರಾಣಿಕ ಚಿಂತನೆಗಳಿವೆ. ಕವಿರಾಜ ಮಾರ್ಗದಿಂದ ತೊಡಗಿ ಅನೇಕ ಸಂದರ್ಭಗಳಲ್ಲಿ ಸಾಹಿತ್ಯದೊಳಗೆ ಕಾವೇರಿಯ ಪ್ರಸ್ತಾಪ ಕಾಣಿಸುತ್ತದೆ. ಅಷ್ಟೇ ಮುಖ್ಯವಾಗಿ ಈ ನದಿ ಕನ್ನಡದ ಅಸ್ಮಿತೆ ಎಂಬಂತೆ ದಾಖಲಾಗಿದೆ. ಯಾವುದೇ ನೀರನ್ನಾದರೂ 'ಗಂಗೆ' ಎಂದೂ, ನದಿಯನ್ನು ಪವಿತ್ರ ಎಂದೂ ಆರಾಧಿಸುವುದು ಭಾರತೀಯ ಪರಂಪರೆ.

ಕರ್ನಾಟಕವನ್ನು ಗುರುತಿಸುವಾಗ ಭಾರತಾಂತರ್ಗತವಾದ ನಾಡಾಗಿಯೇ ಗುರುತಿಸುವ ಪ್ರಯತ್ನವಿದೆ. ಆಗ ಕರ್ನಾಟಕ ಮಾತೆ 'ರಾಘವ ಮದುಸೂದನರವತರಿಸಿದ ಭಾರತ ಜನನಿಯ ತನುಜಾತೆ'ಯಾಗುತ್ತಾಳೆ. ನಾಡನ್ನು 'ರಾಜನ್ಯರಿಪು ಪರಶುರಾಮನಮ್ಮನ ನಾಡು' (ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು) ಎಂಬುದಾಗಿ ಗುರುತಿಸಲಾಗಿದೆ. ಕಪಿಲ, ಪತಂಜಲ, ಗೌತಮ ಮುಂತಾದ ಮುನಿಗಳ ಮೂಲಕ ಚೈತನ್ಯ, ಪರಮಹಂಸ ವಿವೇಕರ ಮೂಲಕ ಭಾರತಾಂತರ್ಗತ ನಾಡನ್ನು ಗುರುತಿಸಿಕೊಂಡು ನಾಡಿಗೆ ಗೌರವದ ಭಾವನೆಯನ್ನು ಮೂಡಿಸುವ ಪ್ರಯತ್ನ ಕನ್ನಡ ಕಾವ್ಯಗಳಲ್ಲಿ ನಡೆದಿದೆ.

ಗೋವಿಂದ ಪೈಯವರ 'ಕನ್ನಡಿಗರ ತಾಯಿ' ಕವನದಲ್ಲಿ ಪುರಾಣದ ಪ್ರಪಂಚ ವಿಶಿಷ್ಟವಾಗಿ ತೆರೆದುಕೊಳ್ಳುತ್ತದೆ.

ಬುಗರಿಯೀಯೆ ಶಬರಿಕಾಯೆ ರಾಮ ಇಲ್ಲಿ ಬಂದನೆ?
ಕನ್ನಡದಳ ಕೂಡಿಸಿ ಖಳ ದಶಾಸ್ಯನಂ ಕೊಂದನೆ?
ಪಾಂಡವರಜ್ಞಾತಮಿದ್ಧ
ವಲಲಂ ಕೀಚಕನ ಗೆದ್ದ
ನಾಡು ನೋಡಿದಲ್ಲವೇ!
ನಂದನಂದನನಿಲ್ಲಿಂದ ಸಂಧಿಗಯ್ದನಲ್ಲವೇ? (ಕನ್ನಡಿಗರ ತಾಯಿ)

ಪೌರಾಣಿಕ ಹಿನ್ನೆಲೆಯೊಂದಿಗೆ ನಾಡಿನ ವೈಶಿಷ್ಟ್ಯವನ್ನು ಹೇಳುವ ಪ್ರಯತ್ನ ಈ ಸಾಲುಗಳಲ್ಲಿದೆ. ಪುರಾಣದ ಪಾತ್ರಗಳನ್ನು ಕನ್ನಡನಾಡಿನ ಪಾತ್ರಗಳಾಗಿ ಕಲ್ಪಿಸಿಕೊಳ್ಳುವುದು ಸಾಹಿತ್ಯದಲ್ಲಿ ನಿರಂತರ ನಡೆದ ಪ್ರಕ್ರಿಯೆ. ಇಲ್ಲಿ ಗುರುತಿಸಿದ ಪಾತ್ರಗಳೆಲ್ಲ ನಮ್ಮ ನಾಡಿನ ಪಾತ್ರಗಳೆಂಬ ಮನೋಭೂಮಿಕೆಯನ್ನು ಇದು ಸಿದ್ಧಪಡಿಸಿಕೊಡುತ್ತದೆ. ಇವತ್ತಿಗೂ ಹಳ್ಳಿಯ ಕಡೆ

ಮುಖ ಮಾಡಿದರೆ ಎಲ್ಲೋ ಒಂದು ಕಡೆ ಪಾಂಡವರ ಕಲ್ಲು, ಭೀಮನ ಕೆರೆ, ಲಕ್ಷ್ಮಣತೀರ್ಥ ಇವೆಲ್ಲಾ ನಂಬಿಕೆಗಳು ಕಾಣಿಸುತ್ತವೆ. ಮನುಷ್ಯ ಬದುಕಿಗೂ ಪುರಾಣದ ಸಂಗತಿಗಳಿಗೂ ಭಾವನಾತ್ಮಕ ಸಂಬಂಧವನ್ನು ಈ ಮೂಲಕ ಗುರುತಿಸಲಾಗಿದೆ.

**ಸಮನ್ವಯದ ಪ್ರತಿಮೆಗಳು:**

'ಸಮನ್ವಯ' ಎನ್ನುವುದು ಭಾರತೀಯತೆಯ ಮುಖ್ಯ ಲಕ್ಷಣ. ಬಹುಭಾಷೆ, ಬಹು ಸಂಸ್ಕೃತಿ, ಇರುವ ನಾಡಿನೊಳಗಡೆ ಸಮನ್ವಯತೆಗಾಗಿ ನಿರಂತರ ಶ್ರಮಿಸಲಾಗುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಮನ್ವಯದ ಸಾಧನೆಗಾಗಿ ದೇಶ ಮತ್ತು ನಾಡಿನ ಮಧ್ಯೆ ತಾಯಿ ಮತ್ತು ಮಗಳ ಸಂಬಂಧವನ್ನು ಗುರುತಿಸಿಕೊಂಡಿರುವುದು ಮುಖ್ಯ ಸಂಗತಿ. ಸೌಹಾರ್ದತೆಗೆ, ಸಾಮರಸ್ಯಕ್ಕೆ ಭಂಗ ತರುವ ರೀತಿಯಲ್ಲಿ ಅಪಸ್ವರವೆತ್ತಬಾರದು. ಸಾಮರಸ್ಯದ ಮೂಲಕ ಸರ್ವೋದಯದ ಭಾವನೆಯನ್ನು ಪ್ರಚೋದಿಸುವುದು ಸಾಹಿತ್ಯದ ಧರ್ಮವಾಗಬೇಕು.

'ಮಲೆಯಾಳ ಮಂದ್ರ ದ್ರಾವಿಡವು ಸಾಂದ್ರ ಮಾರಾಷ್ಟ್ರ ಆಂದ್ರ ಸುತ್ತು ಮುತ್ತ ಇಗೋ ನಡುವಿನ ಕನ್ನಡ ನಾಡು ನನ್ನದು' (ನನ್ನದು  ಈ ಕನ್ನಡ ನಾಡು) ಎಂದವರು ಬೇಂದ್ರೆ. ಇದರಿಂದಾಗಿಯೇ ಕವಿ 'ಕನ್ನಡವೂ ಭಾರತವೂ ಜಗವೆಲ್ಲವೂ ಒಂದೆ' ಎನ್ನಲು ಸಾಧ್ಯವಾಗುವುದು. ಭರತಮಾತೆಯ ಮುದ್ದುಗುವರಿ ಕನ್ನಡ ತಾಯಿಯಾಗಿದ್ದಾಳೆ. ಕುವೆಂಪು ಅವರು 'ಸರ್ವಜನಾಂಗದ ಶಾಂತಿಯ ತೋಟವಾದ' ನಾಡನ್ನು 'ಭಾರತ ಜನನಿಯ ತನುಜಾತೆ'ಯಾಗಿ ಗುರುತಿಸಿದ್ದಾರೆ. ಸರ್ವೋದಯ ಮತ್ತು ಸಮನ್ವಯತೆಗೆ ಪ್ರಾಮುಖ್ಯತೆ ನೀಡಿ ರೂಪು ಪಡೆದದ್ದು ವಿಶ್ವಮಾನವ ಪರಿಕಲ್ಪನೆ. ಮತ ಮನುಜ ಮತವಾಗಿ, ಪಥ ವಿಶ್ವಪಥವಾಗಿ ಮಾನವ ವಿಶ್ವಮಾನವನಾಗಬೇಕೆಂಬುದು ವಿಶ್ವಮಾನವ ಪ್ರಜ್ಞೆಯ ಸಾರಸತ್ವ. ಸಾಮರಸ್ಯವನ್ನು ಕೆಡಿಸುವುದು ಮನಸ್ಸು, ಮಾತುಗಳು. ಇವೆರಡೂ ಶುಭ್ರವಾಗಿದ್ದರೆ ಬಹುಶಃ ಸಮನ್ವಯತೆಗೆ ಧಕ್ಕೆ ಬಾರದು. ತನ್ನಂತೆ ಪರರ ತಿಳಿಯುವ ಗುಣ ಮನುಷ್ಯರನ್ನು ಉದ್ಧರಿಸುತ್ತದೆ.

ಎರಡು ಜ್ವಲಂತ ಸಂಗತಿಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಇವೆಂದರೆ ಧರ್ಮ ಮತ್ತು ಭಾಷೆ. ಈ ಎರಡರ ಮೂಲಕ ಮನಸ್ಸು ಸಮನ್ವಯದೆಡೆಗೆ ಸಾಗುವುದು ಮುಖ್ಯ ಮತ್ತು ಅನಿವಾರ್ಯ. ಇವೆರಡೂ ಬಹಳ ಸೂಕ್ಷ್ಮ ಸಂಗತಿಗಳು. ಹಂಪನಾಗರಾಜಯ್ಯ ಅವರ ಮಾತುಗಳಲ್ಲಿ ಹೇಳುವುದಾದರೆ, 'ಧರ್ಮದ ವಿವಾದವೆಂದರೆ ಜೇನುಗೂಡಿಗೆ ಕಲ್ಲೆಸದಂತೆ, ಭಾಷೆಯ ವಿವಾದವೆಂದರೆ ಹುತ್ತಕ್ಕೆ ಕೈ ಹಾಕಿದಂತೆ' ಮನುಷ್ಯರ ಮನಸ್ಸು ತಿಳಿಯಾಗಿ ಸಮನ್ವಯದೆಡೆಗೆ ಸಾಗಿದರೆ ನಾಡು ವಿಕಾಸಗೊಂಡಂತೆಯೇ ಸರಿ. (೨೦೧೩ ಪು.೯೮)

ಶೈವ, ವೈಷ್ಣವರು, ಜೈನ, ಬುದ್ಧ, ಚಾರ್ವಾಕರು, ಸಿದ್ಧಾಂತ ದರ್ಶನಕೆ ಮಣಿಯುತಿರಲಿ, ಧರ್ಮ ಯಾವುದೇ ಇರಲಿ, ಸಮನ್ವಯದ ಹಣತೆ ನಿತ್ಯ ಬೆಳಗುತಿರಲಿ, ಭಾರತಾಂಬೆಯ ಪೂಜಿಸಲು ಎಂದೂ ಮರೆಯದಿರಲಿ. ಕೋಪತಾಪಗಳನ್ನು ಈರ್ಷ್ಯೆ ದ್ವೇಷಗಳನ್ನು ಬಿಟ್ಟು ನಾಡ ತೇರನ್ನು ಎಳೆಯುತಿರಲಿ' ಎಂಬ ಹಾರೈಕೆಯೊಂದಿಗೆ ಸಮನ್ವತೆಯ ನೆಲೆಯನ್ನು ಗುರುತಿಸಿದವರು ಹಂಪನಾಗರಾಜಯ್ಯ. (೨೦೧೩ ಪು.೧೦೦)

ಕನ್ನಡ ನಾಡು-ನುಡಿ ಬಂದಿರುವುದೇ ಸಮನ್ವಯದ ತಳಹದಿಯ ಮೇಲೆ. ನಾಡು ಎನ್ನುವುದು ಒಂದು ಕುಟುಂಬದಂತೆ. ಅದರಲ್ಲೂ ಕೂಡು ಕುಟುಂಬವೊಂದರಲ್ಲಿ ಬೇರೆ ಬೇರೆ ಮನಸ್ಸುಗಳು ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆಯ ಹೊಂದಾಣಿಕೆಯಿಲ್ಲದಿದ್ದಲ್ಲಿ ಮನೆ ಛಿದ್ರವಾದಂತೆ. ಇಂತಹ ಹೊಂದಾಣಿಕೆಗೆ ಮಾಗಿದ ಮನಸ್ಸು ಬೇಕು. ತನ್ನಂತೆ ಪರರನ್ನು ಗುರುತಿಸುವ, ಗೌರವಿಸುವ ಗುಣಬೇಕು. ಸಮನ್ವಯ ಮುಖ್ಯ ಪ್ರೇರಣೆಯಾಗಬೇಕು. ಈ ಗುಣ ನಮ್ಮಲ್ಲಿ ಅಂತರ್ಗತವಾಗಿರಬೇಕು.

ಬೇಂದ್ರೆಯವರ ಪ್ರಕಾರ ಕನ್ನಡನಾಡೆಂದರೆ 'ಜೈನರ ಕಾವ್ಯದ ಶರಣರ ವಚನದ ದಾಸರ ಹಾಡಿನದೀ ನಾಡು' ನಾನಾ ಧರ್ಮಗಳವರ ಕನ್ನಡ ಮನಸನ್ನು ಕಟ್ಟಿದ ಸಾಹಿತ್ಯ ಈ ನಾಡಿನದು. ಸಮನ್ವಯಕ್ಕೆ ಮುಖ್ಯವಾಗಿ ಬೇಕಾದದ್ದು ಕಯ್ಯಾರ ಮಾತಿನಂತೆ,

ಮನದಿ ಶುದ್ಧತೆ ಬೇಕು, ಮಾತು ಮೃದುವಿರಬೇಕು
ಜನರ ಪ್ರೀತಿಸಬೇಕು, ನೀತಿ ಬೇಕು
ಘನತೆ ಗೌರವಬೇಕು, ನಡೆನುಡಿಗಳಿರಬೇಕು (ಬುದ್ಧಿವಾದ)

ಇದು ಮಕ್ಕಳಿಗಾಗಿ ಬರೆದ 'ಬುದ್ಧಿವಾದ'ದ ಕವಿತೆಯಾದರೂ ಇಲ್ಲಿ ಎಲ್ಲರೂ ಅರ್ಥಮಾಡಿಕೊಳ್ಳಬೇಕಾದ ಬದುಕಿನ ಕೆಲವು ಗುಣಗಳಿವೆ. ಕನ್ನಡ ಭಾಷೆ ಯಾವ ಸಂಕಷ್ಟಗಳೂ ಇಲ್ಲದೆ ಸಾಗಿ ಬಂದಿದೆಯೆಂದಲ್ಲ, ಸಮನ್ವಯದ ಗುಣ ಕನ್ನಡಿಗರ ಬದುಕಿನ ನೀತಿಯಾಗಿದ್ದರಿಂದ ಬಂದ ತೊಡಕುಗಳನ್ನು ಬಗೆಹರಿಸಿಕೊಂಡಿದೆ.

ಇಂತಹಾ ಸಮೃದ್ಧವಾದ ಬಹು ಸಂಸ್ಕೃತಿಯ ನಾಡು ಸಂಕಟವನ್ನು ಅನುಭವಿಸಿದೆ. ಕನ್ನಡ ತಾಯಿ ದೈನ್ಯಾವಸ್ಥೆಯಲ್ಲಿರುವ ಚಿತ್ರಣವನ್ನು ಆಧುನಿಕ ಕವಿತೆಗಳು ಗುರುತಿಸಿಕೊಟ್ಟಿವೆ. ಈ ಹಿನ್ನೆಲೆಯಿಂದ ಬಿ.ಎಂ.ಶ್ರೀ.ಯವರ 'ಕನ್ನಡ ತಾಯ ನೋಟ' ಹಾಗೂ ಬೇಂದ್ರೆಯವರ ಕನಸಿನೊಳಗೊಂದು ಕಣಸು' ಕವನಗಳನ್ನು ಗಮನಿಸಬಹುದು.

ಬಿ.ಎಂ.ಶ್ರೀ ಯವರ ನಾಡಿನ ಅಭಿಮಾನಕ್ಕೆ ಸಾಕ್ಷಿಯಾಗಿ ನಿಲ್ಲುವ ಕವನ 'ಕನ್ನಡ ತಾಯ ನೋಟ'. ಕನ್ನಡಮ್ಮನನ್ನು ಶ್ರೀಯವರು ನೋಡಿದ ಬಗೆ ಬೇರೆ. ಇದು ವಿಭಿನ್ನವಾದ ರೂಪಕ-ಪ್ರತೀಕಗಳನ್ನು ಸೃಷ್ಟಿಸಿಕೊಂಡಿರುವ ಒಂದು ಕವಿತೆ. ಕರ್ನಾಟಕದ ದೈನ್ಯಾವಸ್ಥೆಯನ್ನು ಸಮರ್ಥವಾಗಿ ಚಿತ್ರಿಸಿದ ಕವಿತೆ. ಕನ್ನಡ ನಾಡಿನ ನಿಸರ್ಗ ಸೌಂದರ್ಯ, ಕಪ್ಪು ನೆಲದ ವಿಸ್ತಾರವನ್ನು ವರ್ಣಿಸುವಲ್ಲಿ ಕಪ್ಪು ಬಣ್ಣಕ್ಕೂ ಸೌಂದರ್ಯವನ್ನು ನೀಡಿರುವುದು ಕಾವ್ಯಕ್ಕೆ ಶೋಭೆ ನೀಡಿದೆಯೆನ್ನಬಹುದು. ಕಾರವಾರ, ಗೋಕರ್ಣ, ಉಡುಪಿ, ಮಂಗಳೂರು, ಚಾರ್ಮಾಡಿಗಳನ್ನು ಸುತ್ತಿ 'ಕನ್ನಡ ತಾಯಿ'ಯ ಒಸಗೆ ನುಡಿಯನ್ನು ಕೇಳುಗರಿಗೆ ಹೇಳಲು ಪ್ರಯತ್ನಿಸುತ್ತಾರೆ. ಈ ಒಸಗೆ ತಂದಿರುವುದು 'ತಾಯಿಯಿಂದ ಸಿರಿಯ ತಾಯಿಂದ' ತಾನು ಆಕೆಯನ್ನು ಕಣ್ಣಾರೆ ಕಂಡದ್ದಾಗಿ ತಿಳಿಸುತ್ತಾರೆ. ಕಾವೇರಿಯಿಂದ ಗೋದಾವರಿಯವರೆಗೆ ಚಾಚಿರುವ ನಾಡಿಗೆ ಕವಿಯ ಪ್ರಯಾಣ. ಹಿರಿದಾದ ಈ ಕವನದೊಳಗೆ 'ಪೆರ್ ತಾಯಿ', 'ದೇವಿ', 'ಸಾಮ್ರಾಜ್ಞಿ', 'ಭುವನೇಶ್ವರಿ', 'ಭಾರತಾಂಬೆಯ ಹಿರಿಯ ಹೆಣ್ಮಗಳು, 'ಮುತ್ತೈದೆ' ಮುಂತಾದ ರೂಪಕಗಳು ಇಲ್ಲಿ ಬಳಕೆಯಾಗಿವೆ. ನಾಡಿನ ಎಲ್ಲಾ ಸಂಗತಿಗಳನ್ನು ವಿವರಿಸುತ್ತಾ ಹಂಪೆಯ ತುಂಗಭದ್ರೆಯ ತಟದಲ್ಲಿ ಹಿರಿಯ ಮುತ್ತೈದೆಯೊಬ್ಬಳು ಎದುರಾಗುವ ಸನ್ನಿವೇಶವಿದೆ. ಆಕೆಯನ್ನು ಕವಿ ಸಹಜವಾಗಿಯೇ ಯಾರೆಂದು ಪ್ರಶ್ನಿಸುತ್ತಾರೆ.

> ಯಾರವ್ವ ನೀ ತಾಯಿ? ಏತಕೊಬ್ಬಳೇ ಕುಳಿತೆ ಕಾಡಿನಲಿ?
> ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು
> ಕಾಂತಿಗುಂದಿಹುದು

ಕವಿಯ ಪ್ರಶ್ನೆಗೆ ಸಿಗುವ ಉತ್ತರದಲ್ಲಿ ನಾಡಿನ ದಾರಿದ್ರ್ಯಾವಸ್ಥೆಯ ಚಿತ್ರಣವಿದೆ.

> ಕೇಳಣ್ಣ ನಾನೊಬ್ಬ ಹಳೆಯ ಮುತ್ತೈದೆ – ಹಿರಿದಾಗಿ
> ಬಾಳಿದವಳೊಮ್ಮೆ ಈಗ ಬಡತನ, ಬಡವೆ, ಬಡವಾದೆ
> ಬಡವಾದ ಮಕ್ಕಳನ್ನು ನೋಡಿ, ಬತ್ತಿ, ಮತ್ತಿಮ್ಮಡಿಯ
> ಸೊರಗಿನಲಿ ಬಡವಾದೆ–ಸಾವಿಲ್ಲ ನನಗೆ! (ಕನ್ನಡ ತಾಯನೋಟ)

ಎನ್ನುತ್ತಾ ಪರಿಪರಿಯಾಗಿ ತನ್ನ ದುಃಖವನ್ನು ತೋಡಿಕೊಳ್ಳುತ್ತಾಳೆ. ಈಕೆ ಕನ್ನಡ ತಾಯಿಯೇ ಆಗಿರುವುದು ಸ್ಪಷ್ಟ. ಆಕೆ ಹಿರಿದಾಗಿ ಬಾಳಿದವಳು. ತನ್ನ ವೈಭವದ ದಿನಗಳನ್ನು ನೆನಪಿಸುತ್ತಾ ಈಗ ತಾನು ಬಡವಾದದ್ದನ್ನು ಗುರುತಿಸುತ್ತಾಳೆ. ತನ್ನ ಅಕ್ಕ ತಂಗಿಯರೆಲ್ಲ ಸಮೃದ್ಧಿಯ ಬದುಕನ್ನು ಕಟ್ಟಿಕೊಂಡ ಬಗೆಯನ್ನು ಹೇಳುತ್ತಾ ಅವರೆಲ್ಲಾ 'ಪೇರೊಕ್ಕಲಾಗಿ ಪಾಡುವರು' ಆ ಪುಣ್ಯ ತನಗಿಲ್ಲ, ತನ್ನ ಮಕ್ಕಳಿಗಿಲ್ಲ ಹಬ್ಬ. ಅಲ್ಲದೆ ಸಮೃದ್ಧವಾದ ಯಾವ ಬದುಕೂ ತನಗಿಲ್ಲ ಎಂಬುದನ್ನೂ

ಅತ್ಯಂತ ಸಂಕಟದಿಂದ ಹೇಳುತ್ತಾಳೆ. ಕೂಡಿ ಬಾಳುವ ತನ್ನ ಮಕ್ಕಳ ಬದುಕನ್ನು ತಾನು ಯಾವಾಗ ನೋಡುವುದೆಂಬ ಆಲೋಚನೆ ಆ ತಾಯಿಯಲ್ಲಿದೆ. ಕನ್ನಡಿಗರು ಏಕೀಕರಣದ ಮೂಲಕ ಒಂದುಗೂಡಬೇಕಾದ ತುಡಿತ ಇಲ್ಲಿದೆಯೆಂಬುದನ್ನು ಗಮನಿಸಬಹುದು. ಕವಿಯ ಭರವಸೆಯ ಮೇರೆಗೆ ತಾಯಿ ಸಮಾಧಾನಪಟ್ಟುಕೊಳ್ಳುತ್ತಾಳೆ. ನಸುನಗುತ್ತಾ ಭುವನೇಶ್ವರಿ ರಥವೇರುತ್ತಾಳೆ. ಮುದುಕಿ ಎಳೆಯವಳಾಗುತ್ತಾಳೆ. ಮುಖದ ನೆರಿಗೆ ದೂರಾಗಿ, ಮೈದುಂಬಿಕೊಂಡು ಕಡಲ ತೆರೆಗಳನ್ನುಟ್ಟು, ಬೆಟ್ಟ ಬಯಲನು ತೊಟ್ಟು, ಅರಿಲ ಮುಡಿಗಿಟ್ಟು ಮುಗುಳ್ನಗೆಯಿಂದ ಹೊರಡುತ್ತಾಳೆ. ಆಗ ಅವಳ ಮಕ್ಕಳ ಜಯಘೋಷ ಕೇಳಿಸುತ್ತದೆ.

ಇಲ್ಲಿ ಕವಿ ಬಳಸಿರುವ ರೂಪಕಗಳು ಹಲವಾರು 'ತಾಯಿ ಭುವನೇಶ್ವರಿ' 'ಭಾರತಾಂಬೆಯ ಹಿರಿಯ ಹೆಣ್ಮಗಳು', ಮುತ್ತೈದೆ ಮುಂತಾದ ಅಮೂರ್ತ ಕಲ್ಪನೆಗಳು ಕಾಣಿಸಿಕೊಂಡಿವೆ. ಇಲ್ಲಿ ಸೌಮ್ಯತೆಯ ಚಹರೆಯಿದೆ. ಆಶಾವಾದಿ ಧೋರಣೆಯಿದೆ. ರೌದ್ರರೂಪಿಯಾದ ಹೆಣ್ಣಿನ ಚಹರೆ ಇವರ ಕಾವ್ಯದಲ್ಲಿ ಕಂಡು ಬರುವುದಿಲ್ಲ. ಇವರ ಕನ್ನಡ ತಾಯಿಯ ಚಿಂತನೆಯೊಳಗೆ ಒಂದು ಪರಿಧಿಯಿತ್ತು. ಇವರಿಗೆ ಇಂಗ್ಲೀಷಿನ ಮೇಲೆ ಮೋಹವಿತ್ತು. ಶ್ರೀಯವರ ಬದುಕಿನ ಸಂದರ್ಭದಲ್ಲಿ ಇನ್ನಿತರ ಕನ್ನಡಿಗರು ಮತ್ತು ಭಾಷಿಕರು ಇಂಗ್ಲಿಷನ್ನು ವಿರೋಧಿಸುತ್ತಿದ್ದರು. ಶ್ರೀಯವರು ಕನ್ನಡವನ್ನು ತಾಯಿ ಭಾಷೆಯಾಗಿ ಪ್ರೀತಿಸುತ್ತಿದ್ದರು. ಅಷ್ಟೇ ಪ್ರೀತಿ ಇಂಗ್ಲಿಷಿನ ಮೇಲೂ ಇತ್ತು. ಈ ಆಲೋಚನೆ 'ಕಾಣಿಕೆ' ಕವನದಲ್ಲಿ ಕಾಣುತ್ತದೆ. ಕನ್ನಡ ನುಡಿ–ನಾಡು ತಾಯಿಯಾಗಿ, ಹೆಣ್ಣಾಗಿ ಕಂಡರೂ ಇಂಗ್ಲೀಷ್ 'ಸಾಕು ತಾಯಿ' ಯಾಗಿ ಕಾಣಿಸಿಕೊಳ್ಳುತ್ತಾಳೆ. ಉಳಿದೆಲ್ಲ ಕವಿಗಳು 'ಅಖಂಡ ಕರ್ನಾಟಕ ಗ್ರಹಿಕೆಗೊಳಗಾದಾಗ ಬಿ. ಎಂ. ಶ್ರೀ. ಯವರು ತಾವಿರುವ ಮೈಸೂರಿನಲ್ಲಿಯೇ ಉಳಿದ ಪ್ರಾಂತ್ಯಗಳ ವಿಶೇಷತೆಯನ್ನು ಕಾಣಬಯಸುತ್ತಾರೆ.

'ಬೆಳೆಯುವ ನಾಡದು ಮೈಸೂರು, ಇಳೆಯ ಮಾದರಿಯದು ಮೈಸೂರು' ಎನ್ನುವ, 'ರಾಜ ಸೇವಾಸಕ್ತ' ಶ್ರೀಯವರು, ಪ್ರಾಂತೀಯ ಮೋಹಕ್ಕಿಂತ ರಾಜಭಕ್ತಿಯನ್ನು ಪ್ರಚುರಪಡಿಸಿದಂತಿದೆ. ಕವನದ ಆಶಯ ಏನೇ ಆದರೂ ಬಳಸಿದ ರೂಪಕಗಳು ವಿಶಿಷ್ಟವಾಗಿದೆ. ವಾಸ್ತವದಲ್ಲೂ ತಾಯಿಯೊಬ್ಬಳು ತನ್ನ ಮಕ್ಕಳು ತನ್ನ ಕಣ್ಣ ಮುಂದೆಯೇ ಇರಬೇಕೆಂಬ ಬಯಕೆಯುಳ್ಳವಳಾಗಿರುತ್ತಾಳೆ. ಶ್ರೀಯವರ ಇನ್ನೊಂದು ವಿಶಿಷ್ಟವಾದ ಕವನ 'ಕನ್ನಡ ಬಾವುಟ'. ಇಲ್ಲಿ ಬಾವುಟವೇ ಕನ್ನಡಿಗರ ಪ್ರತೀಕವೋ ಎನ್ನುವ ರೀತಿಯಲ್ಲಿ ಕವನ ನಿರ್ಮಾಣವಾಗಿದೆ. ನಾಡು ನುಡಿಯ ಹಿರಿಮೆಯನ್ನು ಕುರಿತಾದ ಅನೇಕ ಸಂಗತಿಗಳನ್ನು ಈ ಕವನ ಕಟ್ಟಿಕೊಡುತ್ತದೆ. ಕವಿಗಳ, ದಾರ್ಶನಿಕರ, ಕಲಿಗಳ, ಸತಿಗಳ, ಯತಿಗಳ, ಕಲಿಗಳ, ಚೆಲುವ ಚೆಲುವೆಯರ ನಾಡನ್ನು ಈ

ಮೂಲಕ ಪ್ರತಿನಿಧಿಸುವ ಕೆಲಸ ಇಲ್ಲಿದೆ. ಇಂತಹ 'ತಾಯಿ' ಉಳಿದರೆ ನಾನುಳಿದೆ, ತಾಯಳಿಯೆ ನಾನಳಿದೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾ ನಾಡಿನ ಹಿರಿಯ ಕಿರಿಯರನ್ನೆಲ್ಲಾ ಹುರಿದುಂಬಿಸುತ್ತಾರೆ, ಅಲ್ಲದೆ,

ಬಾಳು ಎಲೆ ಬಾವುಟ
ಬಾಳ್ ಕನ್ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರಿ (ಕನ್ನಡ ಬಾವುಟ)

ಎಂಬ ದಿವ್ಯವಾದ ಒಂದು ಹಾರೈಕೆಯ ಜೊತೆಯಲ್ಲಿ ನಾಡಿನ ನಿರಂತರತೆಯನ್ನು ಶ್ರೀಯವರು ಈ ಮೂಲಕ ಗುರುತಿಸಿದ್ದಾರೆ. ಭುವನೇಶ್ವರಿಯ ಬದಲಾಗಿ ಇಲ್ಲಿ ರಾಜೇಶ್ವರಿ ಸ್ಥಾನ ಪಡೆದುಕೊಳ್ಳುತ್ತಾಳೆ. ಈ ರಾಜೇಶ್ವರಿ ಕನ್ನಡಿಗರ ಒಡತಿಯಾಗಿ ಸಂಭ್ರಮಿಸಿರುವುದು ಕಂಡು ಬರುತ್ತದೆ. ಈ ಹಾರೈಕೆ ಅಂತರಂಗದ್ದಾದರೂ ಕವನದ ಸಾಲುಗಳಲ್ಲಿ 'ಸಿರಿಯ ಜಯಚಾಮನಾ ಹಿರಿಮೆಯ ಹೂವಾಗಿ' ಎನ್ನುವುದರ ಮೂಲಕ ಮತ್ತೆಲ್ಲೋ ಒಂದು ಮಿತಿಗೊಳಗಾಗುತ್ತಾರೆ ಎಂಬುದನ್ನು ಗುರುತಿಸಿಕೊಳ್ಳಬಹುದು. ಕನ್ನಡಿಗರಿಗೆ ಪರಿಚಿತವಾಗಿದ್ದ ಭುವನೇಶ್ವರಿ ಇಲ್ಲಿ ರಾಜರ ಈಶ್ವರಿಯಾಗುತ್ತಾಳೆ. ಹೀಗೆ ಬೇರೆ ಬೇರೆ ಅಮೂರ್ತ ರೂಪಗಳ ಮೂಲಕ ಬಿ. ಎಂ. ಶ್ರೀ ಯವರು ನಾಡನ್ನು ಗುರುತಿಸಿದ್ದಾರೆ.

'ದೇಶೀಯ ಹಾಗೂ ಧಾರವಾಡದ ಬದುಕಿನ ಅನುಭವಗಳ ಅನನ್ಯತೆಯ ಶೋಧ ಬೇಂದ್ರೆಯವರ ಕಾವ್ಯದ ಕೇಂದ್ರ ಬಿಂದು. ಕನ್ನಡ ನವೋದಯದ ಸಂವೇದನೆ, ವಸಾಹತು ಸಂಸ್ಕೃತಿಗೆ ಪ್ರತಿಕ್ರಿಯಿಸುತ್ತಲೇ ಸೃಷ್ಟಿಕ್ರಿಯೆಯಲ್ಲಿ ತೊಡಗಿದ್ದು ತಿಳಿದಿರುವ ಸಂಗತಿ. ಬೇಂದ್ರೆಯವರ ಕಾವ್ಯ ವಸಾಹತು ಸಂಸ್ಕೃತಿಗೆ ತೋರಿದ ಪ್ರತಿರೋಧ, ರಾಷ್ಟ್ರೀಯತೆ, ಅಖಂಡ ಕರ್ನಾಟಕದ ಕಲ್ಪನೆ, ಕನ್ನಡದ ಅನನ್ಯತೆಯ ಪ್ರಶ್ನೆಗಳು ದೇವರು-ಧರ್ಮಗಳ ಪಾರಂಪರಿಕ ದೃಷ್ಟಿಗೆ ಎದುರಾದ ಕ್ರಮ, ನೆಲ ಮತ್ತು ಮನುಷ್ಯ ಸಂಬಂಧಗಳು, ಹೆಣ್ಣು-ಗಂಡು ಪ್ರೀತಿ, ಹಸಿವು, ಅನ್ನ, ಹೀಗೆ ವಿಭಿನ್ನ ನೆಲೆಗಳಲ್ಲೂ ಪ್ರಕಟವಾಗುತ್ತದೆ. ಇಂತಹ ಪ್ರತಿರೋಧ ಅಬ್ಬರವಿಲ್ಲದೆ ಮೆಲುದನಿಯಲ್ಲಿ ಅನುರಣನಗೊಳ್ಳುತ್ತಲೇ ಧ್ವನಿಪೂರ್ಣವಾಗಿ ಪ್ರಕಟವಾಗುವುದು ಇವರ ಕಾವ್ಯದ ವೈಶಿಷ್ಟ' ವಾಗಿದೆಯೆಂಬ ಕೆ.ಸಿ.ಶಿವಾರೆಡ್ಡಿ ಅವರ ಅಭಿಪ್ರಾಯ ಗಮನಿಸುವಂತದ್ದು.(೨೦೦೩ ಪು.೬೭)

ಒಡೆದು ಆಳುವ ನೀತಿಯ ಬ್ರಿಟಿಷರು ಬಹುಮುಖಿ ಸಂಸ್ಕೃತಿಯನ್ನು ಒಳಗೊಂಡ ಭಾರತವು ಐಕ್ಯಗೊಳ್ಳುವುದಿಲ್ಲ ಎಂಬ ಧೋರಣೆಯನ್ನು ತಳೆದಿದ್ದ ಸಂದರ್ಭದಲ್ಲಿ ಇದನ್ನು ಅರ್ಥೈಸಿಕೊಂಡು ತಿಳಿಸಬೇಕಾದ ಜವಾಬ್ದಾರಿ ಭಾರತೀಯ ಸೃಷ್ಟಿಶೀಲರದಾಗಿತ್ತು. ಆಗ ಸಾಂಸ್ಕೃತಿಕವಾಗಿ ಪ್ರತಿಕ್ರಿಯೆ ನೀಡಿದ ಕವಿಗಳು ಹೊಸ ಅಭಿವ್ಯಕ್ತಿಯನ್ನು ಅನಾವರಣಗೊಳಿಸಿದರು. ಇದು ಕನ್ನಡದಲ್ಲಿಯೂ ನಡೆಯಿತು. ಇವರಲ್ಲಿ ಬೇಂದ್ರೆ, ಕುವೆಂಪು, ಮಾಸ್ತಿ, ಗೋವಿಂದ ಪೈ, ಮುಂತಾದವರು ಪ್ರಮುಖರು, ಮುಖ್ಯವಾಗಿ ಬೇಂದ್ರೆ ಮತ್ತು ಕುವೆಂಪು ಅಮೂರ್ತ ರೂಪಗಳ ಮೂಲಕ ಹೇಗೆ ವಸಾಹತುಷಾಹಿಗೆ ಪ್ರತಿಕ್ರಿಯಿಸಿದರು ಎಂಬುದನ್ನು ಚರ್ಚಿಸುವುದು ಅಗತ್ಯವೆನಿಸುತ್ತದೆ.

ತಮ್ಮ ಹುಟ್ಟೂರಿನ ಮೂಲಕವೇ ನಾಡು-ರಾಷ್ಟ್ರ ಗಳನ್ನು ಪರಿಭಾವಿಸಿ ವಿಶಿಷ್ಟ ರೂಪಕಗಳ ಮೂಲಕ ವಸಾಹತುಷಾಹಿಗೆ ಪ್ರತಿರೋಧವನ್ನು ವ್ಯಕ್ತಪಡಿಸಿದವರು ಬೇಂದ್ರೆ. 'ನನ್ನದು ಈ ಕನ್ನಡ ನಾಡು' ಕವನದಲ್ಲಿ ಕವಿ ನಾಡನ್ನು ಗುರುತಿಸಿದ ಪರಿ ವಿಶಿಷ್ಟವಾಗಿದೆ. 'ಮಾಸತಿಯ ಬೀಡು, ಮುಡುಪಾದ ನಾಡು, ಇದಕಾರು ಜೋಡು, ಎತ್ತು ಸುತ್ತಲೂ ಮಲೆಯಾಳ ಮಂದ್ರ ದ್ರಾವಿಡವು ಸಾಂದ್ರ ಮಾರಾಷ್ಟ್ರ ಆಂಧ್ರ ಸುತ್ತುಮುತ್ತ ಇಗೋ ನಡುವಿನ ಕನ್ನಡ ನಾಡು ನನ್ನದು ಎನ್ನುತ್ತಾ ನಾಡಿನ ಬಗ್ಗೆ ಅಭಿಮಾನವನ್ನು ಮೂಡಿಸುತ್ತಾರೆ. ಗಾಂಧಿ ಪ್ರಣೀತ ಚಿಂತನಧಾರೆ ಮತ್ತು ತಿಲಕ್ ಪ್ರಣೀತ ಚಿಂತನಧಾರೆ ದೇಶ ವ್ಯಾಪಿಯಾಗಿ ಹರಡಿದ್ದ ಕಾಲಘಟ್ಟದಲ್ಲಿ ಒಂದೆಡೆ ಶಾಂತಿ, ಸಹನೆ, ಸತ್ಯ, ಅಹಿಂಸೆ, ಸರಳತೆ ನೆಲೆ, ಕಂಡು ಬಂದರೆ ಇನ್ನೊಂದೆಡೆ ಹಿಂಸೆ, ಕ್ರಾಂತಿ, ದ್ವೇಷದ ನೆಲೆ ಕಾಣಿಸಿಕೊಂಡಿತು. ಇವೆರಡೂ ದಾಸ್ಯದ ಮುಕ್ತಿಯನ್ನೆ ಗುರಿಯನ್ನಾಗಿ ಹೊಂದಿದ್ದುವು. ಧರ್ಮ, ಭಾಷೆ, ಸಂಸ್ಕೃತಿ ಮುಂತಾದ ಸಂಗತಿಗಳ ಬಗೆಗೆ ಪ್ರೇಮವನ್ನು ಮೂಡಿಸಿ ಜನರನ್ನು ಚಿಂತನಶೀಲರನ್ನಾಗಿಸಿ ರಾಷ್ಟ್ರೀಯತೆಯ ಅಸ್ಮಿತೆಯನ್ನು ನೆಲೆಗೊಳಿಸುವ ಪ್ರಯತ್ನ ನಿರಂತರ ನಡೆಯಿತು.

ಬೇಂದ್ರೆಯವರು ಸಾಹಿತ್ಯ ಸೃಷ್ಟಿಗೆ ಪ್ರಾರಂಭಿಸಿದ ಕಾಲವೆಂದರೆ, ಅದು ಕನ್ನಡ ನಾಡು-ನುಡಿಗಳ ದುರವಸ್ಥೆಯ ಕಾಲ. ಅವರ ಊರು ಮರಾಠಿಯ ಪ್ರಭಾವದಿಂದ ನಲುಗಿ ಹೋದ ಧಾರವಾಡ. ಇವರಿಗೆ ಗೆಳೆಯರ ಗುಂಪಿನ ಹಿನ್ನೆಲೆಯೂ ಇತ್ತು. ಪೂರ್ವದ ಸೀಮಾ ಪುರುಷರಂತೆ ತಾವು ಸಹಾ ನಾಡು-ನುಡಿಯ ಉದ್ದಾರಕ್ಕಾಗಿ ದುಡಿಯಬೇಕೆನ್ನುವುದು ಈ ಗೆಳೆಯರ ಗುಂಪಿನ ಧ್ಯೇಯವಾಗಿತ್ತು. ಕನ್ನಡ ನಾಡು ಅಂತರಂಗ-ಬಹಿರಂಗವಾಗಿ ಬೆಳೆಯಬೇಕೆಂಬ ಮಹಾದಾಸೆಯಿತ್ತು. ಇಂತಹ ಸಂದರ್ಭದಲ್ಲಿ ರಚಿತವಾದ ಬೇಂದ್ರೆಯವರ

'ಕನಸಿನೊಳಗೊಂದು ಕಣಸು' ವಿಶಿಷ್ಟವಾದ ಕವನ. ಮಾನುಷ ಧ್ವನಿ ಮತ್ತು ದೈವೀಧ್ವನಿಗಳ ಸಂಭಾಷಣೆ ಬಹುಶಃ ಇದರ ಯಶಸ್ಸಿಗೆ ಕಾರಣವಾಗಿರಲೂಬಹುದು. ಇದರಲ್ಲಿ ಕನ್ನಡ ನಾಡಿನ ದುಸ್ಥಿತಿಯ ಚಿತ್ರಣವಿದೆ. ಇಲ್ಲಿನ ದೈವೀ ಶಕ್ತಿಯೆಂದರೆ ಕನ್ನಡ ತಾಯಿ. ಆಕೆ ತಾಯಿ, ಮುತ್ತೈದೆ, ರಾಜಕಳೆಯಿರುವ ರಾಜಮುಖಿ, ನಾಡದೇವಿ, ಚಂಡಿ-ಚಾಮುಂಡಿ ಮುಂತಾದ ರೂಪಕಗಳ ಮೂಲಕ ಕಾಣಿಸಿಕೊಂಡಿದ್ದಾಳೆ.

'ಕನಸಿನೊಳಗೊಂದು ಕಣಸು' ಕವನದ ಮೊದಲ ಸಾಲುಗಳು ಮಮತೆ, ಕಾರುಣ್ಯ ಹಾಗೂ ಪ್ರೀತಿಯ ಪ್ರತೀಕವಾದ ತಾಯಿಯನ್ನು ಉದ್ದೇಶಿಸಿವೆ. ವಿಶೇಷತೆಯೆಂದರೆ, ಇಡೀ ಕವನದ ರಚನಾ ವಿಧಾನ ಸಂಭಾಷಣೆಯ ರೂಪದಲ್ಲಿದೆ. ಕೊನೆಯ ಎರಡು ಸಾಲುಗಳು ಪ್ರತ್ಯೇಕವಾಗಿದ್ದು, ನಿರೂಪಣೆಯ ವಿಧಾನದಲ್ಲಿವೆ. ಎರಡೆರಡು ಸಾಲುಗಳಿಗೆ ಬರುವ ಅಂತ್ಯ ಪ್ರಾಸ ಆಕರ್ಷಕವಾಗಿದೆ. 'ತಾಯಿ' ಎಂಬ ಸಂಬೋಧನೆ ನಾವೆಲ್ಲರೂ ಸಾಮಾನ್ಯವಾಗಿ ಬಳಸುವಂಥದ್ದೇ ಆಗಿದೆ. ಎದುರಿಗೆ ಕಂಡವರನ್ನು ಯಾರು ತಾಯೆ ಅಥವಾ ಯಾರಮ್ಮ, ಯಾರವ್ವ, ಎಂದೆಲ್ಲಾ ಮಾತನಾಡಿಸುವುದು ನಮ್ಮ ಸೌಜನ್ಯತೆಯ ಸಂಕೇತವಾಗಿದೆ. ಈ ಕವನದ ಆರಂಭದಲ್ಲಿ ಕಾಣಿಸಿಕೊಂಡ 'ತಾಯಿ' ಎಂಬುದು ಮುಂದೆ ದೇವಿಯ ನೆಲೆಗೆ ಬಂದು ನಿಲ್ಲುತ್ತದೆ. ಇದೇ ಪ್ರಭೆ ಮುಂದೆ ಕವನದ ಕೊನೆಯ ಭಾಗಕ್ಕೆ ಬಂದಾಗ ತನ್ನ ಸೌಮ್ಯರೂಪದಿಂದ ಆಚೆ ಸರಿದು ರೌದ್ರರೂಪಿಯಾಗಿ 'ಚಂಡಿ-ಚಾಮುಂಡಿ'ಯ ಚಹರೆಯನ್ನು ಪಡೆದುಕೊಳ್ಳುತ್ತದೆ.

ಕವನದ ಈ ರೀತಿಯ ಬೆಳವಣಿಗೆ ತಾಯಿಯನ್ನು ಸತ್ವವುಳ್ಳವಳಾಗಿ ಅನಿವಾರ್ಯ ಸಂದರ್ಭಗಳಲ್ಲಿ ಆಕೆ ಚಾಮುಂಡಿಯೂ ಆಗಬಲ್ಲಳೆಂಬುದನ್ನು ಧ್ವನಿಸುತ್ತದೆ. ಹಾಗಾಗಿ ತಾಯಿಗೆ ಸೌಮ್ಯ ರೂಪಿ ಚಹರೆ ಮತ್ತು ರೌದ್ರರೂಪಿ ಚಹರೆಯನ್ನು ಸೃಷ್ಟಿಸಲಾಗಿದೆ.

'ಹೆಸರಾಗಿಯೂ ಕೂಡ ಹೇಳ ಹೆಸರಿಲ್ಲ' ಎನ್ನುವಲ್ಲಿ ಹಿಂದೆ ತಾನು ಹೆಸರು ಪಡೆದವಳು ಅಂದರೆ 'ಖ್ಯಾತಿವೆತ್ತವಳು' ಎಂಬ ಭಾವವಿದೆ. ಆದರೆ ಈಗ ಆ ಖ್ಯಾತಿಯಿಲ್ಲ. ಮಾತ್ರವಲ್ಲ ಆಕೆ ಮುತ್ತೈದೆ. ಈ ಮುತ್ತೈದೆ ಕನ್ನಡಿಗನ ಕನಸಿನೊಳಗೆ ಕಾಣಿಸಿಕೊಂಡಿದ್ದಾಳೆ. ಆ ಮುಖದಲ್ಲಿ ಅತಿಯಾದ ನೋವಿದೆ. ಬಿ. ಎಂ. ಶ್ರೀ. ಯವರು ಕನ್ನಡ ತಾಯಿಯನ್ನು ಕನ್ನಡ ತಾಯಿ ನೋಟದಲ್ಲಿ ನೇರವಾಗಿ ಸಂದರ್ಶಿಸಿದರೆ, ಬೇಂದ್ರೆಯವರು ಕನಸಿನಲ್ಲಿ ಕಾಣುತ್ತಾರೆ. ಪ್ರಶ್ನೆ ಮತ್ತು ಉತ್ತರದ ರೂಪದಲ್ಲಿ ಸಾಗುತ್ತಾ ಕೊನೆಯ ಪ್ರಶ್ನೆ ದಂಗು ಬಡಿಸುತ್ತದೆ.

ಚಂಡಿ ಚಾಮುಂಡಿ ಪೇಳ್ ಬೇಕಾದುದೇನು ?
ಗಂಡಸಾದರೆ ನಿನ್ನ ಬಲಿ ಕೊಡುವಿಯೇನು ?

ಈ ಸವಾಲು ಆ ತಾಯಿ ಬಲಿಷ್ಠವಾದ ಬಲಿಯನ್ನೇ ಬಯಸುತ್ತಿದ್ದಾಳೆ ಎಂಬುದನ್ನು ಗುರುತಿಸುವಂತಿದೆ. ಅಷ್ಟರಲ್ಲಿಯೇ ಕನಸೊಡೆದು ಕವಿಯ ಮನಸ್ಸು ನಡುಗುತ್ತದೆ. ಬೆಳಕಾಯ್ತು ಎನ್ನುವುದನ್ನು ಸೂಚಿಸುವುದರ ಮೂಲಕ ಕನ್ನಡಕ್ಕಾಗಿ ಬಲಿಯಾಗಲು ಸಿದ್ಧರಿಲ್ಲ ಎಂಬುದನ್ನು ಸಂಕೇತಿಸುವಂತಿದೆ. ಇಲ್ಲವಾದಲ್ಲಿ ಕೊನೆಯ ಪ್ರಶ್ನೆಗೆ ಉತ್ತರ ನೀಡಬೇಕಿತ್ತು. ನೀಡಿಲ್ಲ, ಅಷ್ಟಕ್ಕೂ ಬೆಳಕಾಗುತ್ತದೆ. ಇದು ಬಹುಶಃ ಎಲ್ಲಾ ಕನ್ನಡಿಗರ ಸ್ಥಿತಿಯೂ ಅಗಿತ್ತೇನೋ ಎಂಬುದು ಗ್ರಹಿಸಬೇಕಾದ ಸಂಗತಿ.

ಈ ಕವನದಲ್ಲಿ ಮುಖ್ಯವಾಗಿ ಗಮನಕ್ಕೆ ಬರುವುದು 'ಚಂಡಿ-ಚಾಮುಂಡಿ' ಎಂಬ ರೂಪಕ ಆರಂಭದಲ್ಲಿ ಸೌಮ್ಯ ರೂಪಿಯಾಗಿ ಕಾಣಿಸಿಕೊಂಡ ತಾಯಿಯ ಚಹರೆ ಈಗ ರೌದ್ರ ರೂಪವನ್ನು ಪಡೆಯುತ್ತದೆ. ಬಲಿ ಕೇಳುವ ಅವಳ ಉಗ್ರರೂಪ ಭಾವಗೋಚರವಾಗುತ್ತದೆ. ಇಲ್ಲಿ ಕುತೂಹಲದ ಸಂಗತಿಯೆಂದರೆ ಜೀವ ಸೃಷ್ಟಿಸುವ ತಾಯಿ ಬಲಿ ಕೇಳುವ ಸನ್ನಿವೇಶ. ಸಾಮಾನ್ಯವಾಗಿ ಶಿಷ್ಟ ಸಂಸ್ಕೃತಿಯ ವರ್ಣನೆಯೊಳಗೆ ದೇವರು ಸುಂದರವಾಗಿದ್ದಾರೆಂಬ ಕಲ್ಪನೆ. ಇನ್ನೊಂದೆಡೆ ದೇವಿಯನ್ನು ಘೋರ ರೂಪಿಯೆಂದೂ ವರ್ಣಿಸಿದ್ದನ್ನು ಕಾಣಬಹುದು. ಇದೇ ಉಗ್ರರೂಪಿಯನ್ನು 'ಕಾಳಿ'ಯೆಂದು ಆರಾಧಿಸುವುದೂ ಇದೆ. 'ಚಾಮುಂಡಿ' ಮೂಲತಃ ಉಗ್ರದೇವತೆ. ಮಹಿಷಾಸುರ ವಧೆಗಾಗಿ ಪಾರ್ವತಿ ಶಕ್ತಿ ರೂಪಿಣಿಯಾಗಿ ಚಾಮುಂಡೇಶ್ವರಿಯ ಅವತಾರ ತಾಳಿದಳು ಎಂಬ ಗ್ರಹಿಕೆಯಿದೆ. ಚಾಮುಂಡೇಶ್ವರಿಗೂ ಮೈಸೂರಿಗೂ ಸಂಬಂಧ ರೂಪುಗೊಂಡದ್ದು ಈ ಹಿನ್ನೆಲೆಯಿಂದ ಇರಬಹುದು. ಮಹಿಷಮಂಡಲವೇ ಮೈಸೂರು ಎಂಬ ಅಭಿಪ್ರಾಯವಿದೆ. ಚಾಮುಂಡೇಶ್ವರಿಯೆಂಬುದು ದೇವಿಯ ಭಯಾನಕ ರೂಪ. ಕಪ್ಪು ಅಥವಾ ಕೆಂಬಣ್ಣ, ಹಲವಾರು ಕೈಗಳು, ಆ ಕೈಗಳಲ್ಲಿ ಡಮರು, ತ್ರಿಶೂಲ, ಖಡ್ಗ ಮುಂತಾದುವು. ಒಂದು ಕೈಯಲ್ಲಿ ರಕ್ತ ತುಂಬಿದ ಪಾನಪಾತ್ರೆ. 'ಸಕಲ ಜೀವದ ಉಗಮ ರಕ್ತದಲ್ಲಿ', ಮೊತ್ತ ಮೊದಲು ದೈವತ್ವದ ಪರಿಕಲ್ಪನೆ ಮೂಡಿದ್ದು, ಸೃಷ್ಟಿ ಕ್ರಿಯೆಯ ಬಗ್ಗೆ ಮತ್ತು ಅದಕ್ಕೆ ಕಾರಣಳಾದ ಹೆಣ್ಣಿನ ಬಗ್ಗೆ. ಮೊತ್ತ ಮೊದಲ ದೇವರು ಹೆಣ್ಣು ಅರ್ಥಾತ್ ಮಾತೃದೇವತೆ. (ಪ್ರತಿಭಾ ನಂದಕುಮಾರ್ ೨೦೧೬ ಪು – ೧೬೨) ಮುಂದೆ ಹಲವು ಕಾಲ ಜಗತ್ತಿನಲ್ಲಿ ಮಾತೃದೇವತೆಯ ಉಪಾಸನೆಯಿತ್ತು. 'ಈಶ್ವರೀಮ್ ಸರ್ವ ಭೂತಾನಾಮ್' ಎಂದು ಗುರುತಿಸಿ ಎಲ್ಲಾ ಸಂಗತಿಗಳಿಗೂ ಅವಳೇ ಅಧಿದೇವತೆಯೆಂದು ಭಾವಿಸಲಾಗಿತ್ತು. ಕಾಲಾಂತರದಲ್ಲಿ ಗಂಡು ದೇವರುಗಳು ಪ್ರಾಧಾನ್ಯತೆಯನ್ನು ಪಡೆದುಕೊಂಡರು. ಆದರೂ ಆದಿಶಕ್ತಿ ಎಲ್ಲರನ್ನೂ ನಡೆಸುವ ತಾಯಿಯೆನ್ನುವ ನಂಬಿಕೆಯಿದೆ.

ಬೇರೆ ಬೇರೆ ರೀತಿಯಲ್ಲಿ ಈ ತಾಯಿಯ ಆರಾಧನೆ ನಡೆಯುತ್ತದೆ. ವೈದಿಕ ಮತ್ತು ಅವೈದಿಕ ಶೈಲಿಯ ಆರಾಧನೆಯಲ್ಲಿ ಭಿನ್ನತೆಯಿದೆ. ಬಹುಶಃ ತಾವು ಏನನ್ನು ಆಹಾರವಾಗಿ

ಸ್ವೀಕರಿಸುವರೋ ಅದೇ ಆಹಾರವನ್ನು ಸಮರ್ಪಿಸಿ ಆರಾಧಿಸುವ ಪದ್ದತಿಯಿತ್ತು. 'ಬಲೀಂ ಸಮರ್ಪಯಾಮಿ' ಎನ್ನುವಾಗ ಹಿಡಿ ಅನ್ನವನ್ನು ಅರ್ಪಿಸುವ ಪದ್ದತಿಯೂ ಇದೆ. ಈ ಹಿನ್ನಲೆಗಳನ್ನು ಗಮನಿಸುವಾಗ ಚಾಮುಂಡಿಯು ಬಲಿಯನ್ನು ಬಯಸುವ ದೇವತೆಯೆಂಬುದನ್ನು ಅರ್ಥೈಸಿಕೊಂಡರೆ, ಬೇಂದ್ರೆಯವರ ಕವನದಲ್ಲಿ ಕಾಣುವ ಚಂಡಿ ಚಾಮುಂಡಿಯ ರೂಪಕವನ್ನು ಈ ನೆಲೆಯಲ್ಲಿ ಗಮನಿಸಬಹುದು. ಇಲ್ಲಿ 'ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?' ಎಂದು ಆ ತಾಯಿ ಕೇಳುವಲ್ಲಿ ದುಃಖ ದುಗುಡ, ಬೇಸರವಿಲ್ಲ. ಅವನ ಪೌರುಷಕ್ಕೆ ಸವಾಲೆಸೆದು ಬಲಿಯನ್ನು ಕೇಳಿದಂತಿದೆ. ಅವಳು ಕೇಳುವ ಬಲಿ ನಾಡಿನ ಒಳಿತಿಗಾಗಿ. ನಾಡಿನ ಕ್ಷೇಮಕ್ಕಾಗಿ ಯಾರು ಯಾರನ್ನೋ ಬಲಿ ಕೇಳುವುದಿಲ್ಲ. ತನ್ನನ್ನೇ ಬಲಿ ಕೊಡುವುದಕ್ಕೆ ಸಿದ್ಧನಾಗಬೇಕಾದ ಅನಿವಾರ್ಯತೆಯನ್ನು ಕವನ ಗುರುತಿಸಿಕೊಡುತ್ತದೆ. ತನ್ಮೂಲಕ ಕನ್ನಡಮ್ಮನನ್ನು ಉದ್ದರಿಸಲು ಕನ್ನಡ ಸಂವೇದನೆ ತಳೆಯಬೇಕಾದ ನಿಲುವನ್ನು ಸೂಚಿಸುತ್ತದೆ. ಇಲ್ಲಿ ತಾಯಿ ಹಾಕುವ ಸವಾಲು ಕೇವಲ ಮಗನೊಬ್ಬನಿಗೆ ಸೀಮಿತವಾಗದೆ, ಕನ್ನಡ ಜನತೆಗೆಲ್ಲ ಅನ್ವಯವಾಗುತ್ತದೆಯೆಬುಂದು ಗಮನಾರ್ಹ ಸಂಗತಿ. ಆಕ್ರಮಣಶೀಲ ಸಂಸ್ಕೃತಿಗೆ ಬೇಂದ್ರೆಯವರ ಪ್ರತಿರೋಧ ಇಂತಹ ಹೆಣ್ಣುಸಂಕಥನದ ರೂಪಕಗಳ ಮೂಲಕ ನಡೆದದ್ದನ್ನು ಅರ್ಥೈಸಿಕೊಳ್ಳಬಹುದು.

'ಕನ್ನಡ ತಾಯ ನೋಟ'ದಲ್ಲಿ ಕವಿಯ ಪ್ರಯಾಣದ ಚಿತ್ರಣವಿದೆ. ಆ ಪ್ರಯಾಣದ ತುಂಬ ನಾಡಿನ ವರ್ಣನೆಯಿದೆ. ತುಂಗಭದ್ರೆಯ ತಡಿಯಲ್ಲೊಬ್ಬ ಮುತ್ತೈದೆ ದೀನ ಸ್ಥಿತಿಯಲ್ಲಿದ್ದಾಳೆ. ಸಹಜವಾಗಿ ಕವಿಯ ಪ್ರಶ್ನೆ ಯಾರಮ್ಮ? ಆ ಮುತ್ತೈದೆಯ ಉತ್ತರ ಪ್ರತಿಯೊಬ್ಬ ಕನ್ನಡಿಗನ ಕರುಳು ಹಿಂಡುವಂತಿದೆ.

ಅವಳ ಉತ್ತರದಲ್ಲಿ ಮುಖ್ಯವಾಗಿ ಗಮನಿಸಬಹುದಾದ ಸಂಗತಿಯೆಂದರೆ, ಈ ತಾಯಿಗೆ ಮಕ್ಕಳಿದ್ದೂ ಇಲ್ಲದ ಸ್ಥಿತಿ. ಒಂದು ಕಾಲದಲ್ಲಿ ಅತ್ಯಂತ ಸಂಭ್ರಮದಲ್ಲಿ ಬದುಕಿದ ಕನ್ನಡ ತಾಯಿ ಸೊರಗಿದ್ದಾಳೆ. ಅಕ್ಕ ಪಕ್ಕದವರೆಲ್ಲ ಚೆಲುವಾದ ಬದುಕನ್ನು ಕಟ್ಟಿಕೊಂಡಿದ್ದಾರೆ. ಅವರ ಮಕ್ಕಳು ಅವರ ಬದುಕಿಗೆ ಆಸರೆಯಾಗಿ ಪರಿಣಮಿಸಿದ್ದಾರೆ. ಕನ್ನಡ ತಾಯಿಯ ಅಗಾಧವಾದ ದುಃಖ

ಎಲ್ಲರೂ ಬಾಳುವೆಡೆ ನಮಗೆ ಸಾವೆ?
ಎಲ್ಲರೂ ನಲಿವ ಕಡೆ ನಮಗೆ ನೋವೆ?

ಎಂಬ ನುಡಿಯಲ್ಲಿ ವ್ಯಕ್ತಗೊಳ್ಳುತ್ತದೆ. ನಿರಾಶಳಾದ ತಾಯಿಗೆ ಕವಿಯ ಮಾತುಗಳಿಂದ ಸ್ಫೂರ್ತಿ. ತಕ್ಷಣ ನಿರಾಸೆಯಿಂದ ಮುದುಕಿಯಾಗಿದ್ದ ತಾಯಿ ಎಳೆಯವಳಾಗುತ್ತಾಳೆ. ಮ್ಲಾನವದನದಲ್ಲಿ ಮಂದಹಾಸ ಮೂಡುತ್ತದೆ. ರಥವೇರುತ್ತಾಳೆ. ಜಯ ಘೋಷ ಕೇಳಿಸುತ್ತದೆ. ತಾಯಿಗೆ ಮಕ್ಕಳಲ್ಲಿದ್ದ ಮುನಿಸು ದೂರಾಗುತ್ತದೆ. ವೈಭವವನ್ನು ಕಳೆದುಕೊಂಡ ನಾಡು ಅದೇ

ವೈಭವವನ್ನು ಪಡೆದೇ ತೀರುತ್ತದೆಂಬ ಆಶಾವಾದ ಇಲ್ಲಿ ವ್ಯಕ್ತಗೊಳ್ಳುತ್ತದೆ. ಕನ್ನಡ ತಾಯಿಯ ದೀನ ಸ್ಥಿತಿಗೂ ನಂತರದ ಮಂದಹಾಸಕ್ಕೂ ಕನ್ನಡ ಮಕ್ಕಳೇ ಕಾರಣರು. ನಾಡನ್ನು ಬಾಳಿಸುವ ಮತ್ತು ನಾಡಿನಲ್ಲಿ ಬಾಳುವ ಯೋಗ್ಯತೆ ಕನ್ನಡಿಗರದ್ದಾಗುತ್ತದೆ. ಇದು ಕನ್ನಡ ಮನಸ್ಸುಗಳನ್ನು ಒಟ್ಟು ಸೇರಿಸುವ, ನಾಡಿನ ಏಳಿಗೆಗೆ ಶ್ರಮಿಸುವಂತೆ ಪ್ರೇರೇಪಿಸುವ ಒಂದು ರಚನೆಯಾಗಿದೆ. ಕನ್ನಡ ನಾಡು ಮತ್ತೆ ವೈಭವವನ್ನು ಕಾಣಬೇಕು. ಕನ್ನಡಿಗರ ಬದುಕು ಹಿರಿದಾಗಬೇಕು, ಭಾಷೆ ಮತ್ತು ಬದುಕಿನ ನೇರ ಸಂಬಂಧವನ್ನು ಗುರುತಿಸುವುದರೊಂದಿಗೆ ಕನ್ನಡವನ್ನು ಕಾಪಿಟ್ಟುಕೊಳ್ಳಬೇಕಾದ ಸಂದೇಶವನ್ನು ಈ ಮೂಲಕ ಸಾರಿದ್ದಾರೆ.

ಗೋಕಾಕರ 'ನಾಡಿನ ಹಾಡು' ಕನ್ನಡ ತಾಯಿಯ ದೈನ್ಯಾವಸ್ಥೆಯನ್ನು ಗುರುತಿಸುತ್ತದೆ. 'ತಾರೆಗಳು ಮೇಳವಿಸಿ ಬೀಡುಬಿಟ್ಟಿಹ ನಾಡು ನನ್ನ ಕನ್ನಡ ನಾಡು' ಎಂಬ ಅಭಿಮಾನದೊಂದಿಗೆ ಆರಂಭಗೊಂಡು 'ಪತಿಯಿಲ್ಲದವಳಂತೆ ಗತಿಯಿಲ್ಲದಾಗಿಹುದು, ಹೀನವಾಗಿಹುದು ನೋಡು' ಎನ್ನುವ ಸ್ಥಿತಿಯನ್ನು ಗುರುತಿಸಲಾಗಿದೆ. ಧವಳಗಿರಿ ಗಂಗೆಯನ್ನು ಆಮಂತ್ರಿಸಲು ನಡೆದ ನಮ್ಮ ಕನ್ನಡದ ತಾಯಿ ಕೃಷ್ಣೆಗಿಹ ಸೌಹಾರ್ದವನ್ನು ಕಳೆದುಕೊಂಡಿದ್ದಾಳೆ. ಸಲಿಗೆ ಬೆಳೆಸಿ ಸುಲಿಗೆ ಮಾಡಿದ್ದರಿಂದ ಇಂತಹಾ ಸ್ಥಿತಿ ಬಂತು ಎಂಬ ಮರುಕ ಇಲ್ಲಿ ಅಭಿವ್ಯಕ್ತಗೊಂಡಿದೆ. ಕವನದ ಕೊನೆ 'ಬಾಳೋಣ ಏಳಿನ್ನು! ಅರಸಾಗಿ ಆಳೋಣ ಮನೆ ಮುರುಕರನ್ನು ಮುರಿದು' ಎಂಬ ಆಶಾವಾದವನ್ನು ಪ್ರಕಟಿಸುತ್ತದೆ.

ಕಾಸರಗೋಡು ಕರ್ನಾಟಕದ ಭಾಗವಾಗಬೇಕೆಂದು ಅಹರ್ನಿಶಿ ಹೋರಾಟ ಮಾಡಿದವರು ಕವಿಕಯ್ಯಾರರು. 'ಜಾತಿ-ಕುಲ-ಮತ-ಧರ್ಮ ಪಾಶಗಳ ಕಡಿದೊಗೆದು ಎದೆ ಹಿಗ್ಗಿ ಹಾಡಬೇಕು' ಎನ್ನುತ್ತಾ ಹಾಡಿನ ಮೂಲಕ ನಾಡನ್ನು ಕಟ್ಟುವ ಪ್ರಯತ್ನ ಮಾಡಿದ ಪರಿಶ್ರಮಿ ಕವಿ. ಕಾಸರಗೋಡು ಕೇರಳ ರಾಜ್ಯದಲ್ಲಿದ್ದರೂ ಒಂದಲ್ಲ ಒಂದು ದಿನ ಕರ್ನಾಟಕಕ್ಕೆ ಸೇರುತ್ತದೆಂದು ನಂಬಿ ಕಾಯುತ್ತಿರುವ ಅಲ್ಲಿನ ಕನ್ನಡಿಗರು ಮಾನಸಿಕವಾಗಿ ಕರ್ನಾಟಕದಲ್ಲೇ ಇದ್ದಾರೆ. ಆತಂಕದ ನೆಲೆಯಿಂದ ತೀವ್ರವಾದ ಹೋರಾಟಗಳು ನಡೆದರೂ ಕಾಸರಗೋಡು ಕನ್ನಡನಾಡಿನ ಭಾಗವಾಗಲಿಲ್ಲ. ಕನ್ನಡಕ್ಕೆ ಒದಗಿರುವ ಅಪಾಯವನ್ನು ಕಯ್ಯಾರರ 'ಬೆಂಕಿ ಬಿದ್ದಿದೆ ಮನೆಗೆ' ಕವನದ ಮೂಲಕ ಅರ್ಥೈಸಿಕೊಳ್ಳಬಹುದು. ಕಾಸರಗೋಡಿನ ಸಮಸ್ಯೆಯ ಬಗ್ಗೆ ಕನ್ನಡಿಗರು ಮಾಡಬೇಕಾದ ಕಾರ್ಯದ ತ್ವರಿತವನ್ನು ಗಾಢವಾಗಿ ಈ ಕವನ ವ್ಯಕ್ತಪಡಿಸಿದೆ. ನಿಮಿಷ ತಡವಾದರೂ ಕನ್ನಡದ ಮನೆ ಸುಟ್ಟು ಹೋಗುವ ಆತಂಕ ಇಲ್ಲಿದೆ. ಕವಿ ಜನರನ್ನು ಕೂಗಿ ಕರೆಯುವ ಸ್ಥಿತಿ ಹೀಗಿದೆ.

ಬೆಂಕಿ ಬಿದ್ದಿದೆ ಮನೆಗೆ ಓ ಬೇಗ ಬನ್ನಿ

ಎಲ್ಲರೂ ಎದ್ದೆದ್ದು ಓಡಿ ಬನ್ನಿ

ಕನ್ನಡದ ಗಡಿಕಾಯೆ

ಗುಡಿಕಾಯೆ, ನುಡಿಕಾಯೆ

ಕಾಯಲಾರೆವೆ ಸಾಯೆ

ಓ ಬನ್ನಿ ಬನ್ನಿ ! (ಬೆಂಕಿ ಬಿದ್ದಿದೆ ಮನೆಗೆ)

ಬರುವುದಾದರೂ ಹೆಚ್ಚು ಹೊತ್ತು ಅವಕಾಶವಿಲ್ಲ. ಇರುವ ಸ್ಥಿತಿಯಲ್ಲಿಯೇ ಬರಬೇಕೆಂಬ ಕರೆ ಓದುಗನ ಭಾವಕ್ಕೆ ಒಂದು ರೀತಿಯ ವೇಗವನ್ನು ಒದಗಿಸಿಕೊಟ್ಟಿದೆ. 'ಹಾರೆ ಗುದ್ದಲಿ ನೊಗ ನೇಗಿಲೆತ್ತುತಲಿ ನೆಲದಿಂದ ಹೊಲದಿಂದ ಹೊರಟು ಬನ್ನಿ' ಎಂಬಲ್ಲಿ ಕವಿ ಕೃಷಿ ಕುಟುಂಬದ ಹಿನ್ನೆಲೆಯುಳ್ಳವರೆಂಬ ಗ್ರಹಿಕೆ ಮತ್ತು ಸಂಬಂಧಪಟ್ಟ ಪರಿಕರಗಳನ್ನೆಲ್ಲಾ ಹಿಡಿದುಕೊಂಡುಬರಬೇಕಾದ ಸ್ಥಿತಿಯಿಂದ, ಅವುಗಳೆಲ್ಲ ನಾಡಿನ, ಭಾಷೆಯ ರಕ್ಷಣೆಯ ಪರಿಕರಗಳೂ ಆಗುತ್ತವೆ. ಕನ್ನಡದ 'ಗಡಿ'ಯನ್ನು ಕಾಯಬೇಕಾದ ಜವಾಬ್ದಾರಿ ಅಲ್ಲಿಯ ಜನರಿಗಿದೆ. ಅದನ್ನು ಕಾಪಾಡಿಕೊಳ್ಳುವ ಶಕ್ತಿಯಿಲ್ಲವಾದರೆ ಸತ್ತಂತೆಯೇ ಎಂಬ ಸಂಗತಿಯನ್ನು ಗುರುತಿಸಿಕೊಡುವುದರ ಮೂಲಕ ಕವಿ ಜನರ ಅಂತಃಕರಣವನ್ನು ಹಿಡಿದಿಡುತ್ತಾರೆ. ಈ ಸಂದರ್ಭದಲ್ಲಿ ಹುಟ್ಟಿಕೊಂಡ ಕವಿತೆಗಳಲ್ಲೆಲ್ಲ ಒಂದು ರೀತಿಯ ರೊಚ್ಚು, ಕೆಚ್ಚು, ಆತಂಕ, ತಲ್ಲಣವನ್ನು ಗುರುತಿಸಬಹುದು. ನಾಡನ್ನು ಉಳಿಸುವ ಸಂದರ್ಭ ಬಂದಾಗ ಎಲ್ಲರೂ ಒಂದಾಗಬೇಕೆಂಬ ಆಲೋಚನೆ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಟ ಮಾಡಬೇಕಾದ ಅನಿವಾರ್ಯತೆ ಇವೆಲ್ಲಾ ತೀವ್ರಸ್ವರೂಪದಲ್ಲಿ ಅಭಿವ್ಯಕ್ತಿಗೊಂಡಿವೆ.

ಈ ರೀತಿಯಾಗಿ ಭೌಗೋಳಿಕ ಪ್ರತಿಮೆಗಳ, ಪುರಾಣದ ಸಂಗತಿಗಳ, ಸಮನ್ವಯದ ಪ್ರತಿಮೆಗಳ ಮೂಲಕ ಅಲ್ಲದೇ ಕನ್ನಡ ನಾಡು ನುಡಿಗೆ ಸಂಬಂಧಪಟ್ಟ ಎಲ್ಲಾ ಸಂಗತಿಗಳನ್ನು ಪುನರ್ ವ್ಯಾಖ್ಯಾನಿಸುವ ಮೂಲಕ ಕನ್ನಡ ಕವಿಗಳು ನಾಡು ನುಡಿಯ ಅಭಿಮಾನವನ್ನು ಪ್ರಕಟಪಡಿಸಿದ್ದಾರೆ. ನಿರಭಿಮಾನಿಗಳಾದ ಕನ್ನಡ ಭಾಷಿಕರನ್ನು ಎಚ್ಚರಿಸುವ ಪ್ರಯತ್ನವನ್ನೂ ಮಾಡಿದ್ದಾರೆ. ನಾಡಿನ ಸೌಂದರ್ಯ, ಸಮೃದ್ಧಿ, ಪರಂಪರೆ, ನುಡಿಯ ಸೊಬಗು ಮುಂತಾದವುಗಳನ್ನು ತಮ್ಮ ಕವನಗಳ ವಸ್ತುವಾಗಿಸಿಕೊಂಡು ಶ್ರದ್ಧೆಯಿಂದ ಅಭಿಮಾನವನ್ನು ಮೆರೆದುದರ ಫಲಶ್ರುತಿ ಏಕೀಕರಣ. ನಾಡಿನ ಏಕೀಕರಣದ ಮತ್ತು ಏಳಿಗೆಯ ವಿಚಾರದಲ್ಲಿ ಇವರ ಶ್ರದ್ಧೆ ಪ್ರಶ್ನಾತೀತ.

ಏಕೀಕರಣದಲ್ಲಿ ಕವಿಗಳ ಪಾತ್ರ ಹಿರಿದಾದುದು. ಕನ್ನಡಿಗರು ಒಂದಾಗಲು ಕಾರಣವಾದದ್ದು ನಾಡು, ನುಡಿ ಮತ್ತು ಸಂಸ್ಕೃತಿಯ ಬಗೆಗಿನ ಗೌರವ. ಇವುಗಳ ಹಿರಿಮೆಯನ್ನು ಗುರುತಿಸುವ ಪ್ರಯತ್ನವನ್ನು ಕವಿಗಳು ನಿರಂತರ ಮಾಡಿದರು. ಈ ಸಂದರ್ಭದಲ್ಲಿ ರಚನೆಯಾದ ಕೆಲವು ಕವನಗಳು ಕನ್ನಡಿಗರ ನಾಲಗೆಯಲ್ಲಿ ಇಂದಿಗೂ ನಲಿದಾಡುತ್ತಿವೆ. ಡಿ. ವಿ. ಕರ್ಕಿಯವರ 'ಹಚ್ಚೇವು ಕನ್ನಡದ ದೀಪ', ಹುಯಿಲಗೋಳರ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಮುಂತಾದ ಗೀತೆಗಳು ಪ್ರತಿಯೊಬ್ಬ ಕನ್ನಡಿಗನ ಮಂತ್ರವಾಗಿತ್ತು. ಕುವೆಂಪು ರಚಿಸಿದ ಕವನಗಳು ಕನ್ನಡಿಗರಿಗೆ ಸ್ಫೂರ್ತಿ ತುಂಬುವಲ್ಲಿ ಸಾರ್ಥಕ್ಯವನ್ನು ಪಡೆದುವು. ಎಲ್ಲದರ ಪರಿಣಾಮವಾಗಿ ಕನ್ನಡ ಭಾಷಿಕರ ನಾಡು ಒಂದಾಗಬೇಕೆಂಬ ಕನಸು ನನಸಾಯಿತು.

ಏಕೀಕೃತ ಕನ್ನಡನಾಡಿನ ಸಮಸ್ಯೆಗಳು ಇಲ್ಲಿಗೆ ಮುಗಿಯುವುದಿಲ್ಲ. ವಸಾಹತುಶಾಹಿಯ ಆಕ್ರಮಣದಿಂದಾಗಿ ಹೊಸ ಸಮಸ್ಯೆಗಳನ್ನು ನಾಡು ಎದುರಿಸಬೇಕಾಯಿತು. ಆ ಸಮಸ್ಯೆಗಳು ಯಾವುವು ಮತ್ತು ಆತಂಕಗಳಿಗೆ ನಾಡು ಮತ್ತು ನುಡಿ ಮುಖಾಮುಖಿಯಾದ ಸಂದರ್ಭವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

# ಅಧ್ಯಾಯ – ೪

# ಕಾವ್ಯಗಳಲ್ಲಿ ತಲ್ಲಣಗಳ ಅಭಿವ್ಯಕ್ತಿ

೪:೧ ಕನ್ನಡಿಗರ ನಿರಾಸಕ್ತಿ

೪:೨ ಅನ್ಯಭಾಷಾ ಮೋಹ

೪:೩ ರಕ್ಷಣೆಯ ಆತಂಕ

೪:೪ ಬೆಲೆಯೇರಿಕೆಯ ಆತಂಕ

## ಅಧ್ಯಾಯ–೪

### ಕಾವ್ಯಗಳಲ್ಲಿ ತಲ್ಲಣಗಳ ಅಭಿವ್ಯಕ್ತಿ

ಜನರು ಯಾವುದೋ ಕಾರಣಗಳಿಗಾಗಿ ಬೇರೆ ಪ್ರದೇಶಗಳಿಗೆ ಹೋದಾಗ ಅಲ್ಲಿಯ ಭಾಷೆಯನ್ನು ಕಲಿಯಬೇಕಾದದ್ದು ಅನಿವಾರ್ಯವಾಗುತ್ತದೆ. ಆದರೆ ಆಧುನೀಕರಣ ಪ್ರಕ್ರಿಯೆಯಿಂದಾಗಿ ಕನ್ನಡನಾಡಿನ ಅವಸ್ಥೆ ಇದಕ್ಕಿಂತ ಭಿನ್ನವಾಗಿದೆ. ಏಕೀಕರಣೋತ್ತರ ಕನ್ನಡ ನಾಡು ಬೇರೆಬೇರೆ ಭಾಷಿಕರಿಗೆ ಬದುಕನ್ನು ಕಟ್ಟಿಕೊಳ್ಳಲು ಅವಕಾಶ ನೀಡಿದೆ. ಹೊರ ಪ್ರದೇಶಗಳಿಂದ ಬಂದ ಜನರು ಇಲ್ಲಿನ ಭಾಷೆಯನ್ನು ಕಲಿಯುವ ಪ್ರಯತ್ನ ಮಾಡದೆ ಇದ್ದುದರ ಫಲಶ್ರುತಿ ಎಂದರೆ, ಅನ್ಯಭಾಷಿಕರ ಆಕ್ರಮಣ. ಅದರ ಜೊತೆಗೆ ಕನ್ನಡದ ಬಗೆಗಿನ ನಿರಾಸಕ್ತಿ. ಇದರಿಂದಾಗಿ ಆತಂಕಕ್ಕೆ ಒಳಗಾದ ಕವಿಗಳು ನಾಡು ನುಡಿಯ ರಕ್ಷಣೆಗೆ ಸಂಬಂಧಪಟ್ಟ ಕವನಗಳನ್ನು ರಚನೆಮಾಡಿದರು. ನಾಡು–ನುಡಿಯ ಬಗೆಗಿನ ಅಪಾಯದ ಸುಳಿವನ್ನು ಕವಿತೆಗಳಲ್ಲಿ ಕಾಣಿಸಿದರು. ಕ್ಷೀಣಿಸುತ್ತಿರುವ ಕನ್ನಡದ ಬಗೆಗಿನ ತೀವ್ರ ಕಾಳಜಿ ಈ ಸಂದರ್ಭದಲ್ಲಿ ರಚನೆಯಾದ ಕವಿತೆಗಳ ಪ್ರಮುಖ ಆಶಯವಾಗಿತ್ತು. ಇದರ ಜೊತೆಗೆ ಕನ್ನಡದ ನೆಲ–ಜಲ, ಭಾಷೆ ಸಂಸ್ಕೃತಿಯ ಬಗೆಗಿನ ಆತಂಕಗಳನ್ನು ದೂರಸರಿಸಿ ಅವುಗಳನ್ನು ಉಳಿಸುವ ಜವಾಬ್ದಾರಿಯೂ ಕವಿಗಳಿಗೆ ಇತ್ತು.

ಕನ್ನಡ ಪರಂಪರೆಯಿಂದಲೇ ಇನ್ನೊಂದು ಭಾಷೆಯ ಜೊತೆಯಲ್ಲಿ ಮುಖಾಮುಖಿಯಾಗುತ್ತಲೇ ಬಂದಿದೆ. ಇಂಗ್ಲಿಷಿನ ಜೊತೆಗಿನ ಸಂಘರ್ಷದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಭೀತಿಯನ್ನು ಅನುಭವಿಸಿದೆ. ವಸಾಹತುಶಾಹಿಯ ಸಂದರ್ಭದಲ್ಲಿ ಭಾಷಿಕ, ಸಾಂಸ್ಕೃತಿಕ, ಸ್ಥಿತ್ಯಂತರಗಳು ಸಂಭವಿಸಿದಾಗ ಪ್ರಾದೇಶಿಕ ಭಾಷೆಗಳ ಬಗೆಗೆ ಎಚ್ಚರ ಮೂಡಬೇಕಾದ ಅನಿವಾರ್ಯತೆ ಉಂಟಾಯಿತು. ಭಾಷಾ ಹೋರಾಟದ ಈ ಸಂದರ್ಭದಲ್ಲಿ ಕವಿಗಳು ಕನ್ನಡವನ್ನು ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪುನರುಜ್ಜೀವನಗೊಳಿಸುವ

ನಿಟ್ಟಿನಿಂದ ಪ್ರಯತ್ನಿಸಿದರು. ಅರಿವಿನ ಭಾಷೆಯಾಗಿ ಇಂಗ್ಲಿಷನ್ನು ನಿರಾಕರಿಸದೆ, ಅನುಭವದ ಭಾಷೆಯಾಗಿ ಕನ್ನಡಕ್ಕೆ ಮನ್ನಣೆ ಒದಗಿಸುವ ಪ್ರಯತ್ನವನ್ನು ಮಾಡಿದರು.

ಭಾಷಿಕ ಮುಖಾಮುಖಿಯ ಸಂದರ್ಭದಲ್ಲಿ ಕನ್ನಡದ ಉಳಿವಿಗೆ ಕಟಿಬದ್ಧರಾಗಿ ನಿಂತ ಕವಿಗಳು ಭಾಷೆಯ ಸೌಂದರ್ಯ, ಅದರ ಅಂತಃಸತ್ವ, ವಿಶಾಲವಾದ ಸಂವೇದನಾಶೀಲ ಗುಣ ಮುಂತಾದ ಸಂಗತಿಗಳನ್ನು ಗುರುತಿಸಿಕೊಂಡು ಕಾವ್ಯರಚನೆ ಮಾಡುತ್ತಾ, ನಾಡು-ನುಡಿಯ ಬಗೆಗೆ ಅಭಿಮಾನ ಮೂಡಿಸುವ ಪ್ರಯತ್ನಕ್ಕೆ ಮುಂದಾದರು. ಈ ಕಾಲಘಟ್ಟದಲ್ಲಿ ಭಾಷೆಯ ಬಗೆಗೆ ಪಾವಿತ್ರ್ಯದ ಗ್ರಹಿಕೆ ಇತ್ತು. ಸಾಲಿ ರಾಮಚಂದ್ರರಾಯರು ಹೇಳುವಂತೆ, ಕನ್ನಡ ಎನ್ನುವುದು 'ಗಾಯತ್ರಿಯದ್ಭುತ ಮಂತ್ರ.' ಕನ್ನಡದ ಬಗೆಗಿನ ಕೀಳರಿಮೆಯನ್ನು ಹೋಗಲಾಡಿಸುವುದು ಆಗಿನ ಸವಾಲಾಗಿತ್ತು. ಅದಕ್ಕಾಗಿ ಕನ್ನಡವೇ ಕನ್ನಡಿಗರ ಉಸಿರು ಎಂಬ ಸಂದೇಶವನ್ನು ಕವಿತೆಗಳ ಮೂಲಕ ಸಾರಲಾಯಿತು.

ಕನ್ನಡವನುಳಿದೆನಗೆ ಅನ್ಯ ಜೀವನವಿಲ್ಲ
ಕನ್ನಡವೆ ಎನ್ನುಸಿರು ಪೆತ್ತೆನ್ನತಾಯಿ
ಕನ್ನಡವೆ ಧನ ಧಾನ್ಯ ಕನ್ನಡ ಮನೆ ಮಾನ್ಯ
ಕನ್ನಡವೆ ಎನಗಾಯ್ತು ಕಣ್ಣು ಕಿವಿ ಬಾಯಿ ( ಕನ್ನಡಾಂಬೆಯ ಹಿರಿಮೆ)

ಬೆನಗಲ್ ರಾಮರಾಯರ ಕವಿತೆಯ ಈ ಸಾಲುಗಳು ಕನ್ನಡದ ಹಿರಿಮೆಯನ್ನು ಕನ್ನಡ ಮತ್ತು ಕನ್ನಡಿಗನ ಬಾಂಧವ್ಯವನ್ನು ಗುರುತಿಸಿಕೊಳ್ಳುತ್ತವೆ. ಕನ್ನಡವೆಂದರೆ ಕೇವಲ ಭಾಷೆಯಲ್ಲ, ಅದು ಪ್ರತಿಯೊಬ್ಬ ಕನ್ನಡಿಗನ ಜೀವನ ಮತ್ತು ಉಸಿರು. ಮಾತ್ರವಲ್ಲ, ಕನ್ನಡವನ್ನು ಬಿಟ್ಟು ಕನ್ನಡಿಗನಿಗೆ ಜೀವನವೇ ಇಲ್ಲ ಎಂಬುದನ್ನು ಕವಿ ಸಾರಿದ್ದಾರೆ.

ಕನ್ನಡದ ಆತಂಕಕ್ಕೆ ಗುರುತಿಸಬಹುದಾದ ಕಾರಣಗಳು ಹಲವಾರು. ಅವುಗಳಲ್ಲಿ ಕನ್ನಡಿಗರ ನಿರಾಸಕ್ತಿ, ಅನ್ಯಭಾಷಾ ಮೋಹ, ಅನ್ಯಭಾಷಾ ಹೇರಿಕೆ, ಅನ್ಯ ಸಂಸ್ಕೃತಿಯ ಅನುಕರಣೆ, ಸಂಪನ್ಮೂಲಗಳ ಬಳಕೆಯಲ್ಲಿ ಆತಂಕಗಳು ಮುಖ್ಯವೆನಿಸುತ್ತವೆ. ಇವನ್ನೆಲ್ಲ ಕವಿಗಳು ಕಾವ್ಯಗಳಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಕವನಗಳ ಅಧ್ಯಯನದ ಮೂಲಕ ಆತಂಕಗಳ ಅಭಿವ್ಯಕ್ತಿ ಅನಾವರಣಗೊಂಡ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

**ಕನ್ನಡಿಗರ ನಿರಾಸಕ್ತಿ**

ಪರಂಪರೆಯ ಸಾಹಿತ್ಯವನ್ನು ಗಮನಿಸುತ್ತಾ ಬಂದಾಗ ಕನ್ನಡಿಗರನ್ನು ಹೃದಯವಂತರು, ಉದಾರಿಗಳು, ಪರಭಾಷಾ ಸಹಿಷ್ಣುಗಳು ಮುಂತಾಗಿ ಗುರುತಿಸಲಾಗಿದೆ. ಆದರೆ ಈ ಗುಣಗಳು

ಕನ್ನಡಿಗರಿಗೆ ಮುಳ್ಳಾಗಿ ಪರಿಣಮಿಸಿವೆ. ಹಾಗಾಗಿ ನಾಡನ್ನು ದೋಚುವ ಕೆಲಸ ನಿರಂತರ ನಡೆದಿದೆ. ಕನ್ನಡಿಗರಿಗೆ ಭಾಷೆಯ ಬಗೆಗೆ ನಿರಾಸಕ್ತಿಯನ್ನು ಗಮನಿಸಿದ ಕವಿಗಳು ಅದರ ಬಗ್ಗೆ ಅಭಿಮಾನ ಮೂಡಿಸುವ ಕೆಲಸವನ್ನು ಮಾಡಿದ್ದಾರೆ.

ಕುವೆಂಪು ಅವರ 'ಬಾರಿಸು ಕನ್ನಡ ಡಿಂಡಿಮವ' ಕವನವನ್ನು ಇಲ್ಲಿ ವಿಶ್ಲೇಷಿಸಬಹುದು. ಕನ್ನಡಿಗರ ನಿರಾಸಕ್ತಿಗೆ ನೊಂದಮನಸ್ಸು ಕನ್ನಡ ಡಿಂಡಿಮವನ್ನು ಬಾರಿಸಿದೆ. ಕರ್ನಾಟಕದ ಹೃದಯ ಮಿಡಿಯ ಬೇಕಾದದ್ದು ಕನ್ನಡದ ಬಗೆಗೆ. ಆದರೆ ಕನ್ನಡಿಗರ ಬೇರೆ ಭಾಷೆಯ ಬಗೆಗಿನ ಮಿಡಿತವನ್ನು ಕವಿ ಖಂಡಿಸುತ್ತಾರೆ.

ಸತ್ತಂತಿಹರನು ಬಡಿದೆಚ್ಚರಿಸು
ಕಚ್ಚಾಡುವರನು ಕೂಡಿಸಿ ಒಲಿಸು
ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು
ಒಟ್ಟಿಗೆ ಬಾಳುವ ತೆರದಲಿ ಹರಸು (ಬಾರಿಸು ಕನ್ನಡ ಡಿಂಡಿಮವ)

ಸತ್ತಂತಿರುವ ಜನರನ್ನು ಎಚ್ಚರಿಸುವುದಕ್ಕೆ ಡಿಂಡಿಮದ ಅಗತ್ಯವಿದೆ ಎಂಬ ಅರಿವು ಕವಿಗಿದೆ. ಒಗ್ಗಟ್ಟಿಲ್ಲದ, ಸದಾ ಕಚ್ಚಾಡುವವರ ಮಧ್ಯೆ ಕನ್ನಡ ಮೂಲೆ ಸೇರುವುದು ಎಂಬ ಆತಂಕ ಕವನದಲ್ಲಿ ವ್ಯಕ್ತಗೊಳ್ಳುತ್ತದೆ. ಕನ್ನಡಿಗರ ಮೌಢ್ಯ, ಆಲಸ್ಯ, ಹೇಡಿತನವನ್ನು ಕಂಡು ಕವಿಯ ಮನಸ್ಸು ಸಂಕಟವನ್ನು ಅನುಭವಿಸಿದೆ. ದೊಡ್ಡರಂಗೇಗೌಡರ ಕವನವೊಂದನ್ನು ಈ ಹಿನ್ನೆಲೆಯಿಂದ ಗಮನಿಸಬಹುದು. ಕನ್ನಡದಲ್ಲಿ ಕನ್ನಡಿಗ ಅನಾಥ ಪ್ರಜ್ಞೆಯನ್ನು ಅನುಭವಿಸುತ್ತಿರುವುದನ್ನು ನೋಡಿ ಕವಿಮನಸ್ಸು ಆರ್ದ್ರಗೊಳ್ಳುತ್ತದೆ. ಆಗ ಕವಿಯ ಪ್ರಾರ್ಥನೆ,

ಕನ್ನಡದ ಗುಡಿಯಲ್ಲಿ ದಿನದಿನವು ನಡೆಯಲಿ
ಕನ್ನಡಕ್ಕೆ ಅಗ್ರಪೂಜೆ
ನಡೆಯಲ್ಲಿ ನುಡಿಯಲ್ಲಿ ಎಲ್ಲ ವ್ಯವಹಾರದಲಿ
ತುಂಬಿ ತುಳುಕಲಿ ಕನ್ನಡದ ಓಜೆ (ಎಚ್ಚರದ ಬಿಚ್ಚುನುಡಿ)

ಕನ್ನಡಿಗರ ಅಭಿಮಾನ ಮಲೆತುನಿಂತ ಬಗೆಯನ್ನು ಕವಿ ಪ್ರಶ್ನಿಸುತ್ತಾರೆ. ತನ್ನ ನೆಲದಲ್ಲಿಯೇ ಅನಾಥನಾದ ಕನ್ನಡಿಗ ಎಚ್ಚೆತ್ತುಕೊಂಡಿಲ್ಲ. 'ನಿನ್ನ ಮನೆಯಲ್ಲಿ ನೀನು ಪರಕೀಯನಾಗುವುದು ತರವೇ', 'ನಿನ್ನ ಬದುಕಿನಲ್ಲಿ ಕನ್ನಡದ ಸೊಗಡಿಲ್ಲ', 'ಮಾರಿಕೊಂಡೆಯ ನಿನ್ನ ಸ್ವಂತಿಕೆ' ಎನ್ನುತ್ತಾ,

ನೀನಿಡುವ ಪ್ರತಿ ಹೆಜ್ಜೆಯಲೂ
ನಿನ್ನತನದ ನದರಿರಬೇಕು
ನಿನ್ನ ನುಡಿ ಗೆಜ್ಜೆಯಲಿ

ಕನ್ನಡದ ಕದಿರು ಇರಬೇಕು

ಎಂಬುದಾಗಿ ಕನ್ನಡಿಗರಿಗೆ ಹಿತವಾದ ಬೋಧನೆಯನ್ನು ಮಾಡಿದ್ದಾರೆ. ಕೀಳರಿಮೆಯ ಬದುಕು ಅನ್ಯರಿಗೆ ಬದುಕಲು ಅವಕಾಶ ಮಾಡಿಕೊಡುತ್ತದೆ. ಕನ್ನಡಿಗ ಮೊದಲು ಇಂತಹ ಕೀಳರಿಮೆಯಿಂದ ಹೊರಬರಬೇಕಾಗಿದೆ. ಅನ್ಯಭಾಷೆಗಳು ವಿಷವ್ಯೂಹದಂತೆ ಸುತ್ತಿದಾಗ ನಮ್ಮಲ್ಲಿ ಎಚ್ಚರವಿರಬೇಕು. ತನ್ಮೂಲಕ ತಾಯಿನುಡಿಯನ್ನು ರಕ್ಷಿಸುವ ಜವಾಬ್ದಾರಿ ಕನ್ನಡಿಗರದ್ದಾಗಿರಬೇಕು. ಸ್ವಂತಿಕೆಯನ್ನು ಕಳೆದುಕೊಂಡ ಬದುಕು ಬದುಕಲ್ಲ. ನಾಡುನುಡಿಯನ್ನು ಮರೆತ ಕನ್ನಡಿಗರಿಗೆ ಕಾವ್ಯದ ಮೂಲಕ ಚಾಟಿಯೇಟು ನೀಡಿದವರು ವೀರಪ್ಪಮೊಯ್ಲಿ.

ಕನ್ನಡಿಗ ನೀನೆಲ್ಲಿ ?ಕನ್ನಡದ ನುಡಿಯೆಲ್ಲಿ?
ಮುನ್ನಡೆವ ನಲಿವೆಲ್ಲಿ? ಮುನ್ನಿನಾ ಜಗವೆಲ್ಲಿ?
ಮರೆತೆಯಾ ಮಾತೆಯನು ?ಮರೆತೆಯಾ ನೆಲೆಯನ್ನು?
ಸುಡು ನಿನ್ನ ಜನ್ಮವನು (ಎಲ್ಲಿಹರು ನನ್ನವರು)

ಕನ್ನಡನಾಡಿನಲ್ಲಿ ಕನ್ನಡವನ್ನು ಹುಡುಕುವ ಪರಿಸ್ಥಿತಿ ಇಲ್ಲಿದೆ. ಕನ್ನಡ ತಾಯಿ ಮತ್ತು ಕನ್ನಡನುಡಿಯನ್ನು ಮರೆತು ಬದುಕುವ ಕನ್ನಡಿಗನ ಜನ್ಮಕ್ಕೆ ಕವಿಯ ಶಾಪವಿದೆ. ಇಂತಹ ಜನ್ಮವನ್ನು ಸುಟ್ಟು ಬಿಡಬೇಕೆಂಬ ಆಕ್ರೋಶವಿದೆ. ಅಧಿಕಾರದ ಮದ, ಸಂಪತ್ತಿನ ದಾಹ, ಭೋಗದ ಸೆರೆ, ಮೋಹದ ಬಲೆಯಲ್ಲಿ ಕನ್ನಡಿಗರು ತಮ್ಮತನವನ್ನು ಮರೆತಿದ್ದಾರೆ. ಹೊಟ್ಟೆಕಿಚ್ಚು, ಮಾತೃದ್ರೋಹವನ್ನು ಬಗೆದು ಅಪಕೀರ್ತಿಗೆ ಪಾತ್ರರಾಗಿದ್ದಾರೆ. ಜನ ತಮ್ಮನ್ನು ತಿದ್ದಿಕೊಳ್ಳಬೇಕಾದ ಅನಿವಾರ್ಯತೆಯನ್ನು ತಿಳಿಸುತ್ತಾ, ಕನ್ನಡನಾಡಿನಲ್ಲಿ ಕನ್ನಡಿಗರನ್ನು ಹುಡುಕುವಂತಹ ಪರಿಸ್ಥಿತಿ ನಮ್ಮದಾಗದಿರಲಿ ಎಂಬ ಆಶಯವನ್ನು ಕವನ ವ್ಯಕ್ತಪಡಿಸುತ್ತದೆ.

ಕನ್ನಡಿಗರ ನಿರಾಸಕ್ತಿಯನ್ನು ಪು.ತಿ.ನ ಅವರ ಕವನವೊಂದು ಗುರುತಿಸಿದೆ. ಪ್ರತಿ ನಾಡಿಗೂ ಮನವೊಂದು ಉಂಟು. ಆ ಮನಸ್ಸಿನ ಮೊಗ ಅದರ ನುಡಿ ಎನ್ನುತ್ತಾ, 'ಕನ್ನಡನಾಡಿಗು ಮನವೊಂದಿರದೆ? ಏಕದಕೀತೆರೆಮರೆ ಮುಸುಡಿ ? ಎಂದು ಪ್ರಶ್ನಿಸಿದ್ದಾರೆ. ಸಮೃದ್ಧವಾದ ನಾಡಿನಲ್ಲಿ ನಮಗೆ ಯಾರ ಭಿಕ್ಷೆಯೂ ಬೇಕಾಗಿಲ್ಲ. ಭಿಕ್ಷೆಯಲ್ಲಿ ಬದುಕುವ ಬದುಕಿಗೆ ಯಾವ ಬೆಲೆಯೂ ಇಲ್ಲ.

ನಿಜ ಮೊಗ ಮರೆಸುವ ನಾಟಕರಂಗವೆ
ನಮ್ಮ ನಾಡು ?ಸಾಮಾಜಿಕರಾರು?
ಕಣ್ಣು ಮೂಗು ತುಟಿ ವಿರೂಪವಿಹವೆ?
ಮರೆಸಲದನ್ನು ಈ ಜಗದಿದಿರು? (ನಾಡಿನಮೊಗ)

ಮರೆಮಾಚಿ ಬದುಕುವುದಕ್ಕೆ ನಮ್ಮ ನಾಡಿಗೆ ಯಾವ ವಿರೂಪವು ಇಲ್ಲ, ಹೆಮ್ಮೆಯಿಂದ ಬದುಕುವ ಆಶಯವನ್ನು ಮೇಲಿನ ಸಾಲುಗಳು ವ್ಯಕ್ತಪಡಿಸಿವೆ. ಆನಂದಕಂದರು 'ಗೆದ್ದಕನ್ನಡ' ಕವನದ ಮೂಲಕ ನಾಡು-ನುಡಿಯ ಬಗೆಗಿನ ಅಭಿಮಾನ ಮತ್ತು ಕನ್ನಡದ ಸ್ಥಿತಿಯ ಬಗೆಗಿನ ಆತಂಕ ಎರಡನ್ನು ಗುರುತಿಸಿದ್ದಾರೆ. 'ತನ್ನ ಬೀಡಿನಲ್ಲಿ ತನಗೆ ಸ್ಥಾನವಿರದ ಕನ್ನಡ, ತನ್ನವರ ಪ್ರೀತಿಯನ್ನು ಕಳೆದುಕೊಂಡ ಕನ್ನಡ' (ಗೆದ್ದ ಕನ್ನಡ) ಎಂಬ ವಿಷಾದವನ್ನು ವ್ಯಕ್ತಪಡಿಸುತ್ತಾ, 'ಕನ್ನಡವಿದು ಮುನ್ನಿನಂತೆ ತಲೆಯನೆತ್ತಿ ಬಾಳಲಿ' ಎನ್ನುವ ಹಾರೈಕೆ ಮಾಡುತ್ತಾರೆ. ಕನ್ನಡಿಗರ ಮಧ್ಯೆ ಇರುವ ಬಿರುಕು ಮತ್ತು ನಾಡು-ನುಡಿ ಎದುರಿಸುತ್ತಿರುವ ಸಮಸ್ಯೆಗಳನ್ನು ಕವಿ 'ಒಡೆದ ಕನ್ನಡಿ' ಕವನದಲ್ಲಿ ವ್ಯಕ್ತಪಡಿಸಿದ್ದಾರೆ. 'ರನ್ನಗನ್ನಡಿಯೊಲಿಹ ಕನ್ನಡ ನಾಡು ಭಿನ್ನ ಭಿನ್ನವಾಗಿ ಬಿದ್ದಿರುವುದು ನೋಡು' ಎನ್ನುತ್ತಾ 'ಕನ್ನಡದ ಚಿಣ್ಣರೆಲ್ಲರೂ ಕಲೆತು ಕನ್ನಡದ ಕನ್ನಡಿಯನ್ ಒಂದುಗೂಡಿಸುವ' ಎಂಬ ಸಂದೇಶ ಸಾರುತ್ತಾ ಕನ್ನಡವನ್ನು ಸಮಗ್ರ ನೆಲೆಯಲ್ಲಿ ಕಟ್ಟುವ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಏಕೀಕರಣೋತ್ತರ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಕನ್ನಡ ಉಸಿರಾಗದಿರುವ ದುರಂತ ಮತ್ತು ನಾಡಿನೊಳಗೆ ಸೇರಬೇಕಾದ ಕೆಲವು ಪ್ರದೇಶಗಳು ನಾಡಿನಿಂದ ಹೊರಗುಳಿದ ಆತಂಕಗಳು ಕೇಳಿಬಂದುವು. ರಾಜಕೀಯವಾಗಿ ಒಂದುಗೂಡಿದ ಬಹುತೇಕ ಕನ್ನಡ ಪ್ರದೇಶಗಳನ್ನು ಹೊಂದಿದ್ದ ಕರ್ನಾಟಕವು ಏಕೀಕರಣದ ಆಶಯವನ್ನು ಸಾಧಿಸಲಾಗದೇ ಉಳಿದದ್ದು ಇಂದಿನ ದುರಂತ. ಈ ವಿಷಾದ ಜಿ.ಎಸ್.ಎಸ್. ಅವರ ಕವನದಲ್ಲಿ ವ್ಯಕ್ತಗೊಂಡಿದೆ.

ರಾಜ್ಯೋದಯದೊಂದಿಗೆ ವ್ಯಾಜ್ಯೋದಯವಾಯಿತು
ನಮ್ಮೊಳಗೊಳಗೆ
ಕನ್ನಡತನ ಕನ್ನಡ ಸಂಸ್ಕೃತಿ ಈ ಎಲ್ಲವೂ ಉಳಿದುವು
ಎಲ್ಲೋ ತಳದೊಳಗೆ
ಅಂತೂ ಕನ್ನಡ ರಾಜ್ಯೋದಯವಾಗಿದೆ ಹೊರಗೆ
ಇನ್ನೂ ಕನ್ನಡ ರಾಜ್ಯೋದಯವಾಗುವುದಿದೆ
ನಮಗೂ ನಿಮಗೂ ಒಳಗೆ (ಕನ್ನಡ ರಾಜ್ಯೋದಯ)

ಪ್ರತಿಯೊಬ್ಬ ಕನ್ನಡಿಗನ ಅಂತರಂಗದೊಳಗೆ ರಾಜ್ಯೋದಯವಾಗಬೇಕು. ಕನ್ನಡ ಭಾಷೆ ಸಂಸ್ಕೃತಿಯ ಬಗೆಗೆ ಕನ್ನಡಿಗರಿಗಿದ್ದ ನಿರಾಸಕ್ತಿಯನ್ನು ಕವಿ ಗುರುತಿಸಿದ್ದಾರೆ. ರಾಜ್ಯೋದಯವಾಯಿತು ಎಂದು ಕನ್ನಡಿಗರು ಸಂಭ್ರಮ ಪಡುವಂತಿಲ್ಲ. ಯಾಕೆಂದರೆ, ಇದರ ಜೊತೆಗೆ ವ್ಯಾಜ್ಯೋದಯವೂ ಆಗಿದೆ. ಗಡಿ ಸಮಸ್ಯೆ, ಭಾಷಿಕ ಸಮಸ್ಯೆಯೂ ಕಾಣಿಸಿಕೊಂಡಿದೆ.

ಅವರ ಇನ್ನೊಂದು ಗೀತೆ 'ಕನ್ನಡ ಕುಲಬಾಂಧವರ ಸ್ವಾಗತ ಗೀತೆ' ಕನ್ನಡಿಗರ ಉದಾರತೆಯ ಕುರಿತು ಇಲ್ಲಿ ವ್ಯಂಗ್ಯವಿದೆ. ಕನ್ನಡಿಗರು ರಾಜ್ಯಕ್ಕೆ ಹೊರಗಿನಿಂದ ಬಂದವರನ್ನು ಸ್ವಾಗತಿಸುವ ರೀತಿಯಲ್ಲಿ ಹರಿತವಾದ ವಿಡಂಬನೆ ಕಾಣಿಸುತ್ತದೆ. 'ಒಳಗೆ ದಯಮಾಡಿಸಿ ಇದೆಲ್ಲವೂ ನಿಮ್ಮದೇ ಮಹಾಸ್ವಾಮಿ' ಎನ್ನತ್ತಾ ನಡುಬಗ್ಗಿಸುವ ಪರಿಯನ್ನು ಕನ್ನಡಿಗರು ಕರಗತಮಾಡಿಕೊಂಡಿದ್ದಾರೆ.

ಹೇಳಿ. ಯಾವ ಭಾಷೆಯನ್ನಾದರೂ ನಾವು
ಕಲಿಯಲು ತಯಾರು, ನಮ್ಮದಿರುತ್ತದೆ
ಶತಮಾನಗಳಿಂದ ಇದ್ದೇ ಇದೆ ಬಿಡಿ
ನಮ್ಮ ಔದಾರ್ಯ ನೀವು ಕಾಣಿರಿ ಸ್ವಾಮಿ
ನಿಮ್ಮಂತೆ ಭಾಷೆ ಭಾಷೆ ಎಂದು ಬಡಕೊಂಡು
ಸಾಯುವವರಲ್ಲ, ನಾವು ಕನ್ನಡಿಗರು.

(ಕನ್ನಡ ಕುಲಬಾಂಧವರ ಸ್ವಾಗತ ಗೀತೆ)

ಕನ್ನಡತನವನ್ನು ಬದಿಗೆ ಸರಿಸಿ ಹೇಗೆ ಕನ್ನಡಿಗರು ಅನ್ಯ ಭಾಷೆ, ಸಂಸ್ಕೃತಿಗೆ ಶರಣಾಗಿದ್ದಾರೆ ಎಂಬುದನ್ನು ಇಲ್ಲಿ ಗಮನಿಸಬಹುದು, ಬೇರೆ ಭಾಷೆಗಳನ್ನು ಕಲಿಯುವ ಆಸಕ್ತಿ, ನಮ್ಮದೇ ಭಾಷೆಯ ಬಗೆಗೆ ನಿರಾಸಕ್ತಿ. 'ಕಂದ ನಿಮ್ಮವನೆಂದು ಕಾಣಿರಿ ತಬ್ಬಲಿಯನೀ ಕರುವನು' ಎಂಬಲ್ಲಿ ದಾಸ್ಯತನಕೆ ಶರಣಾಗಿ ಅಸ್ಮಿತೆಯನ್ನು ಕಳೆದುಕೊಂಡ ಬಗ್ಗೆ ಮರುಕವಿದೆ. ಕನ್ನಡಿಗರ ನಿರಾಸಕ್ತಿಯಿಂದ ಕನ್ನಡ ತಾಯಿ ಸಂಕಟವನ್ನು ಅನುಭವಿಸಿದ ಪರಿಯನ್ನು ಗೀತಾ ಅವರು ಗುರುತಿಸಿದ್ದಾರೆ. ಭವ್ಯ ಇತಿಹಾಸ ಮತ್ತು ತುಂಬಿದ ಕಣಜಗಳಿಂದ ಮೆರೆದಿದ್ದ ಕನ್ನಡ ತಾಯಿಯನ್ನು ಮೋಸದಿಂದ ದೋಚಲಾಗಿದೆ. ಯಾವ್ಯಾವುದೋ ಕಾರಣಕ್ಕಾಗಿ ಒಳಗಡೆ ಪ್ರವೇಶಿಸಿ ಸಂಪತ್ತನ್ನು ಕೊಳ್ಳೆಹೊಡೆದು ತೃಪ್ತರಾಗದೆ, ನಾಡಿಗೆ ದ್ರೋಹ ಬಗೆದ ರೀತಿಯನ್ನು ಗುರುತಿಸುತ್ತಾ, ದಾಸ್ಯದಿಂದ ಹೊರಬಂದ ಕನ್ನಡಮ್ಮನ ಸ್ಥಿತಿಯನ್ನು ವಿವರಿಸುತ್ತಾರೆ.

ದಾಸ್ಯದಲ್ಲಿ ನೊಂದವಳ ಮನಕೆ ನೀಡದೆ ಮುದವ
ಅಳಿದುಳಿದ ಸಿರಿಗೆ ಹರಿಯಬಿಟ್ಟರು ಮನವ
ಕಣ್ಣು ಕಿವಿ ಶಿರವ ತನ್ನದೆಂದೆನುತ
ಕೊಬ್ಬಿ ಎಳೆದರು ಅವಳ ಬಾಂಧವ್ಯ ಮರೆಯುತ್ತಾ (ಭಗ್ನಹೃದಯಿ)

ತಾಯಿ ಎನ್ನುವುದನ್ನು ಮರೆತು ಅವಳ ಸಂಪತ್ತಿಗಾಗಿ ಕಚ್ಚಾಡಿದ ರೀತಿಯಿದು. ಬಾಂಧವ್ಯವನ್ನು ಬದಿಗೊತ್ತಿ ಸ್ವಾರ್ಥಿಗಳಾಗಿ ಮೆರೆದ ಪರಿಯನ್ನು ಕವಿತೆ ಅನಾವರಣಗೊಳಿಸಿದೆ. 'ಗರ್ಭದಲಿ ಹುದುಗಿಟ್ಟ ಬೀಜಗಳ ಹೆಕ್ಕಿದರು', 'ಬಂಜರಾದಳು ಮಾತೆ' ಮುಂತಾದ ಸಾಲುಗಳು

ಕನ್ನಡಿಗರ ಮನಸ್ಥಿತಿಯನ್ನು ಚಿತ್ರಿಸಿವೆ. ಅಂತಹ ಮಕ್ಕಳನ್ನು ನೋಡಿ ಕನ್ನಡ ತಾಯಿ ಕೊರಗಿ ಸೊರಗುತ್ತಾಳೆ. ಈ ತಾಯಿಗೆ ಸಂಕಟ ಪರರಿಂದಲ್ಲ, ತನ್ನದೇ ಮಕ್ಕಳಿಂದ ಎಂಬುದು ಗಮನಿಸಬೇಕಾದ ಸಂಗತಿ.

**ಅನ್ಯಭಾಷಾ ಮೋಹ**

ಆಧುನೀಕರಣದ ಪ್ರಭಾವದಿಂದಾಗಿ ಕನ್ನಡಿಗರು ಇಂಗ್ಲೀಷಿನ ಮೋಹಕ್ಕೆ ಒಳಗಾದುದರಿಂದ ಕನ್ನಡ ಆತಂಕದ ಸ್ಥಿತಿಯನ್ನು ಎದುರಿಸುತ್ತಿದೆ. ಬದಲಾವಣೆ ಜಗತ್ತಿನ ನಿಯಮ. ಜಾಗತೀಕರಣದ ಪ್ರಭಾವದಿಂದಾಗಿ ಕನ್ನಡ ನೆಲ ಅನೇಕ ಬದಲಾವಣೆಗಳಿಗೆ ತನ್ನನ್ನು ತೆರೆದುಕೊಂಡಿದೆ. ಅನ್ಯ ಭಾಷಿಕರಿಗೆ ಬದುಕಿನ ಅವಕಾಶಗಳನ್ನು ಆಗು ಮಾಡಿಕೊಟ್ಟಿದೆ. ಆದರೆ ಇಂತಹ ಕನ್ನಡನಾಡು ನೆಲದ ಸತ್ವವಾದ ಭಾಷೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಯಾವುದೇ ಒಂದು ನಾಡು ಅಲ್ಲಿಯ ಭಾಷೆಯ ಕುರಿತು ಆತಂಕದಿಂದ ಯೋಚಿಸುವುದಾದರೆ, ಅದಕ್ಕಿಂತ ವಿಪರ್ಯಾಸದ ಸಂಗತಿ ಯಾವುದು ಇಲ್ಲ. ಕನ್ನಡ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುವಲ್ಲಿ ಸಾಕಷ್ಟು ಸವಾಲುಗಳನ್ನು ಎದುರಿಸಿದೆ.

ವಸಾಹತುಶಾಹಿಯ ಜೊತೆಗೆ ನಾಡನ್ನು ಪ್ರವೇಶಿಸಿದ ಇಂಗ್ಲಿಷ್ ಭಾಷೆಯು ತನ್ನ ಯಾಜಮಾನ್ಯ ದಿಂದ ಕನ್ನಡದ ಅಸ್ತಿತ್ವಕ್ಕೆ ಸವಾಲಾಗಿ ಪರಿಣಮಿಸಿತು. ಇಂಗ್ಲಿಷ್ ಮತ್ತು ಕನ್ನಡ ಪರಸ್ಪರ ನೀಡಿ –ಪಡೆದು ಬೆಳೆಯಬಹುದಾದ ಆಲೋಚನೆಯನ್ನು ಬಿ.ಎಂ.ಶ್ರೀ ಗುರುತಿಸಿಕೊಟ್ಟು, ಕನ್ನಡವೇ ನೆಲದ ಭಾಷೆಯಾಗಿರಬೇಕಾದ ಸತ್ಯವನ್ನು ಪ್ರತಿಪಾದಿಸಿದರು. ನಂತರದ ಎಲ್ಲಾ ಕವಿಗಳು ಈ ಕುರಿತು ಆಲೋಚಿಸಿದ್ದಾರೆ. ಅನ್ಯ ಭಾಷೆಯ ಮೇಲಿನ ಮೋಹದಿಂದ ನಮ್ಮತನವನ್ನು ಕಳೆದುಕೊಳ್ಳಬಾರದೆಂಬ ಸಂದೇಶವನ್ನು ನೀಡಿದರು. ಕೆಲವು ಕವನಗಳ ಆಧಾರದಿಂದ ಇದನ್ನು ವಿಶ್ಲೇಷಿಸಬಹುದು.

ಕನ್ನಡವು ಕನ್ನಡಿಗರ ಉಸಿರಾಗಬೇಕು. ಕನ್ನಡ ಜನರ ಭಾವದಲ್ಲಿ ಕನ್ನಡ ವಜ್ರ ಹೊಳೆಯುತ್ತಿರಬೇಕು. ಕನ್ನಡಿಗರ ಮನಸ್ಸಿನಲ್ಲಿ ಕನ್ನಡವೇ ಮಿಡಿಯುತ್ತಿರಬೇಕು. ತನ್ಮೂಲಕ ಕನ್ನಡ ತಾಯಿಯ ಹೆಸರು ಉಳಿಯಬೇಕು, ಬೆಳೆಯಬೇಕು ಎನ್ನುವುದು ಶಿವಕುಮಾರ್ ಅವರ 'ಹೆಸರು ಉಳಿಸಿ' ಕವನದ ಆಶಯ. ಅನ್ಯ ಭಾಷೆ ಮತ್ತು ಅನ್ಯಸಂಸ್ಕೃತಿಯ ಅನುಕರಣೆಯಿಂದ ನಮ್ಮನ್ನು ನಾವು ರಕ್ಷಣೆ ಮಾಡಿಕೊಳ್ಳುವ ಅನಿವಾರ್ಯತೆ ಇದೆ ಎಂಬ ಆಶಯ ಜಗದೀಶ ದುದ್ಗಿ ಅವರದು. ಪರದೇಶದ ಪರಭಾಷೆಯ ವ್ಯಾಮೋಹ ನಮಗೆ ಎಂದಿಗೂ ಬೇಕಾಗಿಲ್ಲ ಎನ್ನುತ್ತಾ,

ನಮಗಿಲ್ಲ ಡ್ಯಾಡಿ–ಮಮ್ಮಿ
ಎನ್ನುವ ಮೋಹ
ನಮಗುಂಟು ಅಪ್ಪ ಅವ್ವ
ಎನ್ನುವ ವ್ಯಾಮೋಹ
ಪರಂಗಿಗಳ ಭಾಷೆ ವೇಷ ಭೂಷಣ
ರೀತಿ–ನೀತಿಗಳನ್ನೆ ಅನುಕರಿಸಿ
ಅನುಸರಿಸಬೇಕೆಂದೇನಿಲ್ಲವಲ್ಲ (ನಾವು ಕನ್ನಡಿಗರು)

ತನು ಕನ್ನಡ ಮನ ಕನ್ನಡ ಕಣಕಣದಲ್ಲೂ ಕನ್ನಡ ಅನುರಣಿಸಬೇಕೆಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಅನ್ಯಭಾಷೆ, ವೇಷ, ಭೂಷಣಗಳಿಗೆ ಮರುಳಾಗುವ ಮತ್ತು ಅದನ್ನೇ ಅನುಸರಿಸುತ್ತಿರುವ ಜನಕ್ಕೆ ಹಿತವಾದ ಬೋಧನೆ ಇಲ್ಲಿದೆ. ನಮ್ಮನ್ನು ಆವರಿಸಿರುವ ಪಾಶ್ಚಿಮಾತ್ಯದ ಮಾಯೆಯನ್ನು ಬಿಡಿಸು ಎಂಬುದಾಗಿ ಮಹೇಶ ದೇಶಪಾಂಡೆಯವರು ಕನ್ನಡಮ್ಮನನ್ನು ವಿನಂತಿಸಿಕೊಂಡಿದ್ದಾರೆ. 'ಕನ್ನಡತಾಯಿ, ಬಿಡಿಸು ನಮ್ಮೊಳಗಿನ ಪಾಶ್ಚಿಮಾತ್ಯದ ಮಾಯೆ ಅಧೋಗತಿಗೆ ಹೋಗುವ ಮುನ್ನ ನಮ್ಮನ್ನು ಕಾಯೆ' (ಕನ್ನಡಮ್ಮನ ಹರಕೆ).

ಕನ್ನಡ ತಾಯಿಯ ಬಗೆಗೆ ಕವಿಗಳು ಸೃಷ್ಟಿಸಿದ ಅಮೂರ್ತ ರೂಪಗಳನ್ನು ನೆನಪಿಸಿಕೊಂಡು 'ವರ್ಷಕ್ಕೊಮ್ಮೆ ನಿನ್ನ ಪೂಜಿಸಿ ಮಾಡುವೆವು ಘೋಷಣೆ, ನಿನ್ನ ಕಣ್ಣಿಗೆ ಮಣ್ಣೆರಚಿ ಅನ್ಯ ಭಾಷೆಗೆ ಪೋಷಣೆ' ಎನ್ನುತ್ತಾರೆ. ಕನ್ನಡಿಗರು ಬದಲಾಗಿದ್ದಾರೆ. ಕನ್ನಡ ನಾಡು –ನುಡಿಯ ಕಾಳಜಿಯನ್ನು ವ್ಯಕ್ತಪಡಿಸುವುದು ಕನ್ನಡಿಗರ ಧರ್ಮವಾಗಿ ಕಾಣಿಸಿಕೊಳ್ಳುತ್ತಿದೆ. ಇದನ್ನು ಕವಿ ತೀವ್ರವಾಗಿ ಖಂಡಿಸುತ್ತಾರೆ. ಕವಿಯ ಮಾತಿನ ಪ್ರಕಾರ ಕನ್ನಡಿಗರ ಅಂತರಂಗದಲ್ಲಿ ಕನ್ನಡ ಇನ್ನೂ ಮನೆ ಮಾಡಿಲ್ಲ. ಪರರ ಆಕ್ರಮಣ ನಾಡಿನ ಭಾಷೆ, ಸಂಸ್ಕೃತಿಯ ಮೇಲೆ ಪರಿಣಾಮ ಬೀರುತ್ತಿದೆ, ಹಾಗಾಗಿ ಕವಿಯು 'ಮನೆ ಮುರುಕರನ್ನು ಹತ್ತಿಕ್ಕಲು ನಿನ್ನ ಮಕ್ಕಳಿಗೆ ಕೊಡುತಾಯೆ ಒಂದಾಗುವ ಮನ' ಎಂಬುದಾಗಿ ನಿವೇದಿಸುತ್ತಾರೆ. ಕನ್ನಡ ತಾಯಿಯ ನೆಲವೆಲ್ಲಾ ಸಾಹಿತ್ಯದ ನಂದನವನವಾಗಲಿ ಎಂಬ ಹಂಬಲವನ್ನು ವ್ಯಕ್ತಪಡಿಸುತ್ತಾರೆ.

ನುಡಿಗೆ ಅನ್ಯಾಯವೆಸಗುವ ವ್ಯಕ್ತಿಗಳ ಬಗ್ಗೆ ಆಕ್ರೋಶವನ್ನು ವ್ಯಕ್ತಪಡಿಸಿದವರು ವಿಶ್ವನಾಥ ಜಿ ಎಸ್. ತಾಯ್ನುಡಿಗೆ ಸಂಚಕಾರ ಬಂದಿದೆ. ಅದಕ್ಕೆ ಕಾರಣವೂ ಇದೆ.

ಆಧುನಿಕತೆಯಬ್ಬರದ ಫ್ಯಾಶನ್ನುಗಳುಬ್ಬರದ
ಖರಾಮತ್ತಿನಲ್ಲಿ ನಮ್ಮ ನಲ್ನುಡಿಗೆ ರಾಹು ಹಿಡಿದಿದೆ

ಕನ್ನಡ ನುಡಿದನೆಂದರೆ ಇವನಾವ ಗುಗ್ಗು

ಇಂಗ್ಲೀಷ ಕಲಿತಿಯೇ ಇಲ್ಲದ ಜುಗ್ಗು (ಕನ್ನಡಕ್ಕೆ ಕೋಳ)

ಉಡುಗೆ-ತೊಡುಗೆಗಳಲ್ಲಿ ಪಾಶ್ಚಿಮಾತ್ಯರ ಅನುಕರಣೆ. ಬಳಸುವ ಭಾಷೆಯು ಅವರದೇ. ಇದು ಆಧುನಿಕ ಬದುಕಿನ ರೀತಿಯಾಗಿ ಪರಿಣಮಿಸಿದೆ. ಹಸುಳೆಯಿಂದ ತೊಡಗಿ ನರೆಗೂದಲವರೆಗೂ ಇಂಗ್ಲೀಷಿನದೇ ಮೋಹ. 'ನಮ್ಮ ನೆಲದ ಅನ್ನ ಉಂಡವರಿಗೆ ಎಷ್ಟು ಪೊಗರು' ಎನ್ನುತ್ತಾರೆ ಕವಿ. ನೆಲಕ್ಕೆ, ಭಾಷೆಗೆ ಅನ್ಯಾಯ ಬಗೆದ ಇಂತಹ ಮಂದಿಯಿಂದ ಕನ್ನಡದ ಜಾಜಿ ಅರಳುತ್ತಿಲ್ಲ. ಮುಗ್ಧ ಮನಸ್ಸುಗಳು ಜಡ ಯಂತ್ರದಂತೆ ಆಗುತ್ತಿವೆ. ಅಧಿಕಾರದ ದರ್ಪದಿಂದ, ರಾಜಕೀಯದ ವಿಷವರ್ತುಲದಿಂದ, ಕನ್ನಡವನ್ನು, ಕನ್ನಡಿಗರನ್ನು ದಮನಗೊಳಿಸುತ್ತಿದ್ದಾರೆ ಎಂಬ ನೋವು ಇಲ್ಲಿದೆ. ಕನ್ನಡಿಗರು ಎಚ್ಚೆತ್ತುಕೊಳ್ಳಬೇಕಾದ ಬಗೆಯನ್ನು ಗುರುತಿಸುತ್ತಾರೆ.

ಕನ್ನಡ ನುಡಿಯಲೇನು ಬಿಕ್ಕು?

ಮುರಿಯಬೇಕಿವರ ಸೊಕ್ಕು

ದುಡಿಯಬೇಕಿದೆ ನಾವು ನಾಡಿನೇಳಿಗೆಗೆ

ಒಕ್ಕೊರಲಿನಿಂದ ವ್ಯಯಿಸಬೇಕಿದೆ ಶಕ್ತಿ.

ಎಂಬುದಾಗಿ ಇಂದಿನ ಕನ್ನಡದ ಸ್ಥಿತಿಯನ್ನು ತಿಳಿಸುತ್ತಾರೆ. ಆಂಗ್ಲ ಮೋಹ ನಮ್ಮನ್ನು ನಮ್ಮತನವನ್ನು ಅಧಃಪತನಕ್ಕೆ ತಳ್ಳುತ್ತಿದೆ. ಭಾಷೆಯ ಅರಿವು ಅಪಾಯವಲ್ಲ. ಯಾಕೆಂದರೆ, ಕನ್ನಡದ ಅನೇಕ ಕವಿಗಳು ಬಹುಭಾಷೆಗಳನ್ನು ತಿಳಿದವರು. ಆದರೆ ಅವರು ಅನ್ಯಭಾಷೆಯ ಪಾಶಕ್ಕೆ ಒಳಗಾಗಿಲ್ಲ. ಇದು ಮಾದರಿಯಾಗಬೇಕೇ ಹೊರತು ಅಂಧಾನುಕರಣೆಯಲ್ಲ. ಶಕ್ತಿ ವ್ಯಯಿಸಬೇಕಾಗಿರುವುದು ಭಾಷೆಯ ಉಳಿವಿಗೆ ಎಂಬ ಸತ್ಯ ಕನ್ನಡಿಗರ ಕಣ್ಣುತೆರೆಸಬೇಕಾಗಿದೆ. ಕನ್ನಡಿಗರ ನಾಲಗೆಯಲ್ಲಿ ನಿತ್ಯ ನಡೆದಾಡಬೇಕಾದ ಭಾಷೆ ಕನ್ನಡ. ಅದರ ಬಗೆಗೆ ನಮ್ಮಲ್ಲಿ ಪಾಶ ಬೆಳೆಯಬೇಕು.

ಬಿ ಆರ್ ಜೋಯಪ್ಪ ಅವರು ಕನ್ನಡವನ್ನು ಉಳಿಸಬೇಕಾಗಿ ಗೆಳೆಯನಲ್ಲಿ ನಿವೇದಿಸಿಕೊಳ್ಳುತ್ತಾರೆ. ಆ ನಿವೇದನೆ ಹೀಗಿದೆ.

ಈ ನೆಲದ ಸಾರ ಸೋರ ಬಿಡಬೇಡ ಗೆಳೆಯ

ರಸ ಹೀರ ಬರುವ ಪರದುಂಬಿಗಳ ಬಿಡಲು ಬ್ಯಾಡಾ

ಮನೆಯೊಡೆಯ ಪರನಾಗಲು ಬೇಡ

ಹೊತ್ತು ಕೂಳಿನ ತುತ್ತು ನೀನಾಗಬೇಡ

ಒಂದೊಮ್ಮೆ ನೊಂದು-ಬೆಂದ ನಾಡಿದು ಗೆಳೆಯ
ಹೆತ್ತೊಡಲ ಹೊತ್ತೊಡಲ ಮತ್ತೆ ನೋಯಿಸಬೇಡ
ನೀಡುವಕೈಯುಂಟು ಅದರಲ್ಲಿ ಸ್ವಾರ್ಥವಡಗುಂಟುಕೇಳು ಗೆಳೆಯ

(ಗೆಳೆಯನಿಗೊಂದು ನಿವೇದನೆ)

ನೆಲದ ಸತ್ವವನ್ನು ಪರರಿಗೆ ಒಪ್ಪಿಸದಿರೆಂಬ ನಿವೇದನೆ ಕವಿಯದು. ರಸ ಹೀರಲು ಬರುವ ಪರ ದುಂಬಿಗಳಿಗೆ ಅವಕಾಶ ನೀಡಬಾರದು. ನಾಡು ಈಗಾಗಲೇ ನೊಂದು ಬೆಂದಿದೆ. ಮತ್ತೆ ಅದಕ್ಕೆ ಅವಕಾಶ ನೀಡಬೇಡೆಂದು ಕಳಕಳಿಯಿಂದ ವಿನಂತಿಸಿಕೊಂಡಿದ್ದಾರೆ. ಕನ್ನಡಿಗರ ಔದಾರ್ಯವನ್ನು ಪರರು ಚೆನ್ನಾಗಿ ಬಳಸಿಕೊಂಡಿದ್ದಾರೆ. ಹಾಗಾಗಿಯೇ ಹಾಡಿ ಹೊಗಳಿದಾಗ ಎದೆಯುಬ್ಬಿ ನಡೆಯಬೇಡ ಎನ್ನುತ್ತಾರೆ ಕವಿ. ಜೊತೆಗೆ 'ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿಯಬೇಡ'. ದೀಪ ಮಂಕಾಗಿ ನಂದಿ ಹೋಗುವ ಮುನ್ನ ಹೊಸ ಬತ್ತಿ ತಂದು ಎಣ್ಣೆ ತುಂಬಿ ಹಚ್ಚಿದ ದೀಪ ಆರದಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿಯ ಕುರಿತು ಈ ಕವನ ಬೋಧನೆ ಮಾಡುತ್ತದೆ. ಕನ್ನಡದ ನೆಲದಲ್ಲಿ 'ಹಳ್ಳಿ ನಗರವಾಗಿ, ಕಾಂಕ್ರೀಟು ಕಾಡಾಗಿ, ರಕ್ಕಸ ಕಾರ್ಖಾನೆಗಳು ಮಸಣವ ತೋಡುತ್ತಿರಲು ಕೈಬೀಸಿ ಕರೆಯುತ್ತಿವೆ ಬನ್ನಿ ಮಸಣದಲಿ ಮೌನರಾಗಿರೆಂದು', ಎನ್ನುತ್ತಾ ಕನ್ನಡ ನೆಲ ಸ್ವಾರ್ಥಿಗಳ ಕೈಸೇರಿ ಅಪಾಯವನ್ನು ತಂದುಕೊಂಡು ಅಧಃಪತನವನ್ನು ಕಾಣುತ್ತಿದೆ. ಆದುದರಿಂದ ಇದನ್ನು ಅರ್ಥ ಮಾಡಿಕೊಂಡು ನೆಲದ ಸತ್ವವನ್ನು ಉಳಿಸಿಕೊಳ್ಳುವಂತೆ ಕರೆಕೊಟ್ಟಿದ್ದಾರೆ.

ಜಾಗತೀಕರಣದ ಪ್ರಭಾವದಿಂದ ಎಲ್ಲವೂ ಬದಲಾಗುತ್ತಿದೆ. ನಮ್ಮತನ ಇದರ ಜೊತೆ ಕೊಚ್ಚಿ ಹೋಗುತ್ತಿದೆ. ಸ್ವಂತ ಅಸ್ತಿತ್ವ ಇಲ್ಲವೆಂದ ಮೇಲೆ ಅದು ಸುಡುಗಾಡಿಗೆ ದಾರಿ. ಇಲ್ಲಿ ಬಳಸಲಾದ 'ಕಾಂಕ್ರೀಟು ಕಾಡು', 'ರಕ್ಕಸ ಕಾರ್ಖಾನೆಗಳು' ಮುಂತಾದ ಪದಗಳು ಭಯ ಮೂಡಿಸುವಂತಿವೆ. ಕವಿ ಉದ್ದೇಶಪೂರ್ವಕವಾಗಿಯೇ ಇದನ್ನು ಬಳಸಿದ್ದಾರೆ. ಸುಡುಗಾಡಿನತ್ತ ಜನ ಕಣ್ಣೆತ್ತಿಯೂ ನೋಡುವುದಿಲ್ಲ. ಅಂತಹ ಪರಿಸ್ಥಿತಿ ನಾಡು-ನುಡಿಗೆ ಬಾರದಿರಲಿ ಎಂಬ ನೆಲೆಯಿಂದ ಕನ್ನಡ ಜನತೆಯನ್ನು ಕವಿ ಎಚ್ಚರಿಸುತ್ತಾರೆ.

ಹೊಸಗನ್ನಡ ಕಾವ್ಯ ಪ್ರಪಂಚದೊಳಗೆ ವಚನಗಳ ರಚನೆಯಿಂದ ತಮ್ಮನ್ನು ಗುರುತಿಸಿಕೊಂಡವರು ಕಮಲಾಹಂಪನಾ. ಕಳ್ಳತನಕ್ಕೆ, ಸುಳ್ಳು ಹೇಳಿದ್ದಕ್ಕೆ, ಕಾಮುಕ ದೃಷ್ಟಿಗೆ, ಕದ್ದು ಓಡಿದವನಿಗೆ, ವ್ಯಭಿಚಾರಿಗೆ, ಕಠಿಣವಾದ ಶಿಕ್ಷೆ ಇದೆ. ಆದರೆ ಕನ್ನಡ ದ್ರೋಹಿಗೆ ಎಂಥ ಶಿಕ್ಷೆ ಇದೆ ಎನ್ನುವುದು ಇವರ ಪ್ರಶ್ನೆ. ಭಾಷೆಗೆ ಮತ್ತು ನಾಡಿಗೆ ದ್ರೋಹ ಬಗೆವ ಜನರನ್ನು ಒಳಗೊಂಡಿರುವ

ಸಮಾಜವನ್ನು ವಚನಗಾರ್ತಿ ಸೂಕ್ಷ್ಮವಾಗಿ ಗಮನಿಸಿದ್ದಾರೆ. ಅಂಥವರಿಗೂ ಶಿಕ್ಷೆ ಆಗಬೇಕೆಂಬ ಭಾವ ಇಲ್ಲಿದೆ. ಕನ್ನಡನಾಡಿನ ಅನ್ನವನ್ನು ತಿಂದು ನಾಡಿನ ಒಳಿತನ್ನು ಬಯಸುವ ಮಂದಿಗೆ ಇದು ಚಾಟಿಯೇಟು.

ನಿನ್ನ ಪ್ರಚಾರಕ್ಕೆ ಬೇಕು ಕನ್ನಡ
ನಿನ್ನ ಪ್ರಸಿದ್ಧಿಗೆ ಬೇಕು ಕನ್ನಡ
ನಿನ್ನೆಲ್ಲ ಡಂಭಾಚಾರಕೆ ಕನ್ನಡ (ವಚನಗಳು)

ಎನ್ನುತ್ತಾ, 'ನುಡಿ ಪ್ರೇಮ ನಿನಗಿಲ್ಲ ಪರಿಕಿಸಿಕೊಳ್ಳುವ ಅಂತರಂಗವು ಇಲ್ಲ, ನಿನಗಿಲ್ಲ ಕನ್ನಡದ ಮಾನ ಅಭಿಮಾನ ಕಮಲಪ್ರಿಯ' ಎನ್ನುವಲ್ಲಿ ಕನ್ನಡವು ಅಂತರಂಗದ ಭಾಷೆಯಾಗಬೇಕು ಎಂಬ ಇಂಗಿತವನ್ನು ವ್ಯಕ್ತಪಡಿಸುತ್ತಾರೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯವನ್ನು ಮತ್ತೆ ಪುನಾರಚಿಸುವ ಕೆಲಸವನ್ನು ಕಮಲಾಹಂಪನಾ ಮಾಡಿದ್ದಾರೆ. 'ಕಮಲಾಪ್ರಿಯ' ಎನ್ನುವುದು ಇವರ ಅಂಕಿತನಾಮ.

'ಹಾಡೆಲ್ಲಿದೆಹೇಳಿ' ಡಿ. ಸಿ. ಪೂರ್ಣಿಮಾ ಅವರ ಕವನ. 'ಉದಯವಾಯಿತೇ ನಮ್ಮ ಚೆಲುವ ಕನ್ನಡ ನಾಡು' ಎಂಬ ಪ್ರಶ್ನೆಯೊಂದಿಗೆ ಕವನ ಆರಂಭವಾಗುತ್ತದೆ. ಉದಯವಾದ ನಾಡಿನಲ್ಲಿ ದ್ವೇಷ ತಾಂಡವವಾಡುತ್ತಿದೆ. ಎದೆಗೆ ಇರಿಯುವ ಧೈರ್ಯವಿಲ್ಲದ ಮಂದಿ ಬೆನ್ನಿಗೆ ಚೂರಿ ಹಾಕಿ ದ್ವೇಷ ಸಾಧಿಸುತ್ತಿದ್ದಾರೆ ಎಂಬ ಆತಂಕವನ್ನು ಕವನದಲ್ಲಿ ಕಾಣಬಹುದು. ಹಾಗಾಗಿ, 'ಮನೆಹಾಳು ಮನಹಾಳು, ಹಾಳಾಗಲಿ ದ್ವೇಷ ಸುಡಲಿ' ಎನ್ನುತ್ತಾ ಕನ್ನಡದ ಬೇರನ್ನೇ ಕತ್ತರಿಸುವ ಕೆಲಸ ನಾಡಿನೊಳಗೆ ನಡೆಯುತ್ತಿದೆ ಎಂಬುದನ್ನು ವಿಷಾದದಿಂದ ತಿಳಿಸುತ್ತಾರೆ. ಬೆನ್ನಿಗೆ ಚೂರಿ ಹಾಕುವ ಮಂದಿಯ ವಿರುದ್ಧ ಸಿಡಿದೇಳುತ್ತಾರೆ. ನಾಡು-ನುಡಿಯ ಉದ್ಧಾರವಾಗಬೇಕಾದರೆ ಮನದೊಳಗಿನ ದ್ವೇಷವನ್ನು ಕಳೆದು ಬನ್ನಿ ಎಂದು ಕರೆ ಕೊಟ್ಟವರು ಶಕುಂತಲ ಪ್ರಸಾದ್. 'ಕನ್ನಡದ ತೇರು' ಕವನದ ಮೂಲಕ ಕನ್ನಡ ಪರಂಪರೆ, ಶ್ರೀಮಂತಿಕೆ, ಕನ್ನಡಕ್ಕೆ ಸಂದಿರುವ ಪ್ರಶಸ್ತಿಗಳು ಇವನ್ನೆಲ್ಲಾ ನೆನಪಿಸುತ್ತಾ ಕನ್ನಡದ ತೇರನ್ನು ನಾವೆಲ್ಲರೂ ಕೂಡಿ ಎಳೆಯೋಣ ಎಂಬ ಸಂದೇಶವನ್ನು ಸಾರಿದ್ದಾರೆ.

ಮೋಹನ್ ಕುಂಟಾರ್ ಅವರು 'ಕನ್ನಡದ ಸಿರಿ' ಕವನದ ಮೂಲಕ ಜ್ಞಾನಪೀಠದ ಗರಿಯಿಂದ ಕನ್ನಡ ರಥದ ವೇಗ ಹೆಚ್ಚಿ ಆ ತೇರು ನಾಡನೆಲ್ಲ ಸುತ್ತಿ ಕನ್ನಡ ಜನತೆಯ ಹರುಷದೊಂದಿಗೆ ನುಡಿಗೆ ಆತ್ಮಗೌರವ ಸಂದ ಬಗೆಯನ್ನು ಚಿತ್ರಿಸಿದ್ದಾರೆ. ಜೊತೆಗೆ ಭಾಷಾ ಬಾಂದವ್ಯಕ್ಕೆ ಭಾಷಾಂತರವೇ ದಾರಿ ಎನ್ನುವ ಅಭಿಪ್ರಾಯ ಕವಿಯದು. ಭಾಷೆ ಭಾಷೆಗಳ ಮಧ್ಯೆ

ದ್ವೇಷ ತಾಳುವ ಮಂದಿ ಸಂಘರ್ಷಕ್ಕೆ ಕಾರಣರಾಗುತ್ತಾರೆ. ಇದನ್ನರಿತ ಕವಿ ಮನಸ್ಸು ಏಕತೆಯ ಹಾಡನ್ನು ಹಾಡಿದೆ. ಬಹುತ್ವದ ನಾಡಿನ ಐಕ್ಯತೆಗೆ ಧಕ್ಕೆ ತರಬಾರದೆಂಬ ಬೋಧನೆ ಇಲ್ಲಿದೆ.

ಭಾಷೆ ಭಾಷೆಗೂ ದ್ವೇಷವು ಸಲ್ಲ
ಒಲುಮೆಯೊಂದೇ ಬೇಕು
ಭಾಷಿಕಗಡಿಗಳ ಮೀರಿ ಬೆಳೆಯುವ
ಮಾನವತೆಯೊಂದೇ ಸಾಕು (ಭಾಷಾ ಬಾಂಧವ್ಯ)

ಎನ್ನುತ್ತಾ, ಬಹುತ್ವದ ನೆಲೆ ಉಳಿಯಬೇಕಾದರೆ ಮೊದಲು ನಾವು ಮಾನವಂತಿಕೆಯುಳ್ಳವರಾಗಬೇಕೆಂಬ ಸಂದೇಶವನ್ನು ಸಾರಿದ್ದಾರೆ.

**ಅನ್ಯಭಾಷಾ ಹೇರಿಕೆ**

ಜನರು ತಮ್ಮದಲ್ಲದ ನುಡಿಯನ್ನು ಒತ್ತಾಯ ಪೂರ್ವಕವಾಗಿ ಕಲಿಯಬೇಕಾದ ಸಂದರ್ಭವನ್ನು ಭಾಷಾಹೇರಿಕೆ ಎನ್ನಬಹುದು. ಅನ್ಯ ಭಾಷೆಯನ್ನು ಕಲಿಯುವ ಆಸಕ್ತಿಯಿದ್ದವರಿಗೆ ಅದು ಹೇರಿಕೆಯಾಗದು. ಭಾಷಾ ಹೇರಿಕೆಯು ಕನ್ನಡಿಗರನ್ನು ಕಂಗೆಡಿಸಿದೆ. ಬೇರೆ ಭಾಷೆಗಳ ಪ್ರಭಾವದಿಂದ ಕನ್ನಡ ನಲುಗಿಲ್ಲ. ಆದರೆ ಅನ್ಯಭಾಷೆಗಳ ಯಾಜಮಾನ್ಯದಿಂದ ಕನ್ನಡಕ್ಕೆ ತೊಂದರೆಯಾದಾಗ ಕವಿಗಳು ಕಾವ್ಯಗಳ ಮೂಲಕ ಪ್ರತಿಭಟಿಸಿದ್ದನ್ನು ಕಾಣಬಹುದು.

ಬಹುಭಾಷಿಕ ವಾತಾವರಣದಲ್ಲಿ ಬೆಳೆಯುವ ಮಕ್ಕಳು ಸಹಜವಾಗಿ ಪರಿಸರದ ಎಲ್ಲಾ ಭಾಷೆಗಳನ್ನು ಸುಲಭದಲ್ಲಿ ಕಲಿಯಬಹುದು. ಆದರೆ ತರಗತಿಯೊಳಗೆ ಯಾವ್ಯಾವುದೋ ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಾದ ಸಂದರ್ಭ ಬಂದಾಗ ಮಕ್ಕಳು ಬಳಲುವುದು ಖಂಡಿತ. ಕನ್ನಡ ಮತ್ತು ಇಂಗ್ಲೀಷಿನ ಜೊತೆಯಲ್ಲಿ ಹಿಂದಿಯನ್ನು ಬಲವಂತವಾಗಿ ಹೇರಿದಾಗ ಆತಂಕ ಮೂಡುವುದು ಸಹಜ. ತನ್ನಿಚ್ಛೆಯ ಭಾಷೆಯ ಆಯ್ಕೆಗೆ ಇಲ್ಲಿ ಅವಕಾಶವಿದ್ದರೂ, ಗಡಿ ಪ್ರದೇಶದ ಮಕ್ಕಳು ತಮಿಳು, ತೆಲುಗು, ಮರಾಠಿ ಮೊದಲಾದ ಭಾಷೆಗಳನ್ನು ಆಯ್ಕೆ ಮಾಡಿಕೊಂಡರೆ, ರಾಜ್ಯದೊಳಗಿನವರಿಗೆ ಹಿಂದಿಯನ್ನು ಆಯ್ಕೆಮಾಡಿಕೊಳ್ಳುವ ಅನಿವಾರ್ಯತೆಯುಂಟಾಯಿತು. ಇಂತಹಾ ತ್ರಿಭಾಷಾಸೂತ್ರವನ್ನು ಕುವೆಂಪು ಖಂಡಿಸಿದ್ದಾರೆ. ಪ್ರಾದೇಶಿಕ ಭಾಷೆಯೇ ಶಿಕ್ಷಣದ ಮಾಧ್ಯಮವಾಗಬೇಕೆಂಬುದು ಇವರ ಅಭಿಪ್ರಾಯ.

ಭಾಷಾ ತ್ರಿಶೂಲ ತ್ರಿಭಾಷಾ ಸೂತ್ರ
ಬಾಲಕರ ರಕ್ಷಿಸೈ ಹೇ ತ್ರಿಣೇತ್ರ
ಚೂರು ತಿಂಡಿಗೆ ಸಿಕ್ಕಿಹರೋ ಈ ಮೂರು ಗಾಳ

ನುಂಗದಿರೆ ಹಸಿವೆ; ನುಂಗಿದರೆ ಪ್ರಾಣ ಶೂಲ (೨೦೧೨ ಪು.೭೫)

ಇವು ಸಂದರ್ಭೋಚಿತವಾದ ಮತ್ತು ಅರ್ಥವತ್ತಾದ ಸಾಲುಗಳು. ಯಾವ ಭಾಷೆಯನ್ನು ಮನುಷ್ಯರು ದ್ವೇಷಿಸಬೇಕಾಗಿಲ್ಲ. ಆದರೆ ಎಲ್ಲರೂ ಈ ಭಾಷೆಗಳನ್ನು ಕಲಿಯಬೇಕೆಂಬ ಬಲವಂತಿಕೆ ಅವಿವೇಕತನದ್ದು ಎಂಬುದು ಕುವೆಂಪು ಅವರ ಅಭಿಪ್ರಾಯ. ಅವರ ಪ್ರಕಾರ ತ್ರಿಭಾಷಾ ಸೂತ್ರವು ಕನ್ನಡದ ಮಕ್ಕಳ ಎದೆಗೆ ತಿವಿದ ತ್ರಿಶೂಲವೇ ಆಗಿದೆ. ಪಾವಿತ್ರ್ಯದ ಕನ್ನಡ ನುಡಿಗೆ ಧಕ್ಕೆಯುಂಟಾಗಿ ಬೇರೆ ಭಾಷೆಯ ಹೇರಿಕೆ ಕಂಡು ಬಂದಾಗ ಕುವೆಂಪು ಎಚ್ಚರಿಸುವ ಪ್ರಯತ್ನ ಮಾಡಿದರು.

ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ
ರಾಜ ನುಡಿಯೆಂದೊಂದು, ರಾಷ್ಟ್ರ ನುಡಿಯೆಂದೊಂದು
ದೇವ ನುಡಿಯೆಂದೊಂದು ಹತ್ತಿ ಜಗ್ಗಿ
ನಿರಿ ನಿಟಿಲು ನಿಟಿಲೆಂದು ಮುದಿ ಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ

(ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ)

ಸಂಸ್ಕೃತಿಗಾಗುವ ಲಾಭ-ನಷ್ಟಗಳ ಕುರಿತು ಇವರ ಕವನಗಳು ಮಾತನಾಡುತ್ತವೆ. ನುಡಿಯ ಕುರಿತಾದ ಎಚ್ಚರ ನಾಡನ್ನು ಉಳಿಸುತ್ತದೆಂಬ ಅರಿವು ಕವಿಗಿತ್ತು. ಆಯಾ ಪ್ರಾಂತ್ಯಗಳಲ್ಲಿ ಪ್ರಾದೇಶಿಕ ಭಾಷೆಗಳು ಆಡಳಿತ ಮತ್ತು ಶಿಕ್ಷಣ ಮಾಧ್ಯಮವಾಗಲು ಪ್ರಜಾಪ್ರಭುತ್ವದಲ್ಲಿ ಅವಕಾಶವಿದೆ. ಆದರೆ ಆಳುವ ಪ್ರಭುಗಳ ದಾಹ ಇದಕ್ಕೆ ಆಸ್ಪದ ನೀಡುವುದಿಲ್ಲ. ಅನ್ಯ ಭಾಷೆಗಳನ್ನು ಒತ್ತಾಯಪೂರ್ವಕವಾಗಿ ಹೇರಲಾಗುತ್ತದೆ. ಕನ್ನಡ ಸಾಯುವುದೆಂದರೆ, ಕನ್ನಡಿಗರು ಅಸ್ತಿತ್ವವನ್ನು ಕಳೆದುಕೊಂಡು ಮೂಕರಾಗುವುದು. ಹೊರನುಡಿಯ ಹೊರೆಯಿಂದ ಕನ್ನಡದ ಮಕ್ಕಳು ಕುಗ್ಗಿ ಹೋಗುವರೆಂಬ ಆತಂಕ ಮೇಲಿನ ಸಾಲುಗಳಲ್ಲಿ ಕಾಣಿಸಿಕೊಳ್ಳುತ್ತದೆ. ರಾಜನುಡಿ, ರಾಷ್ಟ್ರನುಡಿ, ದೇವನುಡಿಗಳೆಂಬ ನೆಪದಿಂದ ಮಕ್ಕಳ ಮೇಲೆ ಭಾಷಿಕ ಒತ್ತಡ ಹೇರುವ ಸಂಗತಿಯ ಕುರಿತು ಕವಿಗೆ ಆಕ್ರೋಶವಿದೆ. ಈ ಮೂಲಕ ಕನ್ನಡದ ಅಸ್ಮಿತೆಗೆ ಧಕ್ಕೆಯಾಗುವ ಸವಾಲುಗಳನ್ನು ಗುರುತಿಸುತ್ತಾ ಕವಿ ಗಮನಸೆಳೆಯುತ್ತಾರೆ.

ಕಣ್ದೆರೆಯಿರೇಳಿ ಓ ಕನ್ನಡದ ಮಕ್ಕಳಿರ
ಗರ್ಜಿಸುವುದನು ಕಲಿತು ಸಿಂಹವಾಗಿ
ನಖದಂಷ್ಟ್ರಕೇಸರಂಗಳ ಬೆಳೆಸಿ ಹುರಿಗೊಂಡು
ಶಿರವೆತ್ತಿ ನಿಂತು ಹುರಿತನವ ನೀಗಿ

ಕನ್ನಡಕ್ಕೆ ಒದಗಿ ಬಂದಿರುವ ಆತಂಕಕ್ಕೆ ಕವಿ ಪರಿಹಾರವನ್ನು ಹೇಳುತ್ತಾರೆ. ಭಾಷೆಯನ್ನು ಉಳಿಸುವ ಜವಾಬ್ದಾರಿ ಕನ್ನಡಿಗರದ್ದಾದುದರಿಂದ ಅವರೆಲ್ಲರೂ 'ಕುರಿತನ'ವನ್ನು ಬಿಟ್ಟು ಸಿಂಹಗಳಂತೆ ಗರ್ಜಿಸಬೇಕಾಗಿದೆ. 'ನಿಮ್ಮ ನುಡಿ ನಿಮ್ಮ ಗಂಡಸುತನಕ್ಕೆ ಹಿರಿಸಾಕ್ಷಿ' ಎಂಬ ಸಾಲು ಮತ್ತು 'ಸಿಂಹ'ವಾಗಿ ಗರ್ಜಿಸುವ ಬಗೆ ಶೌರ್ಯದ ಪರಿಭಾಷೆಯಾಗಿ ಹೊರಹೊಮ್ಮಿದೆ. ಭಾಷೆಯ ಉಳಿವಿಗಾಗಿ ಶೌರ್ಯದ ಹಾದಿಯನ್ನು ಕ್ರಮಿಸಬೇಕೆಂಬ ಎಚ್ಚರಿಕೆ ಕವನದಲ್ಲಿದೆ. ವಿಶ್ವ ಭಾಷೆಯ ಬಲವಂತಿಕೆಯ ಮೂಲಕ ನಾಡಭಾಷೆ ಕೊಲೆಗೆ ಒಳಗಾಗುತ್ತದೆಂಬ ಧ್ವನಿಯನ್ನು 'ಭಾವೈಕ್ಯತೆ' ಕವನದಲ್ಲಿ ಕವಿ ಗುರುತಿಸಿದ್ದಾರೆ. 'ನನ್ನದೊ ಅದು ವಿಶ್ವ ಭಾಷೆ, ಪ್ರಪಂಚಕೇ ರಾಷ್ಟ್ರಭಾಭಾಷೆ' ಎನ್ನುವುದರೊಂದಿಗೆ ಕರ್ನಾಟಕವನ್ನು ಅದರ ಭೌಗೋಳಿಕ ನೆಲೆಯಿಂದ ಗ್ರಹಿಸುವ ಬದಲು ಹೊಸ ರೀತಿಯಿಂದ ಪುನರ್ ಸೃಷ್ಟಿಸಿಕೊಳ್ಳುವ ಪ್ರಯತ್ನವನ್ನು ಇವರ ಕವನಗಳು ಮಾಡಿವೆ.

ಕನ್ನಡವನ್ನು ಸರಕಾರದ ಭಾಷೆಯನ್ನಾಗಿ ತರುವಲ್ಲಿ ತಾಳಿದ ಮನಸ್ಥಿತಿಯನ್ನು ಕುರಿತು ದಿನಕರ ದೇಸಾಯಿಯವರ ಕವನಗಳು ಮಾತನಾಡುತ್ತವೆ.

ಕನ್ನಡಾಂಬೆಗೆ ಇವರು ಹಾಕುವರು ಹಾರ
ಆಂಗ್ಲ ನುಡಿಯಲ್ಲಿ ನಡೆಸುವರು ಸರ್ಕಾರ
ಕೇಳಿದರೆ ಹೇಳುವರು ಒಂದು ದಿನತಾಳಿ
ಆಮೇಲೆ ಕೂಗಲಿದೆ ಕನ್ನಡದ ಕೋಳಿ

(ಅಮರೇಶ ನುಗಡೋಣಿ ೨೦೧೧ ಪು.೩೫)

ಸರಕಾರ ಮತ್ತು ಜನರ ಭಾಷೆ ಬೇರೆಯಾದಾಗ ಪ್ರಜೆಗಳ ಸಂಕಷ್ಟದ ದಿನಗಳು ಆರಂಭ. ಭಾಷಾ ಹೇರಿಕೆಯನ್ನು ದಿನಕರ ದೇಸಾಯಿಯವರು ಪ್ರತಿಭಟಿಸಿದ್ದಾರೆ. ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳ ಹೊರೆಯನ್ನು ಹೊತ್ತ ವಿದ್ಯಾರ್ಥಿಗಳ ಬಗೆಗೆ ಇವರು ಹೇಳುವ ಮಾತುಗಳು ಗಮನಸೆಳೆಯುತ್ತವೆ. 'ಆಂಗ್ಲ ಭಾಷೆಯ ಜೊತೆಗೆ ಹಿಂದಿ ಕಡ್ಡಾಯ, ಶೀಘ್ರದಲ್ಲಿ ಮಕ್ಕಳಿಗೆ ಬಂತು ಮುದಿ ಪ್ರಾಯ ಪ್ರಾಯ' (ಅದೇ, ಪು.೩೭)

ಬೇಕೆಮಗೆ ಹಿಂದಿ ಭಾಷೆಯ ರೇನುಕೋಟು
ಮತ್ತೆ ಕಾಲಿಗೆ ಬೇಕು ಅಂಗ್ರೇಜಿ ಬೂಟು
ನಮ್ಮ ಬಡ ಕನ್ನಡದ ಗತಿಯೇನು ತಂಗಿ?
ಸುತ್ತಿ ಕೊಂಡರೆ ಸಾಕು ಮೂರು ಮೊಳ ಲುಂಗಿ (ಪು. ೪೫)

ಭಾಷಾಕಲಿಕೆಯ ಸಮಸ್ಯೆಯನ್ನು ದಿನಕರ ದೇಸಾಯಿ ಅವರು ಮಾರ್ಮಿಕವಾಗಿ ವಿಡಂಬಿಸಿದ್ದಾರೆ. ಆಂಗ್ಲಮಾಧ್ಯಮದ ವಿದ್ಯಾರ್ಥಿಗಳ ವೇಷಭೂಷಣದ ಗ್ರಹಿಕೆ ಇಲ್ಲಿದೆ. ಇವೆಲ್ಲ ಕನ್ನಡದ ಮಕ್ಕಳಿಗೆ ಒಗ್ಗುವಂತದ್ದಲ್ಲ. ಹೊರೆಯಾಗಿ ಪರಿಣಮಿಸಬಹುದು ಎನ್ನುತ್ತಾರೆ ಕವಿ.

ಕನ್ನಡವ ಕಲಿಸಿ, ಸಾಕೆನ್ನುವರು ಮಂದಿ
ಆದರೂ ಈ ಜಾಣರಿಗೆ ಬೇಕು ಹಿಂದಿ
ಕೆಲವರಿಗೆ ಆಂಗ್ಲ ಭಾಷೆಯ ಮೇಲೆ ಪ್ರೀತಿ
ಈ ಪರಿಸ್ಥಿತಿ ಒಳಗೆ ಮಕ್ಕಳಿಗೆ ಫಜೀತಿ

(ಶ್ರೀಪಾದ ಶೆಟ್ಟಿ: ೨೦೧೦ ಪು.೨೯)

ಇದು ತ್ರಿಭಾಷಾ ಸೂತ್ರ ಶಾಲಾ ಮಕ್ಕಳಿಗೆ ತೊಂದರೆಯಾಗುವುದನ್ನು ಗುರುತಿಸಿ ಕೊಡುವ ದಿನಕರ ದೇಸಾಯಿಯವರ ಚೌಪದಿಯಾಗಿದೆ. ಕವಿ ಒಬ್ಬ ಶಿಕ್ಷಣ ಪ್ರೇಮಿ ಮತ್ತು ಶಿಕ್ಷಣ ಸಂಸ್ಥೆಗಳ ನಿರ್ಮಾಪಕರು ಆಗಿದ್ದುದರಿಂದ ಕನ್ನಡ ಮಕ್ಕಳ ಸಂಕಟ ಅವರಿಗೆ ನೇರವಾಗಿ ಅರ್ಥೈಸಿಕೊಳ್ಳುವುದಕ್ಕೆ ಸಾಧ್ಯವಾಗಿ, ಅವರು ಸಾಹಿತ್ಯದ ಮೂಲಕ ಅದಕ್ಕೆ ಪ್ರತಿಕ್ರಿಯಿಸಿದ್ದಾರೆ. ಬಲವಂತದ ಭಾಷಾ ಹೇರಿಕೆಯಿಂದ ಮಕ್ಕಳು ಒತ್ತಡಕ್ಕೆ ಜೋತುಬಿದ್ದು ಮುದುಕರಾದಾರೆಂಬ ಭೀತಿ ಕವಿಯನ್ನು ಕಾಡಿದೆ.

ಕನ್ನಡಿಗರನ್ನು 'ಕವಿದಿರುವ ತಾಮಸವ ಕೊಡಹಿ ನಿಲ್ಲಿ' ಎಂಬುದಾಗಿ ಎಚ್ಚರಿಸುವ ಪ್ರಯತ್ನ ಮಾಡಿದವರು ಪದ್ಮಿನಿ ರಾಮಮೂರ್ತಿ. ಅನ್ಯಭಾಷೆಗಳ ಆರ್ಭಟಕ್ಕೆ ಸಿಲುಕಿ ಕನ್ನಡ ನಲುಗಿ ಹೋಗಿರುವ ಆತಂಕವನ್ನು ಅವರು ವ್ಯಕ್ತಪಡಿಸಿದ್ದಾರೆ.

ಕರುನಾಡ ಜನತೆಯಾ ತುತ್ತನೇ ಕಸಿಯುತಿಹ
ನೆರೆ ನಾಡ ಭಾಷಿಕರ ಕೊಂಕು ತನವನೇ ನೋಡ
ಉತ್ತರದ ಹಿಂದಿಯಬ್ಬರದ ಪರಿನೋಡ
ಅವರಟ್ಟಹಾಸದಲಿ ಮುಂಗಾಣದಾಗಿಹೆಯಾ (ಏಳು ಕನ್ನಡಿಗ)

ಬೇರೆ ಬೇರೆ ಕಾರಣಗಳಿಂದಾಗಿ ಕರ್ನಾಟಕವನ್ನು ಸೇರಿರುವ ನೆರೆ ನಾಡಿನವರಿಂದ ಕನ್ನಡಿಗರ ಬದುಕಿಗೆ ತೊಂದರೆಯಾದಾಗ, ಅನ್ಯಭಾಷೆಗಳ ಹೇರಿಕೆಯಾದಾಗ ಕರ್ನಾಟಕ ನಲುಗಿಹೋಗಿದೆ. ಉತ್ತರದ ಹಿಂದಿಯ ಅಟ್ಟಹಾಸದಲ್ಲಿ ಕನ್ನಡಿಗರ ಪರಿಸ್ಥಿತಿ ಶೋಚನೀಯವಾಗಿದೆ. ಕನ್ನಡಿಗ ಅಂಗವಿಕಲನಂತೆ, ಅಸಹಾಯಕನಂತೆ ಅಭಿಮಾನ ಶೂನ್ಯನಾದರೆ ಅದರ ಪರಿಸ್ಥಿತಿ ಘೋರವಾಗಿರುತ್ತದೆ. ಈ ಸ್ಥಿತಿಯಿಂದ ಹೊರಬಂದು ಎಚ್ಚೆತ್ತುಕೊಳ್ಳಬೇಕಾದ ನೆಲೆಯನ್ನು ಕವನ ಗುರುತಿಸುತ್ತದೆ. ಭಾಷಾ ಹೇರಿಕೆಯಾದಾಗ ಇಂಗ್ಲಿಷನ್ನು 'ಮಾಟಗಾತಿ' ಎಂದು

ಹಿಂದಿಯನ್ನು 'ತಾಟಗಿತ್ತಿ' ಎಂದು (ಭಾಷಾ ಚಂದ್ರ) ಭೂಹಳ್ಳಿ ಪುಟ್ಟಸ್ವಾಮಿಯವರು ವಿಡಂಬಿಸುತ್ತಾರೆ. ಇವುಗಳಿಗಾಗಿ ಜಟಾಪಟಿಯಾದಾಗ ಈ ಎರಡು ಭಾಷೆಗಳು 'ಗಂಟು ಕಟ್ಟಿ ಚಿತ್ತ ಬಿಟ್ಟು ಓಡಿದರು' ಎನ್ನುತ್ತಾ, 'ಭಾಷೆ ರೂಪಿ ಚಂದ್ರನೋರ್ವ ಕರುನಾಡಲಿ ಎದ್ದನಯ್ಯ' ಎಂದು ಸಂತಸ ವ್ಯಕ್ತಪಡಿಸಿದ್ದಾರೆ. ಮಾತ್ರವಲ್ಲ 'ಬ್ರಹ್ಮ ಬೈಯಲಿ, ಯಮನು ಸಾಯಲಿ, ಕನ್ನಡವ ಬೋಧಿಸಯ್ಯ' ಎಂಬ ಸಂದೇಶವನ್ನು ಸಾರಿದ್ದಾರೆ.

ಬಿ.ಎಂ. ಇದಿನಬ್ಬ ಅವರ ಪ್ರಕಾರ ಅನ್ಯಭಾಷೆಯು ಕನ್ನಡಿಗರಲ್ಲಿ ಗುಲಾಮಗಿರಿಯನ್ನು ವೃದ್ಧಿಸುವಂತದ್ದು. ಆ ಭಾಷೆಗಳು ನಮ್ಮನ್ನು 'ಸಲಾಂ ಹೊಡೆಸುತ ಕುಣಿಸುತಲಿರುವುದು'. ಹಾಗಾಗಿ ಕವಿ ಹೇಳುವುದು 'ನೀಗಿರಿ ಅದರಾಸೆ'.

ಚಿನ್ನದ ಕತ್ತಿಯು ಹೊರಗಿನ ಭಾಷೆ
ಕರುಣೆಯ ತೋರೀತೆ
ಚಿನ್ನದ ತತ್ತಿಯು ಕನ್ನಡ ಶಕ್ತಿಗೆ
ಇರಿಯದೆ ಬಿಟ್ಟೀತೆ?

ಅನ್ಯಭಾಷೆಯು ಚಿನ್ನದ ಕತ್ತಿಯಂತೆ. ಅದು ಆಕ್ರಮಣಕಾರಿಯೇ ಹೊರತು ಅದಕ್ಕೆ ಕರುಣೆ ಎನ್ನುವುದಿಲ್ಲ. ಆ ಕತ್ತಿ ಕನ್ನಡ ಶಕ್ತಿಗೆ ಇರಿಯದೆ ಬಿಟ್ಟೀತೆ? ಎನ್ನುವುದು ಕವಿಯ ಪ್ರಶ್ನೆ. ಹಾಗಾಗಿ ಅನ್ಯಭಾಷೆಯ ಆಕ್ರಮಣವನ್ನು ಎದುರಿಸುವುದಕ್ಕೆ ಕನ್ನಡ ನಾಡಿನ ಜನಸಮುದಾಯ ಹುಲಿಯಂತೆ ಗರ್ಜಿಸಿ ನುಗ್ಗಬೇಕು. ಅನ್ಯಭಾಷೆಯ ಆಕ್ರಮಣವನ್ನು ಸಾಂಘಿಕ ಶಕ್ತಿಯಿಂದ ಎದುರಿಸಬೇಕಾದ ಮತ್ತು ತಾಯಿನುಡಿಯ ಬಗೆಗೆ ಅಭಿಮಾನವನ್ನು ಮೂಡಿಸಿಕೊಳ್ಳಬೇಕಾದ ಬಗೆಯನ್ನು ಕನ್ನಡ ಕವನಗಳು ಗುರುತಿಸಿಕೊಟ್ಟಿವೆ.

ಪೂ.ರಾ. ಶ್ರೀನಿವಾಸ್ ಅವರು ಕನ್ನಡವನ್ನು ಕಳೆದುಕೊಂಡ ತಬ್ಬಲಿ ಸ್ಥಿತಿಯನ್ನು ಅರ್ಥಪೂರ್ಣವಾಗಿ ವಿಡಂಬಿಸಿದ್ದಾರೆ. ಮಧ್ಯಾಹ್ನದ ಹೊತ್ತು ಕವಿ ರಸ್ತೆಯಲ್ಲಿ ನಡೆಯುತ್ತಿರುವಾಗ ಹೊರಲಾರದ ಭಾರವನ್ನು ಹೊತ್ತ ಪುಟ್ಟ ಹುಡುಗಿಯೊಬ್ಬಳು ಕಾಣುತ್ತಾಳೆ. ಅವಳ ಸ್ಥಿತಿಯನ್ನು ನೋಡಿದ ಕವಿ 'ಅಮ್ಮ ಬರಲಿಲ್ಲವೇ' ಎಂದು ಪ್ರಶ್ನಿಸುತ್ತಾರೆ. ಮಗುವಿನ ಉತ್ತರ 'ನನಗೆ ಅಮ್ಮನೇ ಇಲ್ಲ' ತಂದೆಯ ಬಗೆಗೆ ಇದೇ ಪ್ರಶ್ನೆ. ಉತ್ತರವು ಅದೇ. ಕವಿಯ ಕರುಳು ಚುರುಕ್ ಅನ್ನುತ್ತದೆ. ಆದರೂ ಕುತೂಹಲ ತಣಿಯಲಿಲ್ಲ. 'ಮನೆಯಲ್ಲಿ ಯಾರ್ಯಾರು ಇದ್ದಾರೆ'? ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ಮಗು ಕೊಡುವ ಉತ್ತರ 'ಇದ್ದಾರೆ ಡ್ಯಾಡಿ ಮಮ್ಮಿ'. ಕವಿಯ ಅನುಭವ 'ಮಟಮಟ ಮಧ್ಯಾಹ್ನ ನಡುರಸ್ತೆಯಲ್ಲಿ ತಬ್ಬಲಿಗಳು ನಾನು ಮತ್ತು ನಾನು ನಂಬಿಕೊಂಡಿರುವ

ಕನ್ನಡ.' ಈ ಸಾಲುಗಳು ವಿದ್ಯಾವಂತರ ಕನ್ನಡದ ಅಸಡ್ಡೆಯ ಕುರಿತು ಗಮನಸೆಳೆಯುತ್ತವೆ. ಇಂತಹ ವಿದ್ಯಾವಂತರಿಂದಲೇ ಕನ್ನಡದ ಸ್ಥಿತಿ ಹೀಗಾಗಿದೆ ಎಂಬುದನ್ನು ಕವಿ ವ್ಯಕ್ತ ಗೊಳಿಸಿದ್ದಾರೆ. ಕನ್ನಡದಲ್ಲಿ ಸಂಬಂಧಗಳನ್ನು ಸೂಚಿಸುವ ಪದಗಳು ಇಂದು ಕಾಣೆಯಾಗುತ್ತಿವೆ. ಅಪ್ಪ ಅಮ್ಮ ಎನ್ನುವ ಆಪ್ಯಾಯಮಾನ ಸಂಬಂಧವನ್ನು ಮಮ್ಮಿ-ಡ್ಯಾಡಿ ಪದಗಳು ನುಂಗಿಹಾಕಿವೆ.

ಪರಭಾಷೆಯ ಜನರ ನಡುವೆ ಕನ್ನಡ ತಾಯಿ ಸೊರಗಿದ ಸ್ಥಿತಿಯನ್ನು ನಿಸಾರ್ ಅಹಮ್ಮದ್ ಅವರ ಕವನ ಅನಾವರಣಗೊಳಿಸಿದೆ.

> ಪರಭಾಷಾ ಜನರ ನಡುವೆ
> ಪ್ರಾಗ್ ವೈಭವ ರತ್ನ ದೊಡವೆ
> ಕಳೆದುಕೊಂಡು ನೀನು ಬಡವೆ
> ನಿನ್ನ ಮನೆಯೊಳೆ (ಎಂದು ಮೆರೆಯುವೆ ತಾಯೆ)

ಕನ್ನಡ ತಾಯಿ ಹಿಂದಿನಂತೆ ಮತ್ತೆ ಮೆರೆಯುವುದನ್ನು ಕಾಣಬೇಕಿದೆ. ಆದರೆ ಪರಭಾಷೆಯ ಜನರ ನಡುವೆ ಅವಳಿಗೆ ಬಡತನ ಪ್ರಾಪ್ತಿಯಾಗಿದೆ. ಕನ್ನಡಮ್ಮನ ಔದಾರ್ಯದ ಪರಿಣಾಮದಿಂದಾಗಿ ರಾಷ್ಟ್ರಭಾಷೆ ವಿಶ್ವ ಭಾಷೆಗಳ ಹೇರಿಕೆಯಿಂದ ಆಕೆ ಹತಾಶಳಾಗಿದ್ದಾಳೆ. ಇದಕ್ಕೆ ಕಾರಣ ಕನ್ನಡನಾಡಿನ ಗಾಳಿ, ನೀರು, ಅನ್ನವುಂಡ ಅನ್ಯ ಜನರು. ಇವರೆಲ್ಲಾ ನಿರಂತರ ನಾಡಿಗೆ ಕನ್ನ ಹಾಕುತ್ತಿದ್ದಾರೆ. ನಾಡಿನ ಔದಾರ್ಯ ಪಾಶವಾಗಿ ಕನ್ನಡ ತಾಯಿಯನ್ನು ಬಿಗಿದಿದೆ. ಇದರಿಂದ ಆಕೆ ಹೊರಬಂದು ಮತ್ತೆ ಮೆರೆಯಬೇಕಾದರೆ ಕನ್ನಡಿಗರು ಭೇದ ಮರೆತು ಸದಾ ಸಿಂಹದಂತೆ ಬದುಕಬೇಕು. ಕನ್ನಡ ಜನರ ಅಭಿಮಾನವನ್ನು ಕೆರಳಿಸಿ ಇತಿಹಾಸದ ಗತವೈಭವದ ಜ್ಞಾನ ಮೂಡುವಂತೆ ಮಾಡಬೇಕಾದ ಅನಿವಾರ್ಯತೆಯಿದೆ. ಯಾಕೆಂದರೆ, 'ಕನ್ನಡನಾಡಿನಲ್ಲಿ ಪರಭಾಷೆಯ ಕಳೆ ತಗ್ಗಲಿ ಹಮ್ಮ, ಕನ್ನಡ ನುಡಿ ಬೆಳೆ ವರ್ಧಿಸಲಮ್ಮ' (ಕನ್ನಡಾಂಬೆಗೆ) ಎನ್ನುವುದು ಕವಿಯ ನಿವೇದನೆ. ಇದಕ್ಕಾಗಿ ಲಕ್ಷ್ಮಿ ಮತ್ತು ಶಾರದೆ ಜೊತೆಯಾಗಿ ನೆಲೆಸಬೇಕೆಂಬ ಬಯಕೆ ಕವಿಯದು. ಪರಭಾಷೆಗಳ ಹಾವಳಿಯಿಂದ ಕನ್ನಡವನ್ನು ರಕ್ಷಿಸಬೇಕೆಂಬ ಕಳಕಳಿಯನ್ನು ಕನ್ನಡದ ಕವಿಗಳು ಮಾಡಿದ್ದಾರೆ. ಆಸೆ - ಆಕಾಂಕ್ಷೆಗಳು ನಮ್ಮೆಲ್ಲರ ಬದುಕಿನಲ್ಲಿ ಬಿರುಕು ಮೂಡಿಸಿವೆ. ಟಿ.ಎಸ್.ಪ್ರಸಾದ್ ಅವರ,

> ನೆಲ-ಜಲದ ಎಲ್ಲೆ ಬೇಕೆಂಬ ಕೂಗು
> ಹುಟ್ಟುಹಾಕಿದೆ ಬಿರುಕು
> ಮನದ ಮನೆಯಲ್ಲಿ ಬಿರುಕು
> ಭಿನ್ನತೆಯ ಗೋಡೆ ಎಬ್ಬಿಸಿದೆ (ಬಿರುಕು)

ಕನ್ನಡನಾಡಿನ ನೀರಿನ ಸಂಪನ್ಮೂಲವನ್ನು ಬಳಸಿಕೊಳ್ಳುವುದರಲ್ಲಿ ಸಂಘರ್ಷ ಕಾಣಿಸುತ್ತಿದೆ. ಇದರಿಂದ ಬದುಕಿನಲ್ಲಿ ಬಿರುಕು ಮೂಡಿದೆ. ಕಾವೇರಿ ಮಾತೆಯ ತನುವನ್ನು ಹಂಚಿಕೊಳ್ಳುವ ಜನರ ಸ್ವಾರ್ಥದ ಕುರಿತು ಪಿ.ಎ. ಸುಶೀಲ ಅವರ ಕವನ ಖೇದವನ್ನು ವ್ಯಕ್ತಪಡಿಸುತ್ತದೆ. ನಿರಾತಂಕವಾಗಿ ಹರಿದ ಕಾವೇರಿ ತಾಯಿ ಮಳೆ ಬಂದಾಗ ಮೈದುಂಬಿ ಬಿಸಿಲ ಬೇಗೆಯಲ್ಲಿ ಬತ್ತಿಹೋಗಿ ಗುಪ್ತಗಾಮಿನಿಯಾಗಿ ಹರಿದು 'ಕನ್ನಿಕೆ' 'ಸುಜ್ಯೋತಿ'ಯರೊಂದಿಗೆ ಸಂಗಮಿಸಿ ಹರಿಯುತ್ತಾ, ಸಂಗಮದಲ್ಲಿರುವ ಒಲವನ್ನು ಗುರುತಿಸಿಕೊಟ್ಟವಳು. ಈಕೆ ಕೊಡಗಿನ ಕುಲದೇವಿ. ಕಾನನದ ಅಧಿದೇವತೆ. ಇಂತಹ ದೇವತೆಗೆ ಕೇಡುಬಗೆದರೆಂಬ ಬೇಸರ ಕವಯಿತ್ರಿಯದು.

ಮರೆತರಾ ತಾಯ ಹೆಸರನ್ನು
ಉದ್ಯಮದಲಿ ಝಣ ಝಣಿಸಿದ ರಾಜನ
ಮನಕೆ ಅರಿಯದಾಯ್ತು ಜಗದ ತಾಯಿ ನೀನೆಂದು
ಇಳೆಯನ್ನು ಅಳೆಯುವ ಹುಚ್ಚು ಮಾನವ ಸಾಹಸ
ಅರಿಯದಾಯ್ತೆ ತಾಯ ಒಡಲಿನ ಬೇಗೆ
ಮಾತೆಯ ತನುವ ಹಂಚಿಕೊಳ್ಳುವ ಸುಪುತ್ರರೇ
ಅಜ್ಞಾನದ ತೆರೆ ಎಂದು ಸರಿಸೀತು?
ಸಂಗಮಿಸುವ ಮನ ಬಾರದೇಕೆ?
ವಿಂಗಡಿಸುವ ಗುಣ ಕಲಿತಿರೇಕೆ? (ಮಹಾಮಾತೆ ಜನ್ಮದಾತೆ)

ಸಂಗಮಿಸುವ ಗುಣದಲ್ಲಿರುವ ಪ್ರೀತಿಯನ್ನು ಗುರುತಿಸಿಕೊಟ್ಟ ತಾಯಿ ಕಾವೇರಿಯನ್ನು ವಿಂಗಡಿಸುವ ಗುಣ ಮನುಷ್ಯರದು. ಇಂತಹ ಕೆಟ್ಟ ಗುಣವನ್ನು ಬಿಟ್ಟು ಮಾತೃ ದೇಹಕ್ಕಾಗಿ ಕಿತ್ತಾಡದೆ, ಮಾನವತೆಯನ್ನು ತೋರಿ ಜಾತಿ, ಮತ, ಪಂಥದ, ನೆಲ-ಜಲದ, ಹಂಗು ತೊರೆದು ಮನುಜಕುಲವೆಲ್ಲ ಒಂದಾಗಿ ಆಕೆಯನ್ನು ಹರಿಯ ಬಿಟ್ಟರೆ ನಾಡಿನ ಉದ್ಧಾರವಾದೀತು. ಪವಿತ್ರವಾದ ನದಿಗಳನ್ನು ಇಂದು ಮಲಿನಗೊಳಿಸುತ್ತಿದ್ದೇವೆ. ತ್ಯಾಜ್ಯಗಳನ್ನು ತನ್ನೊಳಗೆ ಸೇರಿಸಿಕೊಂಡು ಹರಿಯುವ ನದಿಯ ನೀರು ಕಪ್ಪಾಗಿದೆ. ನೀರಿನಿಂದ ನಾಡಿನ ಜನರ ಆರೋಗ್ಯಕ್ಕೂ ಪೆಟ್ಟುಬಿದ್ದಿದೆ. ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿದ ಕವಯಿತ್ರಿ ಮಗುವಿಗೆ ಬೋಧನೆ ಮಾಡುವ ಮೂಲಕ ಜನರಲ್ಲಿ ತಿಳುವಳಿಕೆ ಮೂಡಿಸುವ ಪ್ರಯತ್ನಕ್ಕೆ ಮುಂದಾಗಿದ್ದಾರೆ. ಇವರು ಪುಟ್ಟ ಮಗುವನ್ನು ಎಚ್ಚರಿಸಿದ ರೀತಿ ಇಂತಿದೆ.

ಹರಿವ ನದಿಗೆ ಎಸೆಯಬೇಡ
ಪುಟ್ಟ ಮಗುವೆ ಕಸವನ್ನು

ಕಸವ ಚೆಲ್ಲಿ ಹಾಳು ಮಾಡಬೇಡ

ನೋಡು ಮಗುವೆ ನೀರನು          (ಹರಿವ ನದಿಗೆ ಎಸೆಯಬೇಡ ಕಸವನು)

ಮಗು ಇನ್ನಾರೋ ಕಸ ಎಸೆದಿದ್ದನ್ನು ಕಂಡಿದೆ. ತಾಯಿಯ ಮುಂದೆ ಇದನ್ನು ಗುರುತಿಸಿ ಕೊಟ್ಟು 'ಏಕೆ ತಡೆವೆ ಅಮ್ಮ ನೀನು ನನ್ನನ್ನು' ಎಂದು ಪ್ರಶ್ನಿಸುತ್ತದೆ. ಆಗ ತಾಯಿ ಮಗುವಿಗೆ ನದಿಯ ಪಾವಿತ್ರ್ಯದ ಬಗೆಗೆ ತಿಳಿ ಹೇಳುತ್ತಾ, ಗಂಗೆ ಯಮುನೆ ಮಾತ್ರ ಪುಣ್ಯನದಿಗಳಲ್ಲ. ಎಲ್ಲಾ ನದಿಗಳು ಪುಣ್ಯ ತೀರ್ಥಗಳು ಎಂಬ ಅರಿವನ್ನು ಮೂಡಿಸುತ್ತಾರೆ. ಈ ಅರಿವು ಎಲ್ಲರಿಗೂ ಮೂಡಬೇಕಾಗಿದೆ. ಪರಿಸರದ ನಾಶವೆಂದರೆ ನಾಡಿನ ನಾಶ. ತೀರ್ಥಯಾತ್ರೆಯ ನೆಪದಿಂದ ನದಿಗಳ ನೀರು ಕಲುಷಿತಗೊಳ್ಳುವ ಆತಂಕವನ್ನು ಸುಷ್ಮ ಕೆ.ವಿ ಅವರು ಗುರುತಿಸಿದ್ದಾರೆ.

ಪವಿತ್ರ ನಿರ್ಮಲ ನದಿಯಲ್ಲಿ

ಮೈತೊಳೆಯಲು ಮೆಡಿಮಿಕ್ಸ್ ಸೋಪು

ತನ್ನ ಮುದ್ದಿನ ಮಡದಿ ಮಕ್ಕಳ

ಕೂದಲು ತೊಳೆಯಲು ಸನ್ ಸಿಲ್ಕ್ ಶಾಂಪೂ

ಇವರು ಯಾತ್ರೆಗೆ ಬರುವುದು

ಮಾಡಿದ ಪಾಪ ಕಳೆಯಲೆಂದು ಅಲ್ಲ

ತೊಳೆಯಲು ಎಷ್ಟೋ ದಿನಗಳಿಂದ

ಮಡುಗಟ್ಟಿದ ಬೆವರನ್ನೆಲ್ಲಾ          (ತೀರ್ಥಯಾತ್ರೆ)

ಬಚ್ಚಲು ಮನೆಯಲ್ಲಿ ಸ್ನಾನ ಮಾಡಿದಂತೆ ಸೋಪು ಶಾಂಪುಗಳಿಂದ ತಿಕ್ಕಿ ತೊಳೆದರೆ ನೀರಿನಲ್ಲಿ ಸೇರಿಹೋಗುವ ಕಶ್ಮಲ ರೋಗಕ್ಕೆ ಕಾರಣವಾಗುತ್ತದೆ ಮಾತ್ರವಲ್ಲ, ನದಿಯ ಪಾವಿತ್ರ್ಯವನ್ನು ನಾಶಮಾಡುತ್ತದೆ. ಇದನ್ನೆಲ್ಲಾ ಮಾಡದೆ ನದಿಯನ್ನು ಅದರ ಪಾಡಿಗೆ ಹರಿಯಬಿಟ್ಟರೆ ಇದಕ್ಕಿಂತ ದೊಡ್ಡ ಉಪಕಾರ ಇನ್ನೇನಿದೆ?

**ರಕ್ಷಣೆಯ ಆತಂಕ**

ನಾಡಿನ ಬಗೆಗಿನ ಉತ್ಕಟ ಅಭಿಮಾನ ವಿಶೇಷವಾಗಿ ವ್ಯಕ್ತಗೊಳ್ಳುವುದು ಆ ನಾಡು ಆತಂಕಕ್ಕೆ ಒಳಗಾದಾಗ. ಇಂತಹ ಆತಂಕದ ಸಂದರ್ಭದಲ್ಲಿ ಅದರ ಪರಿಹಾರಕ್ಕೆ ಸಂಬಂಧಿಸಿದ ಆಲೋಚನೆಗಳುಳ್ಳ ಕವಿತೆಗಳನ್ನು ಕವಿಗಳು ರಚಿಸುವುದು ಸಹಜ. ನಾಡಿನ ಜನರಲ್ಲಿ ಉತ್ಸಾಹವನ್ನು ತುಂಬುವ, ಅಭಿಮಾನ ಮೂಡಿಸುವ ಪ್ರಯತ್ನ ನಿರಂತರ ನಡೆಯುತ್ತಿರುತ್ತದೆ. ನಾಡಿನಲ್ಲಿ ಶಾಂತಿ ನೆಲೆಸಿದ್ದಾಗ ಮಾತ್ರ ಸಂಪತ್ತು, ನಾಗರಿಕತೆ, ಸಂಸ್ಕೃತಿ ಇವೆಲ್ಲಾ ಬೆಳವಣಿಗೆ ಹೊಂದಬಹುದು. ಇಲ್ಲವಾದಲ್ಲಿ ಸದಾ ಆತಂಕ ಕಾಡುತ್ತಿರುತ್ತದೆ. ಕನ್ನಡ ನಾಡಿಗೆ ಬೇರೆಬೇರೆ ಕಾರಣಕ್ಕಾಗಿ ಅನ್ಯರು

ಪ್ರವೇಶಿಸಿದ್ದಾರೆ. ಆದರೆ ಅವರಲ್ಲಿ ನಾಡಿನ ಭಾಷೆಯನ್ನು ಕಲಿಯುವ ಆಸಕ್ತಿ ತೀರಾ ಕಡಿಮೆಯಾಗಿತ್ತು. ಅನ್ಯಭಾಷಿಕರು ಕನ್ನಡಿಗರನ್ನು ಆಕ್ರಮಿಸುವ ಸಂಗತಿ ನಾಡಿಗೆ ಹೊಸದೇನಲ್ಲ. ಇದನ್ನು ಕನ್ನಡದ ಕವಿಗಳು ಕಾವ್ಯ ರಚನೆಯ ಮೂಲಕ ಖಂಡಿಸಿದ್ದಾರೆ. ಇದಕ್ಕೆ ಸುನೀತಾ ಲೋಕೇಶ್ ಅವರ ಕವನ ಉತ್ತಮ ನಿದರ್ಶನ.

ಕನ್ನಡ ನಾಡಲಿ ಬದುಕಲು ಬಂದ
ನೆರೆಹೊರೆಯ ಬಾಂಧವರೇ
ಕನ್ನಡ ನುಡಿಯ ಕಲಿಯದ ನಿಮಗೆ
ನನ್ನ ಮೊರೆಯಿದು ಕೇಳಿರೇ? (ನನ್ನ ಮೊರೆ)

ಆಶ್ರಯ ಕೊಟ್ಟ ನಾಡಿನ ಭಾಷೆಯನ್ನು ಕಲಿಯುವುದು ವ್ಯವಹಾರದ ದೃಷ್ಟಿಯಿಂದ ಅಗತ್ಯ. ಅದನ್ನು ನಿರಾಕರಿಸಿದಾಗ,

ಕನ್ನಡ ಮಣ್ಣಿನ ದುಡಿಮೆಯು ಬೇಕು
ಕರುನಾಡಿನಲ್ಲಿ ಜೀವನ ಸಾಕು
ಉಸಿರಾಡಲು ಬೇಕು ಕಸ್ತೂರಿ ಪವನ
ಕನ್ನಡದೆಡೆಗೇಕಿಲ್ಲ ಗಮನ?

ಎಂಬುದಾಗಿ ಕವಯಿತ್ರಿ ಪ್ರಶ್ನಿಸುತ್ತಾರೆ. ನಾಡಿನಲ್ಲಿ ಉತ್ಕೃಷ್ಟವಾದ ಸಂಸ್ಕೃತಿಯಿದೆ. ಪ್ರಕೃತಿಯ ಸೊಬಗು ಕೈ ಬೀಸಿ ಕರೆಯುತ್ತಿದೆ. ಸಹೃದಯಿಗಳಾದ ಕನ್ನಡಿಗರ ಮಧ್ಯೆ ಇದ್ದೂ, ನಿಮಗೆ ಕನ್ನಡ ನುಡಿಯಲು ಮನಸ್ಸಿಲ್ಲ ಎಂಬುದಾಗಿ ಅನ್ಯರ ನಿರಾಸಕ್ತಿಯನ್ನು ಪ್ರಕಟಪಡಿಸಿದ್ದಾರೆ. ಇಂತಹ ಮಂದಿಯಲ್ಲಿ ಕವಯಿತ್ರಿಯ ಮೊರೆ,

ಕನ್ನಡ ಕಲಿಯಿರಿ ಕನ್ನಡ ಬಳಸಿರಿ
ಕನ್ನಡ ಉಳಿಸಿರಿ ಕನ್ನಡ ಬೆಳೆಸಿರಿ
ಅನ್ನದಾತ ಕನ್ನಡವ ಸ್ಮರಿಸಿರಿ
ಕನ್ನಡಮ್ಮನ ವೈಶಾಲ್ಯತೆಗೆ ನಮಿಸಿರಿ

ಆಶ್ರಯ ಮಾತ್ರ ಸಾಲದು. ಅಲ್ಲಿನ ಭಾಷೆಯನ್ನು ಗೌರವಿಸುವ ಮತ್ತು ಕಲಿಯುವ ಆಸಕ್ತಿಯೂ ಅಗತ್ಯವಾಗಿ ಬೇಕು. ಅದಕ್ಕಾಗಿ ಪ್ರಯತ್ನಿಸಿ ಎಂಬುದಾಗಿ ಮೊರೆಯಿಟ್ಟಿದ್ದಾರೆ.

ಭೂಮಿಯ ಸಂಪತ್ತನ್ನೆಲ್ಲಾ ಕೊಳ್ಳೆಹೊಡೆದು ನಾಡನ್ನು ನಾಶ ಮಾಡಿದ ಮನುಷ್ಯನ ವರ್ತನೆಯನ್ನು ಕೆ. ಎ. ಸಂಕೇತ್ ತಮ್ಮ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

ನೆಲ – ನದಿ – ಸಮುದ್ರವನ್ನೆಲ್ಲ ತಡಕಾಡಿ

ಕಾಡುಮೇಡು ವನವನೆಲ್ಲ ಜಾಲಾಡಿ, ಕಡೆಗೆ
ಹಿಮಗಡ್ಡೆಗಳನ್ನೆಲ್ಲ ಅಲುಗಾಡಿಸಿ,
ಎಲ್ಲೆಲ್ಲಿ ಏನೇನು ಅಡಗಿದೆಯೋ
ಎಲ್ಲವನ್ನು ಪತ್ತೆಹಚ್ಚಿ ಹೆತ್ತ ತಾಯಿಯ ಒಡಲನ್ನು
ತಿಂದು ತೇಗಿದ, ಕೊನೆಗೂ ಆಸೆ ತೀರದೆ
ಮನುಕುಲದ ಕ್ರೂರ ಹತ್ಯೆಗೆ ಬಲಿಯಾಗಿ
ಕಪ್ಪು ಹೊಗೆಯ ಉಂಡೆ ಉರಿದು ಉಂಡೆಯಾಗುವ
ದಿನ ಇನ್ನೂ ದೂರವಿಲ್ಲ... (ಕೊನೆ ಎಂತೂ)

ಮನುಷ್ಯರದು ತೀರದ ಆಸೆ. ಹಸಿರನ್ನು ನಾಶಮಾಡಿ ಕಾಂಕ್ರೀಟು ಕಾಡಿನ ನಿರ್ಮಾಣವಾಗಿದೆ. ನಾಡಿನ ಸಂಪತ್ತನ್ನೆಲ್ಲ ಕೊಳ್ಳೆಹೊಡೆದು ಬರಡು ಮಾಡಲಾಗಿದೆಯೆಂಬ ವಿಷಾದವನ್ನು ಇಲ್ಲಿ ಗಮನಿಸಬಹುದು.

ಬದುಕಿನ ಶಿಕ್ಷಣಕ್ಕೆ ಮುಖಾಮುಖಿಯಾಗುತ್ತಿರುವ ತನ್ನ ಚೊಚ್ಚಲ ಕುಡಿ ಕನ್ನಡದ ಕಂದನಾಗಿಯೇ ಉಳಿಯಬೇಕೆಂಬ ಹಂಬಲ ಕವಯಿತ್ರಿ ಅರುಷ ಶೆಟ್ಟಿಯವರದ್ದು.

ಹೇ ಜಗತ್ತೆ – ನನ್ನ ಕಂದ
ಕನ್ನಡಾಂಬೆಯ ಕಿರೀಟದ ಮುತ್ತು
ಬಿಡಬೇಡ ಆಗಲು ಪರರ ಸ್ವತ್ತು (ಚೊಚ್ಚಲ ನುಡಿ)

ವಿದ್ಯಾವಂತನಾಗಲಿರುವ ತನ್ನ ಕಂದ ಅನ್ಯರ ಪಾಲಾಗದಿರಲಿ. ಆತ ಕನ್ನಡಿಗನಾಗಿಯೇ ಉಳಿಯಲಿ ಎಂಬ ಪ್ರಾರ್ಥನೆ ಇಲ್ಲಿದೆ.

**ಹೆಣ್ಣಿನ ರಕ್ಷಣೆಯ ಆತಂಕ**

ಹೆಣ್ಣಿಗೆ ರಕ್ಷಣೆಯಿಲ್ಲವೆಂಬ ಆತಂಕದ ಸ್ಥಿತಿ ನಾಡಿನಲ್ಲಿದೆ. ಈ ನೋವು ಕವಿಗಳನ್ನು ಕಾಡಿದೆ. ಹಂಸ ಅವರ ಕವನ ಇದನ್ನು ನಿರೂಪಿಸಿದೆ.

ಅಕ್ಕ ತಂಗೀರಿಗೆಲ್ಲಿಯ ಶ್ರೀರಕ್ಷೆ
ಮತ್ತೆ ಮತ್ತೆ ದ್ಯೂತದ ಸಂಚು
ಹರಕೆಯ ಕುರಿಯ ಬಿಟ್ಟಂತವರಿಗೆ
ನಿನ್ನದೆಲ್ಲಿಯ ಚಿಂತೆ ಕನ್ನಡವ್ವ (ಕನ್ನಡವ್ವ)

ದ್ಯೂತದ ಸಂಚಿನಲ್ಲಿ ನಾಡನ್ನು ಪಣಕ್ಕಿಡುವ ಮಂದಿಯ ಮಧ್ಯೆ ನಾಡಿನ ಹೆಣ್ಣುಮಕ್ಕಳಿಗೆ ಸುರಕ್ಷೆ ಇರುವುದೇ? ಶ್ರೀಕೃಷ್ಣನಿಲ್ಲದ ಧರ್ಮಯುದ್ಧ ನಿರಂತರ ನಡೆಯುತ್ತಿದೆ. ಹೆಣ್ಣಿನ ಬದುಕಿನಲ್ಲಿ ಆಟವಾಡುವ, ಅವಳನ್ನು ಕೇವಲವಾಗಿ ನೋಡುವ ನೋಟದಲ್ಲಿ ಬದಲಾವಣೆಯಾಗಿಲ್ಲ. ಕನ್ನಡ ಜನರೂ ಅಧರ್ಮ ಮಾರ್ಗದಲ್ಲಿ ಕ್ರಮಿಸುತ್ತಿದ್ದಾರೆಂಬ ಆತಂಕವನ್ನು ಕವಯಿತ್ರಿ ವ್ಯಕ್ತಪಡಿಸಿದ್ದಾರೆ. ನಾಡಿನ ಬಾಲೆಯರು ಕರಾಳ ಶೋಷಣೆಗೆ ಒಳಗಾಗುತ್ತಿರುವ ನೋವು ದೊಡ್ಡರಂಗೇಗೌಡರ ಕವನದಲ್ಲಿ ಅನಾವರಣಗೊಂಡಿದೆ.

ಕ್ರೂರ ರಕ್ಕಸ ಮುಷ್ಟಿಯಲ್ಲಿ
ಮುಗ್ದೆ ನಲುಗಿಹಳೋ
ಸ್ನಿಗ್ಧೆ ಭಯಭೀತಳೋ
ಯಾತಕೆ ಬಂತೋ ಇಂಥ ವ್ಯವಸ್ಥೆ
ಇಂಥ ಅರ್ಬುದಕೆ ಎಂದೋ ಕೊನೆ
ಹದುಳವಾದೀತೆಂದು ನಾಡಿನ ಈ ಮನೆ?
ತಪ್ಪೀತೆ ಬಾಲೆಗೆ ಕರಾಳ ಶೋಷಣೆ
ರಕ್ಷಕರು ಪಡೆದರೆ ಕಾಂಚಾಣ ದಕ್ಷಿಣೆ
ಸಿಕ್ಕಿತೇ ಸೋದರಿಗೆ ಕಾನೂನು ರಕ್ಷಣೆ? (ಕೆಂಪು ದೀಪದ ಕೊಂಪೆಯಲ್ಲಿ)

ಪರಂಪರೆಯಿಂದ ಆಧುನಿಕದವರೆಗೂ ಹೆಣ್ಣು ನಿರಂತರ ಶೋಷಣೆಗೆ ಒಳಗಾಗಿದ್ದಾಳೆ. ವಸ್ತುಗಳ ಹಾಗೆ ಅವಳ ಮಾರಾಟ ನಡೆದಿದೆ. ಈ ಬಗ್ಗೆ ಕವಿಯ ಆತಂಕದ ದನಿ ಮೇಲಿನ ಸಾಲುಗಳಲ್ಲಿದೆ. ಈ ಸ್ಥಿತಿ ವಾಸಿಯಾಗದ ಅರ್ಬುದ ರೋಗಕ್ಕೆ ಸಮಾನ. ಕಾಂಚಾಣದ ಮೋಹ ಮನುಷ್ಯರನ್ನು ಎಂತಹ ಹೀನ ಸ್ಥಿತಿಗೆ ತಳ್ಳುತ್ತದೆ ಎಂಬುದು ಯೋಚಿಸಬೇಕಾದ ಸಂಗತಿ. ನಿರಂತರ ಅನುಭವಿಸುತ್ತಾ ಬಂದಿರುವ ಅತ್ಯಾಚಾರ, ದುರಾಚಾರ, ಮಾನಭಂಗ, ಶೀಲಭಂಗ ಮುಂತಾದ ಪದಗಳ ಭಾರದಿಂದ ಹೆಣ್ಣು ಮುಕ್ತಳಾಗಿಲ್ಲ. ಈ ಕುರಿತು ಕಮಲ ಎಂ . ಆರ್. ಅವರು ಗಮನಸೆಳೆಯುತ್ತಾರೆ. ಹೆಣ್ಣು ಆಡಲಾರದ, ಅನುಭವಿಸಲಾರದ ತಲ್ಲಣಗಳನ್ನು ಇವರ 'ಹಾಗಾದರೆ ಮಾರಿಬಿಡಿ' ಕವನ ಅಭಿವ್ಯಕ್ತಗೊಳಿಸುತ್ತದೆ.

ಅತ್ಯಾಚಾರ, ದುರಾಚಾರ, ಮಾನಭಂಗ, ಶೀಲಭಂಗ...
ಭರಿಸಬಹುದೇ ಹೆಂಗೂಸುಗಳು ಇಂಥ ಪದ ಭಾರವನ್ನು
ದೇಹ ಮಾರುವುದ ಕಾನೂನುಬದ್ಧಗೊಳಿಸಿ – ಯಾರೋ ಕೂಗುತ್ತಾರೆ
ಮಾರುವ ಮಾರಿ ಹೊಕ್ಕಿದ್ದು ನಿನ್ನೆ ಮೊನ್ನೆಯೇನಲ್ಲ

'ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೈಗೊಂಡರು
ಎಂದು ಪಾಂಚಾಲಿ ಒರಲಿದಷ್ಟೇ,
ಚಂದ್ರಮತಿ ಹರಾಜು ಕಟ್ಟೆಯಲಿ ನಿಂತಷ್ಟೇ ಹಳೆಯದು'

(ಹಾಗಾದರೆ ಮಾರಿಬಿಡಿ)

ಹೆಣ್ಣಿನ ಅಭದ್ರ ಪರಿಸ್ಥಿತಿಗೆ ಆಕ್ರೋಶವನ್ನು ಈ ಕವನ ವ್ಯಕ್ತಪಡಿಸುತ್ತದೆ. ಪುರಾಣದಲ್ಲಿಯೂ ಮಾರಾಟಕ್ಕೊಳಗಾದ ದ್ರೌಪದಿ, ಚಂದ್ರಮತಿಯರ ಬದುಕು ನಮ್ಮ ಕಣ್ಣೆದುರಿಗಿದೆ. ಆಧುನಿಕ ಪ್ರಪಂಚದಲ್ಲಿಯೂ ಹೆಣ್ಣು ಇಂತಹ ಸ್ಥಿತಿಯನ್ನು ಅನುಭವಿಸುತ್ತಿದ್ದಾಳೆ. ಇದು ನಾಡಿನ ಆತಂಕದ ಸಂಗತಿಯೂ ಆಗಿದೆ. ಒಂದು ಕಡೆ,

ಭರತಭೂಮಿಯಲಿ ಶಕುಂತಲೆಯ ನಾಡಿನಲಿ
ಬೆಳಗುತ್ತಿದೆ ಚೈತನ್ಯದ ಚಿಲುಮೆ
ಮನುವಿನ ಕಬಂಧಬಾಹುವ ಭೇದಿಸಿ
ಮನಮನವನನುಗೊಳಿಸಿ
ಪ್ರಜ್ವಲಿಸುತ್ತಿದೆ ನಾರೀಮಣಿಯರ ದಿವ್ಯ ಪ್ರಭೆ (ಸಂಜಾತೆ)

ಎನ್ನುತ್ತಾ ಹೆಣ್ಣನ್ನು ಹೊಗಳಿ ಅವಳ ದಿವ್ಯ ಪ್ರಭೆಯನ್ನು ಗುರುತಿಸಿದವರು ಪಿ. ಎ. ಸುಶೀಲಾ. ಹೆಣ್ಣು ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಕಾಲಿಟ್ಟಿದ್ದಾಳೆ. ಸಮಾಜದ ಮನ್ನಣೆಗೆ ಪಾತ್ರಳಾಗಿದ್ದಾಳೆ. ಆದರೆ ಇನ್ನೊಂದೆಡೆ ಆಕೆ ಶೋಷಣೆಗೊಳಗಾಗುವ ಬಗೆಯನ್ನು ಸವಲಂ ಭೋಜಣ್ಣ ಶೆಟ್ಟಿ ಚಿತ್ರಿಸಿದ್ದಾರೆ.

ಅಬಲೆಯರ ಆಟದ ವಸ್ತುವ ಮಾಡಿ
ಸಂಪ್ರದಾಯಗಳಿಗೆ ಬಲಿಕೊಟ್ಟು ಖುಷಿಪಡುವ
ದ್ವಿಪಾದ ಪಶುವುಗಳು ಭಯಂಕರ ವಿಕಟ ನಗೆ (ನನ್ನೊಳಗಿನ ನಾನು)

ವಿದ್ಯಾವಂತರ ಸಮಾಜದಲ್ಲಿಯೂ ಹೆಣ್ಣಿನ ದೌರ್ಜನ್ಯ ನಿರಂತರ ನಡೆಯುತ್ತಿದೆ. ಸಮಾಜದ ಪೆಡಂಭೂತಗಳು ನಿತ್ಯ ಅವಳನ್ನು ಕಾಡುತ್ತಿವೆ. ಅವಳ ಬಗ್ಗೆ ಅನುಕಂಪ ತೋರಿಸುವ ಸಹೃದಯರ ಅಗತ್ಯವಿದೆ ಎಂಬುದು ಕಮಲ ಕರಿಯಪ್ಪ ಅವರ ಕವಿತೆಯ ಆಶಯವಾಗಿದೆ.

ನೀವೇನೋ ವಿದ್ಯಾವಂತರು ಸುಸಂಸ್ಕೃತ ಸಮಾಜ
ನಿಲ್ಲುವುದೇನು? ಮಹಿಳೆ ಮೇಲಾಗುತ್ತಿರುವ ದೌರ್ಜನ್ಯ
ಅತ್ಯಾಚಾರ ಬಲಾತ್ಕಾರ ವರದಕ್ಷಿಣೆಯ ಪಿಡುಗು
ನೀವಾಗುವಿರಾ ಸಹೃದಯರು? (ಸಹೃದಯತೆ)

ನಾಡಿನ ಸಂಪತ್ತನ್ನು ನುಂಗುವ ಮಂದಿಯನ್ನು ದೊಡ್ಡರಂಗೇಗೌಡರು 'ಗುಮ್ಮಣ್ಣ'ಗಳು ಎಂದಿದ್ದಾರೆ. ಈ ಗುಮ್ಮಣ್ಣಗಳ ಅಸ್ತಿತ್ವ ಕಣ್ಣಿಗೆ ಕಾಣುವುದೇ ಇಲ್ಲ. ಇವರು ಗೂಬೆಗಳಂತೆ ಕುಳಿತಲ್ಲೇ ಕುಳಿತು ಅಲ್ಲಿಂದಲೇ ಕಾರು-ಬಾರು ಮಾಡುವವರು. ಇವರು ಬೊಕ್ಕಸದ ಭಕ್ಷಕರು, ಅಮಾನವೀಯ ರಾಕ್ಷಸರು. ಮಾತ್ರವಲ್ಲ,

ಎಲ್ಲೇ ಗೋಮಾಳ ಇರಲಿ
ಅಲ್ಲಿ ಪ್ರತ್ಯಕ್ಷ ಇವರು
ಎಲ್ಲೇ ಕೆರೆ ಬತ್ತಿರಲಿ
ಅಲ್ಲಿ ಇವರು ಹಾಜರು (ಗುಮ್ಮಣ್ಣಗಳು)

ಸಂಪತ್ತಿದ್ದಲ್ಲೆಲ್ಲ ಮೂಗು ತೂರಿಸಿ ದೋಚುವ ಬದುಕು ಇವರದು. ಇಂತಹವರಿಂದ ನಾಡು ಉಳಿಯದು ಎಂಬ ಅಭಿಪ್ರಾಯ ಕವನದಲ್ಲಿದೆ. ಮಾತ್ರವಲ್ಲ,

ಹಸಿರಿನ ಸಿರಿ ವನ್ಯಧಾಮ
ಬೋಳು ಬೋಳಾಗಿದೆ
ಗಿರಿ ದರಿ ಹಿರಿ ಗೋಮಾಳ
ಒತ್ತುವರಿ ಆಗಿದೆ (ಪರಿಸರ: ಪರಿಣಾಮ)

ಎನ್ನುವುದರ ಮೂಲಕ ಪ್ರಕೃತಿ ಮೇಲೆ ನಡೆಯುತ್ತಿರುವ ದಾಳಿಯನ್ನು ಕವಿ ಬಿಂಬಿಸುತ್ತಾರೆ. ಕೆರೆ-ಕುಂಟೆಗಳು, ಗೋಮಾಳಗಳು ಒಂದು ನಾಡಿನ ಸಮೃದ್ಧಿಯ ಸಂಕೇತಗಳು. ಇವನ್ನೆಲ್ಲಾ ನುಂಗಿ ನೊಣೆಯುತ್ತಿರುವವರ ವಿರುದ್ಧ ಕವಿ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ದೊಡ್ಡರಂಗೇಗೌಡರ 'ಯುಗವಾಣಿ' ಈ ಹಿನ್ನೆಲೆಯಿಂದ ಗಮನಿಸಬೇಕಾದ ಕವನ. 'ನೂರು ಅಹಿತದೊಡನೆ ನಡೆದಿದೆ ಸಮರ, ನೀ ಲೇಖನಿಯೊಡನೆ ಸೆಣಸೋ' ಎಂದು ಆರಂಭವಾಗುವ ಕವನ ನಾಡಿನಲ್ಲಿ ನಡೆಯುತ್ತಿರುವ ಅಕ್ರಮಕ್ಕೆ ಕವಿ ಲೇಖನಿಯಾಗಬೇಕು ಎನ್ನುತ್ತಾ, ಆ ಅಕ್ರಮಗಳ ಪಟ್ಟಿಯನ್ನು ಬಿಚ್ಚಿಡುತ್ತಾರೆ.

ಸುತ್ತಮುತ್ತ ವಂಚನೆ ಹಾಡುಹಗಲೇ ಲೂಟಿ
ಅಪರೂಪಕ್ಕೆ ಬೀಸುತ್ತೇ ಕಾನೂನು ಚಾಟಿ
ಭೂಕಬಳಿಕೆ ಈಗ ಅತಿ ದುಷ್ಟ ಜಾಲ
ಗಣಿಗಾರಿಕೆಯಂತು ಬಹುದೊಡ್ಡ ದಂಧೆ
ಅಧಿಕಾರಿಗಳೇನೋ ಜಾಣ ಕುರುಡರಾಗಿ
ತೀರ್ಪು ಕೊಡುವ ಮಂದಿ ಜಾಣ ಕಿವುಡರಾಗಿ

ಎಲ್ಲೆಲ್ಲೂ ಅಕ್ರಮ ಯದ್ವಾತದ್ವಾ ನಡೆದು

ರಾಜಾ ರೋಷದಲ್ಲಿ ರಕ್ಕಸರು ಮೆರೆದು

ಬಡಜನರ ಸ್ಥಿತಿಯು ಬಲು ಘೋರ ಘೋರ (ಯುಗ ವಾಣಿ)

ನಾಡಿನೆಲ್ಲೆಡೆ ನಡೆಯುತ್ತಿರುವ ಅಕ್ರಮವನ್ನು ಖಂಡಿಸಬೇಕು. ಲೇಖನಿಯನ್ನು ಕತ್ತಿ ಮಾಡಬೇಕು. ಅಕ್ರಮದ ನೆಲೆಯನ್ನು, ಅನ್ಯಾಯದ ಸೆಲೆಯನ್ನು, ಅಧರ್ಮದ ಬಲೆಯನ್ನು, ಸತ್ಯದ ತಲೆಯನ್ನು ಕೊಚ್ಚಿ ಕೆಡಹುವ ಕಾವ್ಯ ಮೂಡಿಬರಬೇಕು ಎನ್ನುವ ಆಶಯವನ್ನು ವ್ಯಕ್ತಪಡಿಸಿದ್ದಾರೆ. ನಾಡಿನ ಗೋಮಾಳಗಳು ಪ್ರಭಾವಿಗಳ ಪಾಲಾಗುತ್ತಿರುವುದು ತಿಳಿದಿರುವ ಸಂಗತಿ. ಜಮೀನು ಇಲ್ಲದವರು ಇಂತಹ ಪ್ರದೇಶಗಳಲ್ಲಿ ಸಾಗುವಳಿ ಮಾಡಿದರೆ ಅವರ ಪೂರ್ವಾಪರಗಳನ್ನು ಪರಿಶೀಲಿಸಿ ಒಪ್ಪಿಗೆ ನೀಡುವುದಿತ್ತು. ಆದರೆ ಇಲ್ಲಿ ಭೂಮಾಳವನ್ನು ಆಕ್ರಮಿಸಿದವರು ಬಡವರಲ್ಲ. ಇಂತಹ ವ್ಯಕ್ತಿಗಳ ಕುರಿತು ಕವಿಗೆ ಆಕ್ರೋಶವಿದೆ. ಕವಿಗಳೆಲ್ಲ ಲೇಖನಿಯ ಮೂಲಕ ಇದನ್ನು ಖಂಡಿಸಿದರೆ ಆದರ್ಶ ರಾಜ್ಯ ಮತ್ತೆ ಮೂಡಿ ಬರಬಹುದೆಂಬ ಅಭಿಪ್ರಾಯ ಕವಿಯದು.

ಹಸಿರನ್ನು ಉಳಿಸಿದರೆ ಮನುಷ್ಯರಿಗೆ ಬದುಕಲು ಅವಕಾಶ. ಅಂತಹಾ ಹಸಿರನ್ನು ಸ್ವಾರ್ಥಲಾಲಸೆಯಿಂದ ನಾಶ ಮಾಡುತ್ತಿದ್ದಾರೆ. ಮರಗಳನ್ನು ಕಡಿದು ರಾಜ ರಸ್ತೆ ನಿರ್ಮಾಣವಾಗುತ್ತಿದೆ. ನಾಡು ಕಾಂಕ್ರೀಟು ಕಾಡಾಗಿ ಮಾರ್ಪಡುತ್ತಿದೆ. ಈ ಆತಂಕ ಕವಿಗಳನ್ನು ಕಾಡಿದೆ. ಮರವೊಂದು ತನ್ನನ್ನು ಕಡಿಯಬೇಡಿರೆಂದು ಅಂಗಲಾಚುವ ಆಶಯವನ್ನುಳ್ಳ ಕವಿತೆ ವೈ. ಎಸ್. ಗೋಪಾಲರಾವ್ ಅವರ 'ಆಕ್ರಂದನ'. ದೇವರನ್ನು ಕಾಣುವ ನಂಬಿಕೆಯುಳ್ಳ ಮನುಷ್ಯರು ಮರ ಕಡಿಯಲು ಸಜ್ಜಾದಾಗ ಆ ಮರ ಆಕ್ರಂದಿಸುತ್ತದೆ. ತಾನು ಮನುಷ್ಯ ಬದುಕಿಗೆ ಏನೆಲ್ಲಾ ಆಗಿದ್ದೇನೆ ಎಂಬುದನ್ನು ತಿಳಿಸುತ್ತಾ 'ಕಡಿಯಬೇಡಿರೋ' ಎಂದು ನಿವೇದಿಸುವ ಬಗೆ ಮನಸ್ಸನ್ನು ಆರ್ದ್ರಗೊಳಿಸುತ್ತದೆ. ಮರದೊಡಲ ಫಲಗಳು ಮನುಷ್ಯರ ಹಸಿವನ್ನು ನೀಗಿಸುತ್ತವೆ. ನೆರಳು ಆಶ್ರಯ ಕೊಟ್ಟಿದೆ. ಇದನ್ನೆಲ್ಲ ಪಡೆದ ಮಾನವ,

ಬಾಯಲ್ಲಿ ಶಾಂತಿ ಮಂತ್ರ ಜಪಿಸಿ

ಸೋಗಲಾಡಿತನ ತೋರುವ ಮನುಜರೇ

ಸ್ವಲ್ಪ ಯೋಚಿಸಿ ನೀವು ನೀಡಿದ

ಹಾಲಾಹಲ ಕುಡಿದು ನೀಡಿಲ್ಲವೇ

ನಿಮಗೆ ಪ್ರಾಣವಾಯುವನ್ನು

ಇಷ್ಟಾದರೂ ನನ್ನ ಮೇಲಿನ ಆಕ್ರೋಶ ತಣಿದಿಲ್ಲವೇ!

ಸಾಲುಮರದ ತಿಮ್ಮಕ್ಕ ನಂತೆ ನಮ್ಮ ಮೇಲೆ

ಒಲವಿನ ಒರತೆಯನ್ನು ಹರಿಸದಿದ್ದರೂ ಚಿಂತೆಯಿಲ್ಲ
ನಿಮ್ಮ ಹಸಿಹಸಿಯಾದ ದಾಹ ಇಂಗಿಸಿಕೊಳ್ಳುವ ಮುನ್ನ
ನಮ್ಮಷ್ಟಕ್ಕೆ ನಮಗೆ ಬದುಕಲು ಬಿಡಿ (ಆಕ್ರಂದನ)

ಇಲ್ಲಿ ಮರದ ಆಕ್ರಂದನ ಕವಿಯ ಆಕ್ರಂದನವೇ ಆಗಿದ್ದು ಎಂತಹವರ ಎದೆಯನ್ನು ಕರಗಿಸುತ್ತದೆ. ಹಸಿರಿನ ನಾಶ ಮನುಷ್ಯನ ನಾಶವೇ ಹೌದು. ಇದರಿಂದ ನಾಡು ಜಲಕ್ಷಾಮದ ಸಂಕಟವನ್ನು ಅನುಭವಿಸುತ್ತಿದೆ. ಹಸಿರಿನ ಮಹತ್ವವನ್ನು ಅರ್ಥಮಾಡಿಕೊಂಡು ಅದರ ಜೊತೆ ಬದುಕನ್ನು ಕಟ್ಟಿಕೊಂಡರೆ ನಾಡು ಸುಭಿಕ್ಷವಾದೀತು.

ನಾಡಿನೊಳಗಿನ ಜನರು ನಾಡಿನ ಏಳಿಗೆಯನ್ನು ಬಯಸುವ ಬದಲು ನಾಡನ್ನು ಅಧಃಪತನಕ್ಕೆ ದೂಡುತ್ತಿದ್ದಾರೆ. 'ನಮ್ಮವರೇ ಇವರೆಲ್ಲರೂ' ಕವನದಲ್ಲಿ ಜಿ. ಎಸ್. ಎಸ್. ಅವರು ಇಲ್ಲಿನ ಜನರ ಅಸಭ್ಯತನವನ್ನು ವಿಡಂಬಿಸಿದ್ದಾರೆ.

ನಮ್ಮವರೆ ನಮ್ಮವರೆ ಇವರೆಲ್ಲರೂ
ನೂರಾರು ರೀತಿಯಲಿ ಅಡ್ಡ ಹಾದಿಯ ಕಡಿದು
ಗುಡ್ಡವ ದಾಟಿ, ಚಿನ್ನಕ್ಕೆ ಕನ್ನ ಕೊರೆಯುವ ಜನರು
ಬೆವರಿಲ್ಲದೇನೆ ಬಳಿಗೆ ಬಂದುದ ತುಡುಕಿ, ಅಡಕಿ,
ಬ್ಯಾಂಕಿನಲ್ಲಿ ಬೆಳೆವ ಬಡ್ಡಿಗೆ ತುಡಿವ ತಾಪಸಿಗಳು
ಬೆಳಗಾದೊಡನೆ ನೀರಿಗೆ ಹಾಲನ್ನು ಬೆರೆಸಿ, ಅನ್ನಕ್ಕೆ
ಕಲ್ಲನು ಇಡುಕಿ, ಹಳಸಿದ್ದನ್ನೇ ಬಿಸಿ ಮಾಡಿ ಬಡಿಸಿ
ನಾಲಿಗೆಯಲ್ಲೆ ಮೂಲೋಕವನೆ ಜಾಲಿಸಿ ನಿಂತ
ಮಹಾನುಭಾವರೆ ಇವರು ನಮ್ಮವರೆ ಇವರೆಲ್ಲ? (ನಮ್ಮವರೆ ಇವರೆಲ್ಲರೂ)

ಬದುಕಿಗಾಗಿ ಇಂತಹವರು ಆಯ್ಕೆ ಮಾಡಿಕೊಂಡದ್ದು ಅಡ್ಡದಾರಿ. ಮನುಷ್ಯರಿಗೆ ಬೇಗ ಶ್ರೀಮಂತರಾಗಬೇಕೆಂಬ ಹಂಬಲ. ಧರ್ಮಮಾರ್ಗ ಈ ಬದಲಾವಣೆಗೆ ಒಪ್ಪದು. ಆಗ ಅಧರ್ಮ ಮಾರ್ಗದಲ್ಲಿ ಕ್ರಮಿಸಿ ಗಮ್ಯ ಸೇರುವ ತವಕ. ಜೊತೆಗೆ ಇಂಥವರು ಶ್ರಮಜೀವಿಗಳಲ್ಲ. ಅನಾಯಾಸವಾಗಿ ಬರುವ ಬ್ಯಾಂಕಿನ ಬಡ್ಡಿಯ ನಿರೀಕ್ಷೆಯವರು. ಇವರು ಮಾಡುವುದು ಎಂತಹ ಅನಿಷ್ಟದ ಕೆಲಸವೆಂದರೆ, ನೀರಿಗೆ ಹಾಲನ್ನು ಬೆರೆಸುವುದು, ಅನ್ನಕ್ಕೆ ಕಲ್ಲನ್ನು ಇಡುಕುವುದು, ತಂಗಳನ್ನು ಬಿಸಿಮಾಡಿ ಬಡಿಸುವುದು ಇತ್ಯಾದಿ. ಇವರಾಡುವ ಮಾತು ಮಾತ್ರ ಸುಳ್ಳಿನ ತಲೆಗೆ ಹೊಡೆದಂತೆ. ನಮ್ಮೊಂದಿಗೆ ಇದ್ದು ನಿತ್ಯ ಮೋಸಮಾಡುವ ಸ್ವಾರ್ಥಿಗಳ ವರ್ತನೆಯನ್ನು ಕವಿ ಇಲ್ಲಿ ಪರಿಚಯಿಸಿದ್ದಾರೆ. ಇಂತಹ ಜನರಿಂದಾಗಿ ನಾಡು ಹೇಗೆ ಸುರಕ್ಷಿತವಾಗಿರುವುದಕ್ಕೆ ಸಾಧ್ಯ?

ಸುರಕ್ಷಿತ ನಾಡಿಗೆ ಬೇಕಾದದ್ದು ನಿಯತ್ತು. ಇದು ನಾಡಿನ ಜನರಲ್ಲಿಲ್ಲ ಎಂಬ ನೋವು ಇಲ್ಲಿದೆ. ಇಂತಹ ನೆಲದಲ್ಲಿ ಬದುಕನ್ನು ಕಟ್ಟಿಕೊಳ್ಳುವ ಭಯ ಜಿ. ಎಸ್. ಎಸ್. ಅವರ 'ಭಯಗೀತ' ದಲ್ಲಿದೆ. ಭಯ ಮನುಷ್ಯರನ್ನು ಹೇಗೆ ಕಂಗೆಡಿಸಿದೆ ಎಂದರೆ,

ದಿನವೂ ತೆರೆಯುವ ಬದುಕಿನ ಬಾನೊಳು
ರಕ್ತದ ಕಲೆಗಳ ಛಾಯೆಯಿದೆ
ದಿನವೂ ಮುಚ್ಚುವ ಸಂಜೆಗತ್ತಲೊಳು
ನೋವಿನ ದನಿಗಳ ಹುಯ್ಯಲಿದೆ (ಭಯ ಗೀತ)

ದಿನಬೆಳಗಾದರೆ ಕೇಳಿಬರುವ ಹತ್ಯಾಕಾಂಡದ ಕೆಟ್ಟ ವಾರ್ತೆಗಳು. ಕ್ಷುದ್ರ ಸ್ವಾರ್ಥಗಳ ದಾಳಿಯಿಂದ ಛಿದ್ರವಾಗುತ್ತಿರುವ ಮುಗ್ಧರ ಬದುಕು. ಹಿರಿಯರು ಕಲಿಸಿದ ಸತ್ಯ, ಅಹಿಂಸೆಯ ಮಂತ್ರ ವ್ಯರ್ಥವಾಗುತ್ತಿದೆಯೋ ಎಂಬ ಆತಂಕ ಕವಿಯನ್ನು ಕಾಡಿದೆ. ಹೆಜ್ಜೆ ಇಡುವುದಕ್ಕೂ ಭಯವಾಗುವಂತಹ ಉಸಿರುಗಟ್ಟಿಸುವ ದಟ್ಟ ಹೊಗೆ ನಮ್ಮ ಸುತ್ತ ಆವರಿಸಿದೆ. ಇಲ್ಲಿ ಬದುಕನ್ನು ಕಟ್ಟಿಕೊಳ್ಳುವ ಅನಿವಾರ್ಯತೆಯಿದೆ. ಇಡೀ ನಾಡಿನಲ್ಲಿ ಭಯದ ನಿರ್ಮಾಣವಾದ ಬಗೆಯನ್ನು ಕವಿ ಗುರುತಿಸಿದ್ದಾರೆ. ಹೊಸ ಸಂವತ್ಸರವನ್ನು ಪ್ರತಿವರ್ಷ ಸ್ವಾಗತಿಸುವಾಗಲೂ ಒಡಲಿನೊಳಗೆ ನಡುಕವಾಗುತ್ತದೆ. ಯಾಕೆಂದರೆ, ಬೆಳಗ್ಗೆದ್ದು ಪತ್ರಿಕೆ ಓದಿದಾಗ ಸಿಗುವ ಭಯಾನಕ ಸುದ್ದಿಗಳು, ಅಮಾಯಕರ ಕಗ್ಗೊಲೆ, ಬಾಂಬು ಸಿಡಿ ಗುಂಡುಗಳ ದಟ್ಟ ಹೊಗೆ, ವಂಚನೆಯ ಬಲೆ ನಾಡನ್ನು ಕಂಗೆಡಿಸುತ್ತಿದೆ. ಸುಂದರವಾದ ಪ್ರಕೃತಿ ತನ್ನ ಜವಾಬ್ದಾರಿಯನ್ನು ನಿತ್ಯ ಪೂರೈಸುತ್ತದೆ. ಅದರ ಮಧ್ಯೆ ಮನುಷ್ಯ ಯಾಕೆ ವಿಕೃತನಾಗಿದ್ದಾನೆ ಎಂಬ ಆತಂಕವನ್ನು 'ಯುಗಾದಿಯ ಚಿಂತನ' ಕವನದಲ್ಲಿ ಜಿ. ಎಸ್. ಎಸ್ ವ್ಯಕ್ತಪಡಿಸಿದ್ದಾರೆ.

ಜಿ .ಎಸ್. ಎಸ್. ನಾಡು ತನ್ನ ಸಮೃದ್ಧಿಯನ್ನು ಕಳೆದುಕೊಂಡಿರುವ ಬಗೆಯನ್ನು 'ಯುಗಾದಿಯ ಹಾದಿಯಲ್ಲಿ' ಕವನದ ಮೂಲಕ ಗುರುತಿಸಿದ್ದಾರೆ. ಚೈತ್ರ ಮಾಸವು ಮಾಸಗಳಲ್ಲಿ ಮೊದಲನೆಯದು. ಸಮೃದ್ಧಿಯನ್ನು ಸೂಚಿಸುವಂತದ್ದು. ಆದರೆ ಕವಿ ಹೇಳುವಂತೆ,

ಯುಗಾದಿಗಳ ಹಾದಿಯಲ್ಲಿ
ಚಕ್ರಗಳುರುಳಿ, ಗಿರಣಿ ಹೊಗೆ
ಮಸಿ ಬಳಿದು ನೀಲಿಯಾಕಾಶಕ್ಕೆ
ಗಂಟಲು ಕವಿದಂತಾಗಿ ಹಾಡುವ ಹಕ್ಕಿಗೆ
ನದೀ ಜಲವೆಲ್ಲ ಕಲುಷಿತವಾಗಿ ಕಪ್ಪಗೆ
ದಿನದಿನವು ಬಾಯಾರಿ ನರಳುವ ಹೃದಯ

ಕೇಳುತಿದೆ ಎಲ್ಲಿ ಆ ಸಮೃದ್ಧ ಚೈತ್ರೋದಯ? (ಯುಗಾದಿಯ ಹಾದಿಯಲ್ಲಿ)

ನಗರೀಕರಣದಿಂದಾಗಿ ಚೈತ್ರಕ್ಕೆ ಅವಕಾಶವಿಲ್ಲದಂತಾಗಿದೆ. ತಾಪಮಾನ ಹೆಚ್ಚಾಗಿ ಭೂಮಿ ಬರಡಾಗುತ್ತಿದೆ. ಮನುಷ್ಯರು ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾರೆ. ಮನುಷ್ಯ ಮತ್ತು ಪ್ರಕೃತಿಯ ಮಧ್ಯೆ ಇದ್ದಂತಹ ಅಪ್ಯಾಯಮಾನವಾದ ಕೊಂಡಿ ಕಳಚುತ್ತಿದೆ. ಇದನ್ನು ಕಂಡ ಕವಿಯ ಮನಸ್ಸು,

ಇದ್ದ ಮರವನ್ನೆಲ್ಲ ಯಾರೋ ಕಡಿದಿದ್ದಾರೆ
ನೆರಳಿಲ್ಲ, ಹಕ್ಕಿಗಳ ದನಿಯಿಲ್ಲ
ಬೆಟ್ಟ- ಘಟ್ಟಗಳ ಮೈಯಲ್ಲಿ ಹಸುರೇ ಇಲ್ಲ
ಬಿಸಿಲು, ಬಿಸಿಲೋ ಬಿಸಿಲು, ಸುಡುವ ಬಿಸಿಲು. (ಯುಗಾದಿಯ ಹಾದಿಯಲ್ಲಿ)

ಇಂದು ನಾಡು ಈ ಸ್ಥಿತಿಯಿಂದಾಗಿ ಯಾತನೆಯನ್ನು ಅನುಭವಿಸುತ್ತಿದೆ. ಹಸಿರು ನಾಶದಿಂದಾಗಿ ಬದುಕು ನಾಶವನ್ನು ಕಾಣುತ್ತಿದೆ. ಮನುಷ್ಯರಿಗೆ ಸಿಕ್ಕಿರುವ ಅಮೂಲ್ಯವಾದ ಪ್ರಕೃತಿಯ ಕೊಡುಗೆಯನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ. ಇದು ನಾಡಿನ ಅಧಃಪತನದ ಸಂಗತಿಯೂ ಹೌದು ಎಂಬುದನ್ನು ಮೇಲಿನ ಕವನದ ಸಾಲುಗಳಿಂದ ಅರ್ಥೈಸಿಕೊಳ್ಳಬಹುದು.

ಕನ್ನಡಿಗರ ಔದಾರ್ಯವೇ ನಾಡಿನ ಅಧಃಪತನಕ್ಕೆ ಕಾರಣವೆಂಬ ಸಂಗತಿಯನ್ನು ಕವಿಗಳು ಗುರುತಿಸಿದ್ದಾರೆ. ವಲಸೆ ಬಂದವರಿಗೆ ದಾರಿ ಬಿಟ್ಟು ನಿಂತವರು ನಾವು. ಕರ್ತವ್ಯಪ್ರಜ್ಞೆಯನ್ನು ಮರೆತದ್ದರ ಫಲಶ್ರುತಿ ಇಂದು ಕಣ್ಣೆದುರಿಗಿದೆ. ಹೊಟ್ಟೆ ಹೊರೆಯುವುದಕ್ಕಾಗಿ ಈ ನಾಡಿನಲ್ಲಿ ಆಶ್ರಯ ಪಡೆದುಕೊಂಡವರು ನಾಡಿನ ಸಂಪತ್ತನ್ನು ದೋಚಿ ವಾಣಿಜ್ಯೋದ್ಯಮಕ್ಕೂ ಲಗ್ಗೆ ಹಾಕಿದ್ದಾರೆ. ಬೆರಳು ನೀಡಿದರೆ ಹಸ್ತ ನುಂಗುವ ಜನಗಳಿವರು. ಕನ್ನಡ ಸಂಸ್ಕೃತಿಯ ಮೇಲೆ ದಾಳಿಗಿಳಿದ ಈ ಜನರು ಮೂರು ಹೆಜ್ಜೆ ಜಾಗ ಪಡೆದ ವಾಮನನಂತೆ ಸಕಲವನ್ನು ಆಶ್ರಯಿಸಿ ನಮ್ಮನ್ನು ಬಲಿಯಾಗಿಸಿದ್ದಾರೆ. ಈ ಸಂಗತಿಯನ್ನು ಗಾಯತ್ರಿ ರಾಮಣ್ಣ ಅವರು ಕವನದಲ್ಲಿ ಗುರುತಿಸಿದ್ದಾರೆ.

ಕಾಸರಗೋಡು ಮಡಕ ಶಿರಾ ಸೊಲ್ಲಾಪುರ
ಹೊಸೂರುಗಳೆಲ್ಲಾ ನೆರೆಹೊರೆಯವರ ಪಾಲಾಗಿ ಇಂದು
ಕೃಷ್ಣ ಕಾವೇರಿಯರ ಜಲಭಾಗಗಳ
ಅಪೋಶಿಸಲು ಅನ್ಯರು ದಾಪುಗಾಲು ಹಾಕಿದರು
ಎದ್ದೇಳಿ ಇನ್ನಾದರೂ ಎಚ್ಚರಗೊಳ್ಳಿ
ತೊರೆದು ಸ್ವಾರ್ಥಿ ಪಕ್ಷಪಾತದ ವಂಚನೆಯ
ನಾಡಹಿತವೇ ಬಾಳ ಗುರಿಯಾಗಿಸೋಣ (ಕನ್ನಡಿಗರು ನಾವು)

ಮಿತಿಮೀರಿದ ವಲಸೆಯಿಂದ ಕರ್ನಾಟಕ ತತ್ತರಿಸುತ್ತಿದೆ. ಕೇವಲ ಉದ್ಯೋಗದ ದೃಷ್ಟಿಯಿಂದ ಮಾತ್ರವಲ್ಲ, ಫಲವತ್ತಾದ ಭೂಮಿಯನ್ನು ಖರೀದಿಸಿ ಅದರ ಒಡೆಯರು ಅವರೇ ಆಗುತ್ತಿದ್ದಾರೆ. ಇದರಿಂದಾಗಿ ಕರ್ನಾಟಕದ ಪ್ರದೇಶಗಳು ಕೈಬಿಟ್ಟು ಹೋಗಿವೆ. ಇಲ್ಲಿಯ ಜಲಸಿರಿ ಅನ್ಯರ ಪಾಲಾಗುತ್ತಿದೆ. ಎಚ್ಚೆತ್ತುಕೊಳ್ಳದಿದ್ದರೆ ಕನ್ನಡಿಗರು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುವ ಆತಂಕವನ್ನು ಕವನ ಪ್ರತಿಪಾದಿಸುತ್ತದೆ. ಗಮನಿಸಬಹುದಾದ ಇನ್ನೊಂದು ಕವನ ಸಂಜೀವ ಎಸ್. ಲದ್ದಿಮಠ ಅವರ 'ಗೋವುಗಳು ನಾವು'. 'ಕನ್ನಡಿಗರು ಒಡೆದ ಕನ್ನಡಿಯಂತೆ ಆಗಿದ್ದಾರೆ' ಎಂಬ ಆತಂಕವನ್ನು ಕವನ ಮುಂದಿಡುತ್ತದೆ. ಒಡೆದ ಕನ್ನಡಿಯನ್ನು ಮತ್ತೆ ಒಂದುಗೂಡಿಸುವುದು ಕಷ್ಟದ ಕೆಲಸ. ಕನ್ನಡಿಗರ ಸ್ಥಿತಿ ಹೀಗಾಗಿದೆ.

ಪಡೆದುದನು ಪರರಿಗೆ ಕೊಟ್ಟು ಉಳಿದುದನು
ಒತ್ತೆಯಿಟ್ಟು ಚಟ್ಟವೇರುವ ಕರ್ಣನ ಬಂಧುಗಳು (ಗೋವುಗಳು ನಾವು)

ಇದು ಕನ್ನಡಿಗರ ವರ್ತನೆ. ಹೊಗಳಿಕೆಗೆ ಉಬ್ಬಿ ಹೋಗುವವರು. ಸದಾ ಹೊಗಳಿಕೆಯನ್ನು ಬಯಸುವವರು. ಆತ್ಮಾಭಿಮಾನದ ಕೊರತೆಯಿಂದ ನಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದ್ದೇವೆ. ಉದಾರಗುಣ, ವಿಶಾಲ ಹೃದಯವಂತಿಕೆ ಕೆಲವೊಮ್ಮೆ ನಮಗೆ ಮುಳುವಾಗುತ್ತದೆ. ಎಲ್ಲಾ ವೈಭವೀಕರಣಗಳಿಂದ ಕನ್ನಡಿಗರು ಕೇವಲ ಕನಿಕರದ ವಸ್ತುವಾಗಿ ಕಾಣಿಸಿಕೊಂಡಿದ್ದಾರೆ. ಕನ್ನಡದ ಜನ ಒಳ್ಳೆಯವರು ಎನ್ನುತ್ತಲೇ ಎಲ್ಲ ಸವಲತ್ತುಗಳನ್ನು ಕಿತ್ತುಕೊಳ್ಳುವ ಹುನ್ನಾರ ನಿರಂತರ ನಡೆಯುತ್ತಿದೆ. ಕವಿ ಹೇಳುವಂತೆ ಕನ್ನಡಿಗರೆಂದರೆ,

ಮುಂದೆ ಬಂದರೆ ಹಾಯದೆ ಹಿಂದೆ ಬಂದರೆ
ಒದೆಯದೆ ಲತ್ತೆ ಪೆಟ್ಟು ತಿನ್ನುವ ಹಸುಗಳು
ಅನ್ಯಭಾಷೆಗಳ ಕಲಿತು ತಾಯಿ ಭಾಷೆಯ
ಮರೆತು ಮೆರೆವ ಶೂನ್ಯ ತಲೆಯವರು (ಗೋವುಗಳು ನಾವು)

ಕಲಿತ ಭಾಷೆ ಕನ್ನಡವಾದರೂ ಉದ್ಯೋಗದ ಭಾಷೆಯಾಗಿ ಇಂಗ್ಲೀಷನ್ನು ಆಯ್ಕೆ ಮಾಡಿಕೊಂಡಿದ್ದೇವೆ. ಅದಕ್ಕೆ ಪೂರ್ವ ತಯಾರಿಯೇ ಎಂಬಂತೆ ಅಲ್ಲಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ತಲೆಯೆತ್ತಿವೆ. ಚಿನ್ನ ಬೆಳೆವ ನಾಡಿನ ಚಿನ್ನದಂತಹ ಜನರು ಚಿನ್ನ, ಅನ್ನ ಎರಡೂ ದಕ್ಕದೆ ಬಾಯಿ ಬಿಡದ ಮೂಕರಾಗಿದ್ದೇವೆ. ಕಾವೇರಿ ಕೃಷ್ಣೆಯರಿಗಾಗಿ ಕಾದು ಕೃಷವಾಗಿದ್ದೇವೆ. ಹಾಗಾಗಿಯೇ ನಮ್ಮ ಬಾಳು ಸೂತ್ರವಿರದ ಗಾಳಿಪಟದಂತಾಗಿದೆ. 'ಯಾರು ಬೇಕಾದರೂ ಬನ್ನಿ ಈ ನಾಡಿಗೆ, ಸಿಕ್ಕಷ್ಟು ದೋಚಿ ಮರಳಿ ನಿಮ್ಮಯ ಗೂಡಿಗೆ' ಎಂದು ಅಭಿಮಾನ ಶೂನ್ಯರಾದ ನಾಡ ಜನರನ್ನು ಕವಿ ವ್ಯಂಗ್ಯವಾಡಿದ್ದಾರೆ.

ರಾಜಧಾನಿ ಬೆಂಗಳೂರಿನ ಸ್ಥಿತಿ ಶೋಚನೀಯವಾಗಿದೆ. ಇಲ್ಲಿ ಕನ್ನಡ ಮೂಲೆಗೆ ಸರಿದಿದೆ. ಇಂಗ್ಲಿಷ್ ಬರದವನ ಪಾಡು ನಾಯಿಪಾಡು. ಈ ಮಹಾನಗರದಲ್ಲಿ ಅನೇಕ ಭಾಷೆಗಳ ಸಂಗಮವಿದೆ. ಅನ್ಯ ಪ್ರದೇಶದವರು ಅನೇಕರಿದ್ದಾರೆ. ಬಟ್ಟೆ-ಬರೆ, ತಿಂಡಿ-ತಿನಿಸು, ಆಚಾರ-ವಿಚಾರ ಎಲ್ಲವುಗಳಲ್ಲಿಯೂ ಬದಲಾವಣೆಯ ಗಾಳಿ ಬೀಸುತ್ತಿದೆ. ಉದ್ಯಮದ ಹೆಸರಿನಲ್ಲಿ ನಾಡು ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿದೆ. ಹಾಗೆಂದು ವಲಸಿಗರೆಲ್ಲ ಇಂಥವರೇ ಇಂದು ವಾದಿಸುವುದು ತರವಲ್ಲ. ಅವರಲ್ಲಿಯೂ ಕೆಲವರು ನಾಡಿನ ಭಾಷೆಯನ್ನು ಕಲಿತು, ಇಲ್ಲಿಯ ಸಂಸ್ಕೃತಿಯನ್ನು ಗೌರವಿಸುವವರೂ ಇದ್ದಾರೆ. ಬಹುಶಃ ಸ್ವಂತದರ ಬಗ್ಗೆ ಅವಜ್ಞೆ, ಪರರ ಬಗೆಗಿನ ಆರಾಧನಾ ಭಾವಗಳನ್ನು ತೊರೆದಾಗ ನಾಡು-ನುಡಿಗೆ ನಿಜವಾದ ಹಿರಿಮೆ ಗರಿಮೆಗಳು ದಕ್ಕಬಹುದು.

ಕನ್ನಡ ನಾಡು ಕೋಮು ಸೌಹಾರ್ದತೆಗೆ ಪ್ರಸಿದ್ಧವಾದ ನಾಡಾಗಿತ್ತು. ಆದರೆ ಈಗ ಆ ದಳ್ಳುರಿ ಕನ್ನಡಿಗರನ್ನು ಕಂಗಾಲಾಗಿಸಿದೆ. ಇಂದಿನ ಸ್ಥಿತಿಯನ್ನು ಮನೋಹರ ಬೊಂದಾಡೆಯವರ ಕವನ ವ್ಯಕ್ತಪಡಿಸಿದೆ. ಕವನದ ಆಶಯ ಕನ್ನಡಾಂಬೆಯ ಅಳಲು. ತಾನೆಲ್ಲಿ ನಿಲ್ಲಬೇಕೆಂಬ ಪರದಾಟದಲ್ಲಿ ಕನ್ನಡತಾಯಿಯಿದ್ದಾಳೆ. ಇಡೀ ಕವನ ಈಕೆ ತನ್ನ ಮಕ್ಕಳಿಗೆ ಬೋಧಿಸುವ ನೆಲೆಯಲ್ಲಿದೆ. ಕವಿಕೋಗಿಲೆಗಳ ಶ್ರೀಗಂಧದ ಹಾಡು ಆಕೆಗೆ ಮುಗ್ಧ ಮಕ್ಕಳ ನೋವಿನಂತೆ ಕೇಳಿಸುತ್ತಿದೆ. ಅದಕ್ಕಾಗಿ ಆಕೆಯ ಪ್ರಶ್ನೆ 'ಎಲ್ಲಿ ನಿಲ್ಲಲಿ ನಾನಿಲ್ಲಿ ರಕ್ತ ಹರಡಿದ ಈ ಕನ್ನಡನಾಡಲ್ಲಿ', ಈ ರಕ್ತಕ್ಕೆ ಕಾರಣವಾದ ಸಂಗತಿಯೆಂದರೆ,

> ಯಾರು ತಂದರು ಮತ್ತೆ ರಸ್ತೆಗೆ ಚಾಕು-ಚೂರಿ ಕತ್ತಿ
> ಬಾಂಬು ಹಿಂಸಾಚಾರ ಅನಾಚಾರದ ಸಂಸ್ಕೃತಿ
> ಆರಂಭವಾಯಿತೆ ರಾಷ್ಟ್ರನಾಯಕರ ಪ್ರತಿಮೆಗಳ ವಿಕೃತಿ
> ಎಲ್ಲೋಯಿತು ಗಣ್ಯರು ಪೂಜ್ಯರೆನುವ ಪ್ರೀತಿ (ಕನ್ನಡಾಂಬೆಯ ಅಳಲು)

ನಿರ್ಭೀತರಾಗಿ ನಡೆಯಬೇಕಾದ ರಸ್ತೆಗಳಲ್ಲಿ ಚಾಕು-ಚೂರಿ- ಕತ್ತಿಗಳದೇ ಕಾರುಬಾರು. ಮೂರ್ತಿ ಭಂಜನೆಯಂತಹ ವಿಕೃತ ಮನಸ್ಸು ಕಾಣಿಸುತ್ತಿದೆ. ಜನರಲ್ಲಿ ಸಾಮರಸ್ಯ ಕಾಣಿಸುತ್ತಿಲ್ಲ. ಧರ್ಮದ ಆಚರಣೆಗಳು ಇಂದು ಭಯದ ಉದ್ವೇಗದ ಹುಟ್ಟಿಗೆ ಕಾರಣವಾಗುತ್ತಿವೆ. ಹಿರಿಯರನ್ನು ಕಂಡಾಗ ಪೂಜನೀಯ ಭಾವ ಕಾಣಿಸುತ್ತಿಲ್ಲ ಎಂಬ ಖೇದವನ್ನು ಮೇಲಿನ ಸಾಲುಗಳು ಗುರುತಿಸಿವೆ.

ಕನ್ನಡ ತಾಯಿಯ ಅಳಲು ಇಷ್ಟಕ್ಕೆ ಮುಗಿಯುವುದಿಲ್ಲ. ಮುಂದುವರಿದು ಕನ್ನಡಿಗರ ಕ್ಷುದ್ರತನವನ್ನು ತಾಯಿ ಪ್ರಶ್ನಿಸುತ್ತಾಳೆ.

ಮಾತುಮಾತಿಗೂ ನಡುವೆ ಜಾತಿ ಜಾತಿ
ಅದಕ್ಕಾಗಿ ಕಾದಾಡಿ ಇಲ್ಲದಂತೆ ಮಾಡುತ್ತಿದ್ದೀರಿ ಇರುವ ಅಲ್ಪ ಶಾಂತಿ
ಹರಿಯುತ್ತಿಲ್ಲವೆ ಎಲ್ಲರ ಎದೆಯೊಳಗೆ ಕೆಂಪುರಕ್ತ ಒಂದೇ ರೀತಿ
ಎಲ್ಲಿ ಕುಗ್ಗಿತು ನಾಡನ್ನು ಹಿಡಿದೆತ್ತುವ ನಿಮ್ಮ ಯುವಶಕ್ತಿ

ಜಾತಿಯ ನೆಪದಲ್ಲಿ ಮನುಷ್ಯರು ಕಚ್ಚಾಡುವುದು ನಿತ್ಯದ ಸಂಗತಿ. ಈ ಕಾದಾಟದಿಂದ ಇದ್ದ ಅಲ್ಪ ಮನಃಶಾಂತಿಯನ್ನು ಕಳೆದುಕೊಳ್ಳುತ್ತಿದ್ದೇವೆ. ಯಾವ ಜಾತಿಯಾದರೂ ಎಲ್ಲರ ಧಮನಿಗಳಲ್ಲಿ ಹರಿಯುವುದು ಕೆಂಪು ರಕ್ತವೇ. ಯುವಶಕ್ತಿ ಇಂತಹ ತಾಕಲಾಟಕ್ಕೆ ಒಳಗಾಗಬಾರದೆಂಬ ಬೋಧನೆ ಇಲ್ಲಿದೆ. ನಾಡನ್ನು ಹಿಡಿದೆತ್ತುವ ಯುವಶಕ್ತಿ ಇಂತಹ ಸಂಘರ್ಷಕ್ಕೆ ಕಾರಣರಾದರೆ ನಾಡಿನ ಉದ್ದಾರ ಯಾರಿಂದ ಸಾಧ್ಯ? ಅವರು ಬೀದಿಗಳಿದು ಹೋರಾಟ ಮಾಡಿದರೆ 'ನಿತ್ಯ ಹರತಾಳ'. ಬದುಕು ಸಾಗುವುದೆಂತು? ಇದಕ್ಕೆ ಪ್ರೇರೇಪಿಸುವ ಗೋಮುಖವ್ಯಾಘ್ರರಿಗೂ ನಾಡಿನಲ್ಲಿ ಕೊರತೆಯಿಲ್ಲ. ಈ ಅನಾಹುತದಿಂದ ಸತ್ಯಧರ್ಮದ ಬುಡ ನಾಶವನ್ನು ಕಾಣುತ್ತಿದೆ ಎಂಬ ಆತಂಕವಿದೆ. ಎಚ್ಚೆತ್ತುಕೊಂಡು ನಾಡು ನುಡಿ ಸಂಸ್ಕೃತಿಯನ್ನು ಸರಿಪಡಿಸುವುದಕ್ಕೆ ಕನ್ನಡ ತಾಯಿ ನಿವೇದಿಸಿಕೊಳ್ಳುತ್ತಾಳೆ.

ಹಚ್ಚಿ ಮಲಗುತ್ತಿದ್ದೀರಿ ಇಂದು ನಾಡಿಗೆ ಬೆಂಕಿ
ಇಲ್ಲವೆ ನಿಮಗೆ ನಾಳೆ ನಿಮ್ಮನ್ನು ಸುಡುವ ಭೀತಿ
ಬೇಗ ಎಚ್ಚೆತ್ತು ಉಳಿಸಿ ನಾಡು-ನುಡಿ ಸಂಸ್ಕೃತಿ
ನೀವಲ್ಲದೆ ಇನ್ಯಾರು ಸರಿಪಡಿಸುವರು ಈ ನಾಡಿನ ಸ್ಥಿತಿ

(ಕನ್ನಡಾಂಬೆಯ ಅಳಲು)

ಇಡೀ ಕವನ ಕನ್ನಡಿಗರನ್ನು ಎಚ್ಚರಿಸುವ ರೀತಿಯಲ್ಲಿದೆ. ಯುವಶಕ್ತಿ ನಾಡನ್ನು ಉದ್ಧರಿಸುವ ಶ್ರದ್ಧೆಯನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ಶಕ್ತಿಯ ಅಪವ್ಯಯವಾದರೆ ಗಲಭೆ ಹರತಾಳಗಳಿಗೆ ಕಾರಣವಾಗಬಹುದು. ಇದನ್ನೆಲ್ಲ ಬಿಟ್ಟು ಐಕ್ಯತೆಯಿಂದ ನಾಡಿನ ಉದ್ಧಾರದ ಬಗ್ಗೆ ಯೋಚಿಸಬೇಕಾಗಿದೆ. ಮತೀಯ ಸಾಮರಸ್ಯ ಈ ನೆಲದ ಗುಣವಾಗಬೇಕಾಗಿದೆ. ಇಷ್ಟಾದರೂ ಕನ್ನಡಿಗರು ಎಚ್ಚೆತ್ತುಕೊಂಡಿಲ್ಲ. ಔದಾರ್ಯದಿಂದ ಎಲ್ಲವನ್ನೂ ಕಳೆದುಕೊಳ್ಳುತ್ತಿದ್ದೇವೆ.

ನಾಡು-ನುಡಿ ಉಳಿಯಬೇಕಾದರೆ ಐಕ್ಯತೆಯ ಬೀಜ ಬಿತ್ತುತ್ತಾ ತಾಯಿಗೆ ಶರಣಾಗಬೇಕಾಗಿದೆ. ಅಪ್ರಬುದ್ಧರಂತೆ ವರ್ತಿಸದೆ,

ಇರಿಯುತ ಬಡಿಯುತ ಸೀಳುತ ಕೊಲ್ಲುತ
ರಕ್ಕಸರಾಟವನಾಡದಿರಿ
ಹಮ್ಮಿಗು ಬಿಮ್ಮಿಗು ಮದ ಮತ್ತತೆಗೂ
ಕೊನೆಯಿದೆ ಎಂಬುದ ಮರೆಯದಿರಿ (ಕಾವೇರಿಯ ಹಾಡು)

ಕನ್ನಡಿಗರ ಆ 'ರಕ್ಕಸರಾಟ' ನಿಲ್ಲಬೇಕೆಂಬ ಸಂದೇಶ ನೀಡಿದವರು ಕೆ. ಆರ್. ಸಂಧ್ಯಾರೆಡ್ಡಿಯವರು. ಇರಿತ, ಬಡಿತ, ಸೀಳುವುದು, ಕೊಲ್ಲುವುದೇ ನಮ್ಮ ಬದುಕಾಗಬಾರದು. ಇದು ಕ್ರೌರ್ಯದ ಪರಮಾವಧಿ. ರಕ್ಕಸರ ಆಟ. ಇದೇ ನಿತ್ಯ ನಡೆದರೆ ಮನುಷ್ಯರಿಗೆ ಬದುಕಿಲ್ಲ. ಮನುಷ್ಯರ ಅಹಂಕಾರಕ್ಕೆ ದರ್ಪಕ್ಕೆ ಕೊನೆಯೆಂಬುದಿದೆ ಎಂಬ ಎಚ್ಚರಿಕೆ ಇಲ್ಲಿದೆ. ಇಲ್ಲಿಯ ಸಂಸ್ಕೃತಿ ಉಳಿಯಬೇಕಾದರೆ 'ಎಲ್ಲ ಮನುಜರಲಿ ಹರಿಯುವ ರಕ್ತ ಒಂದೇ' ಎಂಬುದು ಸದಾ ನೆನಪಿರಬೇಕಾದ ಸಂಗತಿ. ಪ್ರಕೃತಿಯಂತೆ ಶಾಂತರಾಗಿ ನಮ್ಮ ನಮ್ಮ ಕರ್ತವ್ಯಗಳನ್ನು ಮಾಡಬೇಕಾಗಿದೆ. ನಾವು ಎಷ್ಟೇ ಕಚ್ಚಾಡಿದರೂ ಎಷ್ಟೇ ರಕ್ತ ಚೆಲ್ಲಿದರೂ ಕಾವೇರಿ ಕೆಂಪಾಗುವುದಿಲ್ಲ. ಪ್ರಕೃತಿ ನಮಗೆ ಮಾದರಿಯಾಗಬೇಕಾಗಿದೆ.

ಎಷ್ಟೇ ಮನೆ ಮರ ಸುಟ್ಟರು ನೀವು
ಕಪ್ಪಾಗಲು ಈ ಕಾವೇರಿ
ಹರಿದರು ಎಷ್ಟೇ ಕಣ್ಣೀರಿನ ಕಾಲುವೆ
ಉಪ್ಪಾಗಲು ಈ ಕಾವೇರಿ
ಅರಳಿದ ಬದುಕನು ಹೊಸಕಿಹಾಕುವ
ಕಾಳಿಯಾಗಲು ಈ ಕಾವೇರಿ (ಕಾವೇರಿಯ ಹಾಡು)

ಮನುಷ್ಯರು ತಮ್ಮ ಅಸ್ತಿತ್ವವನ್ನು ಮರೆತು ಎಷ್ಟೇ ಕಚ್ಚಾಡಿದರೂ ಪ್ರಕೃತಿ ಬದಲಾಗುವುದಿಲ್ಲ. ಅದರ ಪ್ರಶಾಂತತೆ ಮನುಷ್ಯ ಬದುಕಿಗೆ ಅಗತ್ಯವಾಗಿ ಬೇಕಾಗಿದೆ. ಅಲ್ಲದೆ ಬೆಂಕಿ, ರಕ್ತ, ಕಣ್ಣೀರಿನಿಂದ ನಾಡಿನ ಉದ್ಧಾರ ಸಾಧ್ಯವಿಲ್ಲವೆಂಬ ಆಲೋಚನೆ ಇಲ್ಲಿದೆ.

ಮಾತಿನ ಮತ್ತು ಮನಸ್ಸಿನ ಕೊಳಕು ಮೊದಲು ದೂರಾಗಬೇಕು. ಇಲ್ಲವಾದಲ್ಲಿ ನಮ್ಮ ಹುಚ್ಚನ್ನು ಕಾವೇರಿ ನಮಗೇ ತೋರಿಸುವಳು. ಮನುಷ್ಯನ ಹದ್ದುಮೀರಿದ ವರ್ತನೆಗೆ ಪ್ರಕೃತಿ ಕಡಿವಾಣ ಹಾಕುತ್ತದೆಂಬ ಸೂಕ್ಷ್ಮ ಒಳನೋಟ ಇಲ್ಲಿದೆ. ಇದಕ್ಕಾಗಿ ಕನ್ನಡಿಗರು ಪರಸ್ಪರ ದ್ವೇಷವನ್ನು ಬಿಟ್ಟು ಪ್ರೀತಿಯನ್ನು ಬಿತ್ತಬೇಕಾಗಿದೆ. ಬಾಂಬುಗಳನ್ನು ಪ್ರೀತಿಸಿದರೆ ನಾಡು ಮಸಣವಾದೀತು. ಇಂತಹ ಕೆಲಸವನ್ನು ಯಾವ ಕನ್ನಡಿಗನೂ ಮಾಡಬಾರದೆಂಬ ಬೋಧನೆಯನ್ನು ಇಲ್ಲಿ ಗಮನಿಸಬಹುದು. ಕನ್ನಡ ನಾಡಿಗೆ ಕನ್ನಡಿಗರಿಂದಲೇ ಅಪಾಯವಿದೆ.

ನಾಡದ್ರೋಹವೆನ್ನುವುದು ಅಕ್ಷಮ್ಯ ಅಪರಾಧ. ನಾಡು-ನುಡಿಯ ಏಳಿಗೆಗೆ ಎಲ್ಲರೂ ಕೈ ಜೋಡಿಸಬೇಕಾದ ಅನಿವಾರ್ಯತೆಯನ್ನು ಕವಿಗಳು ಗುರುತಿಸಿದ್ದಾರೆ.

ಇಂದಿನ ಕನ್ನಡಿಗರ ಸ್ಥಿತಿ ಹೇಗಿದೆಯೆಂದರೆ 'ಕನ್ನಡವೇ ನೀನೆಲ್ಲಿರುವೆ?' ಎಂಬುದಾಗಿ ಭಾಷೆಯನ್ನು ಹುಡುಕುವ ನೆಲೆಗೆ ಬಂದಿದ್ದೇವೆ. ಬಿ. ಪಿ. ಶೈಲಜ ಅವರ ಕವನ ಇದನ್ನು ಅಭಿವ್ಯಕ್ತಗೊಳಿಸುತ್ತದೆ.

> ಅ ಆ ಇ ಈ ಗಳು ಓಡುತ್ತಿವೆ ದೂರ ದೂರ
> ಎಬಿಸಿಡಿ ಗಳು ಬಹುಜನಪ್ರಿಯ ನೋಡಾ
> ಮಾಂಟೆಸ್ಸರಿಯ ರೈಮ್ಸ್ ಗಳ ಆರ್ಭಟವದು ಶಾಲೆ ಶಾಲೆಗಳಲ್ಲಿ
> ಶಿಶುವಿಹಾರದ ಶಿಶುಪ್ರಾಸಗಳ ಪುಟಾಣಿಗಳು ಇನ್ನೆಲ್ಲಿ?
> ಕನ್ನಡವೇ ನೀನೆಲ್ಲಿರುವೆ?
> ಕನ್ನಡದ ಕಂದಮ್ಮಗಳಿಂದ ಏಕೆ ದೂರಾಗಿರುವೆ? (ಕನ್ನಡವೇ ನೀನೆಲ್ಲಿರುವೆ)

ಕನ್ನಡದ ಅಪ್ಪ, ಅಮ್ಮ ಇಂಗ್ಲೀಷಿನ ಅಲೆಯಲ್ಲಿ ಕೊಚ್ಚಿ ಹೋಗುತ್ತಿದ್ದಾರೆ. ಕನ್ನಡದ ವರ್ಣಮಾಲೆಗಳನ್ನು ಮಕ್ಕಳು ಮರೆತು ಎಬಿಸಿಡಿ ಬರೆಯುವುದರಲ್ಲಿ ಆನಂದವನ್ನು ಅನುಭವಿಸುತ್ತಿದ್ದಾರೆ. ಶಿಶುವಿಹಾರಗಳು ಕಾಣೆಯಾಗಿ, ಮೊಂಟೆಸ್ಸರಿ ಜನ್ಮತಾಳಿ, ಶಿಶು ಗೀತೆಗಳು ಮರೆತುಹೋಗಿ ರೈಮ್ಸ್‌ಗಳ ಆರ್ಭಟ ಕೇಳಿಸುತ್ತಿದೆ. ಕನ್ನಡಿಗರ ರಾಜಧಾನಿ ಬೆಂಗಳೂರಿನಲ್ಲಿ ಇಂಗ್ಲೀಷ್ ಬಲ್ಲವ ಕನ್ನಡಿಗನಿಗಿಂತ ಚೆನ್ನಾಗಿ ಬದುಕುತ್ತಿದ್ದಾನೆ. ಇವರೆಲ್ಲರ ಮಧ್ಯೆ ಕನ್ನಡ ಮಂಕಾಗುತ್ತಿದೆ. ದೂರದರ್ಶನದಲ್ಲಿ ಕನ್ನಡದ ಇಂಪು ನಲುಗಿ ಸೊರಗುತ್ತಿದೆ. ಪಾಶ್ಚಿಮಾತ್ಯ ಆಹಾರ ಪದ್ಧತಿಯು ನಮಗೆ ಪ್ರಿಯವಾಗುತ್ತಿದೆ. ಹೀಗಿರಬೇಕಾದರೆ ಕನ್ನಡಕ್ಕೆ ಇಲ್ಲಿ ಅಸ್ತಿತ್ವವೆಲ್ಲಿ? ಹುಡುಕಬೇಕು ಕನ್ನಡವ ಇಂಟರ್ನೆಟ್ ವೆಬ್ಸೈಟ್ಗಳಲ್ಲಿ. ಕನ್ನಡ ತನ್ನ ಅಸ್ಮಿತೆಯನ್ನು ಕಳೆದುಕೊಂಡು ಮಂಕಾಗಿದೆಯೆಂಬ ವಿಷಾದದೊಂದಿಗೆ ಇದಕ್ಕೆ ಕನ್ನಡಿಗರೇ ಕಾರಣವೆಂಬ ಆಕ್ರೋಶವು ಇಲ್ಲಿ ವ್ಯಕ್ತವಾಗುತ್ತದೆ. ಕನ್ನಡದ ಮಂದಿ ಜಾಗೃತರಾಗಬೇಕೆಂದು ಎಚ್ಚರಿಸುತ್ತಿದ್ದಾರೆ.

ಬೆಲೆ ಏರಿಕೆಯೂ ನಾಡಿನ ಆತಂಕವೇ ಆಗಿದೆ. ಇದರಿಂದ ಶ್ರೀಮಂತ ವರ್ಗಕ್ಕೆ ಯಾವುದೇ ತೊಂದರೆಯಾಗುವುದಿಲ್ಲ. ಉಳಿದವರು ದಿನನಿತ್ಯದ ಅಗತ್ಯ ವಸ್ತುಗಳ ಬೆಲೆಯೇರಿಕೆಯಿಂದ ತತ್ತರಿಸಿ ಹೋಗಬಹುದು. ಹಬ್ಬಹರಿದಿನಗಳು ಸಮೀಪಿಸಿದಾಗ ಈ ಏರಿಕೆಯಿಂದ ಮನುಷ್ಯರು ಕಂಗಾಲಾಗುತ್ತಾರೆ. ಈ ಆತಂಕವನ್ನು ನೆಂಪು ಕೃಷ್ಣಭಟ್ಟರು ಕವನವೊಂದರಲ್ಲಿ ಅನಾವರಣ ಮಾಡಿದ್ದಾರೆ.

ಗಗನದಲ್ಲಿವೆ ಸಾಮಾನುಗಳ ರೇಟು
ಡೊನೇಷನ್ ಕೊಟ್ಟರೂ ಸಿಗದ ಸೀಟು
ಬೆಲ್ಲದ ರೇಟಿನಲ್ಲಿ ಸಿಹಿಯಿಲ್ಲ
ಬೇವು ತುಂಬಿದೆ ದೇಶದ ತುಂಬೆಲ್ಲ
ಹೊಸ ಬಟ್ಟೆ ತೊಟ್ಟರೂ
ಬರಿ ಹೊಟ್ಟೆ ತುಂಬಲಿಲ್ಲ (ಯುಗಾದಿ)

ದಿನಸಿ ವಸ್ತುಗಳ ಬೆಲೆ ಹೆಚ್ಚಳದಿಂದ ನಾಡು ಆತಂಕಪಡುವಂತಾಗಿದೆ. ಕನ್ನಡ ಮಾಧ್ಯಮದ ಸರ್ಕಾರಿ ಶಾಲೆಗಳ ವ್ಯಾಸಂಗದಲ್ಲಿ ಒಲವಿಲ್ಲದ ಮಂದಿ ಅದೆಷ್ಟೋ ಡೊನೇಷನ್ ಕೊಟ್ಟು ಮಕ್ಕಳನ್ನು ಖಾಸಗಿ ಶಾಲೆಗಳಿಗೆ ಸೇರಿಸುವುದನ್ನು ಕಾಣಬಹುದು. ಮಾತ್ರವಲ್ಲದೆ ಆಂಗ್ಲಮಾಧ್ಯಮದಲ್ಲಿ ಕಲಿತವರಿಗೆ ಹೆಚ್ಚು ಆದಾಯ ತರುವ ಸಾಮಾಜಿಕ ಸ್ಥಾನಮಾನವನ್ನು ಹೆಚ್ಚಿಸುವ ಉದ್ಯೋಗಗಳು ಲಭಿಸುತ್ತವೆಯೆಂಬ ನಂಬಿಕೆ ಕನ್ನಡಿಗರ ಮನಸ್ಸಿನಲ್ಲಿದೆ. ಹಾಗಾಗಿ ಆಂಗ್ಲಮಾಧ್ಯಮ ಶಾಲೆಗಳತ್ತ ಹೆಜ್ಜೆ ಹಾಕುತ್ತಿದ್ದಾರೆ. ಪ್ರಸಿದ್ಧವಾದ ಶಾಲೆಗಳಲ್ಲಿ ಡೊನೇಶನ್ ಕೊಟ್ಟರೂ ಸೀಟು ಸಿಗದ ಸ್ಥಿತಿ ನಿರ್ಮಾಣಗೊಂಡಿದೆ. 'ಬೆಲ್ಲದ ರೇಟಿನಲ್ಲಿ ಸಿಹಿಯಿಲ್ಲ' ಎಂಬುದು ಮಾರ್ಮಿಕವಾದ ಸಾಲು. ಬೆಲ್ಲ ಸಿಹಿ ಆದರೆ ಅದರ ಬೆಲೆ ಕೈಗೆಟಕುವಂತದ್ದಲ್ಲ. ದೇಶದ ತುಂಬ ಬರೀ ಕಹಿಯೇ ತುಂಬಿಕೊಂಡಿದೆ. 'ಹೊಸ ಬಟ್ಟೆ ತೊಟ್ಟರೂ ಬರಿ ಹೊಟ್ಟೆ ತುಂಬಲಿಲ್ಲ' ಎನ್ನುವಲ್ಲಿ ಹಸಿವಿನ ಕ್ರೌರ್ಯವನ್ನು ಗುರುತಿಸಬಹುದು.

ಕೆಲವು ಕವನಗಳ ವಿಶ್ಲೇಷಣೆಯಿಂದ ನಾಡು-ನುಡಿಯ ಆತಂಕಗಳ ಪರಿಯನ್ನು ಗಮನಿಸಲಾಗಿದೆ. ಮನುಷ್ಯ ಮನುಷ್ಯನನ್ನು ನೋಡುವ ದೃಷ್ಟಿಕೋನವೇ ಬದಲಾಗಿದೆ. ಮಕ್ಕಳ ಮಾರಾಟ, ಹೆಣ್ಣುಮಕ್ಕಳು ಕಾಣೆಯಾಗುವಂತಹ ಭಯಾನಕ ಸಂಗತಿಗಳು ನಿತ್ಯ ಕಾಣಿಸಿಕೊಳ್ಳುತ್ತಿವೆ. ಇವರ ಮೇಲಿನ ದೌರ್ಜನ್ಯದಿಂದ ಕನ್ನಡಿಗರು ತಲೆತಗ್ಗಿಸುವಂತಾಗಿದೆ. ಮತೀಯ ಸಾಮರಸ್ಯಕ್ಕೂ ಕುತ್ತು ಬಂದೊದಗಿದೆ. ಇವನ್ನೆಲ್ಲಾ ಗಮನಿಸುವಾಗ ಜಿ. ಎಸ್. ಶಿವರುದ್ರಪ್ಪನವರ ಕವನದ ಸಾಲೊಂದು ನೆನಪಾಗುತ್ತದೆ. 'ಎದೆ ಎದೆಗಳ ನಡುವೆ ಇದ್ದ ಸೇತುವೆಗಳು ಮುರಿದಿವೆ. ಭಯ-ಸಂಶಯ ತಲ್ಲಣಗಳ ಕಂದರಗಳು ತೆರೆದಿವೆ'. (ಯಾವುದೀ ಪ್ರವಾಹವು) ಇದು ಇಂದು ನಾವು ಕಾಣುತ್ತಿರುವ ನಾಡಿನ ಸ್ಥಿತಿ. ಮಾನವೀಯತೆ ಇದ್ದಾಗ ಮಾತ್ರ ನೆಮ್ಮದಿಯ ನಾಡನ್ನು ಕಾಣಲು ಸಾಧ್ಯ. ಕನ್ನಡದಲ್ಲಿ ಶಿಕ್ಷಣ, ಸ್ಥಳೀಯರಿಗೆ ಉದ್ಯೋಗದಲ್ಲಿ ಆದ್ಯತೆ, ಆಡಳಿತದಲ್ಲಿ ಕನ್ನಡ ಮುಂತಾದುವೆಲ್ಲಾ ಬಹುಕಾಲದಿಂದ ಚರ್ಚೆಗೊಳಗಾಗಿರುವ ಮತ್ತು ಆಗುತ್ತಿರುವ ಸಂಗತಿಗಳು. ಇವೆಲ್ಲವುಗಳನ್ನು ಯೋಚಿಸುವಾಗ ಕನ್ನಡ ಪ್ರೀತಿಯ ಪರಿಕಲ್ಪನೆಗೆ ಹೊಸ ಆಯಾಮ

ಲಭಿಸಬೇಕು. ಕನ್ನಡವನ್ನು ಕೇವಲ ಅಭಿಮಾನದ ಪ್ರಶ್ನೆಯಾಗಿ ನೋಡದೆ ಬದುಕಿನ ಪ್ರಶ್ನೆ, ಅನ್ನದ ಪ್ರಶ್ನೆಯಾಗಿ ನೋಡಬೇಕು. ಕನ್ನಡದ ಮೂಲಕ ಅನ್ನ ಸಿಗುತ್ತದೆ ಎಂದಾದರೆ ಅಭಿಮಾನ ತಾನಾಗಿಯೇ ಮೂಡುತ್ತದೆ. ಅನ್ನದ ಅನಿವಾರ್ಯತೆಯಲ್ಲಿ ಕನ್ನಡದ ಪರಿಕಲ್ಪನೆಯನ್ನು ಬೆಳೆಸುವ ಅಗತ್ಯ ಇಂದಿನ ಅನಿವಾರ್ಯತೆಯಾಗಿದೆ.

ನಾಡು ನುಡಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ನಗರಗಳಲ್ಲಿ ಕನ್ನಡ ಸೊರಗಿತ್ತು, ಹಳ್ಳಿಗಳಲ್ಲಿ ಅದರ ಕರುಳಬಳ್ಳಿ ಗಟ್ಟಿಯಾಗಿತ್ತು. ಆದರೆ ಈಗ ಹಳ್ಳಿಗಳಿಗೂ ಜಾಗತೀಕರಣದ, ನಗರೀಕರಣದ ಗಾಳಿ ಬೀಸುತ್ತಿದೆ. ಗ್ರಾಮೀಣ ಭಾಗದಲ್ಲಿ ಕನ್ನಡ ಉಳಿಯುತ್ತದೆ ಎಂಬುದು ಕೂಡ ಬದಲಾಗಬಹುದಾದ ಸಂಗತಿ ಎನಿಸುತ್ತದೆ. ಒಟ್ಟಿನಲ್ಲಿ ಇಂಗ್ಲೀಷಿನ ಅನಿವಾರ್ಯತೆಯನ್ನು ಆಕ್ರಮಣಶೀಲವೆಂದೇ ಆರೋಪಿಸುವುದರಲ್ಲಿ ಹುರುಳಿಲ್ಲ. ಕನ್ನಡವು ಸಂಸ್ಕೃತದ ಸತ್ವವನ್ನು ಹೀರಿಕೊಂಡೇ ಪುಷ್ಟವಾಗಿ ಬೆಳೆದಿದೆ. ಹಾಗೆಯೇ ಇಂಗ್ಲೀಷನ್ನು ಅರಗಿಸಿಕೊಳ್ಳುವುದರ ಮೂಲಕ ಕನ್ನಡವನ್ನು ಉಳಿಸುವ ಬೆಳೆಸುವ ಛಲ ಪ್ರತಿಯೊಬ್ಬ ಕನ್ನಡಿಗನ ಧ್ಯೇಯವಾಗಬೇಕಾಗಿದೆ.

ನಿರಾಸಕ್ತ ಕನ್ನಡಿಗರಲ್ಲಿ ಭಾಷೆ ಮತ್ತು ನಾಡಿನ ಬಗೆಗೆ ಅಭಿಮಾನ ಮೂಡಿಸುವ ಪ್ರಯತ್ನ ಮತ್ತು ತನ್ಮೂಲಕ ಕನ್ನಡದ ಬಗೆಗಿನ ಆತಂಕಗಳನ್ನು ಕಡಿಮೆಗೊಳಿಸುವ ಪ್ರಯತ್ನವನ್ನು ಕವಿಗಳು ಶ್ರದ್ಧೆಯಿಂದ ಮಾಡಿದ್ದಾರೆ. ಕನ್ನಡವನ್ನು ಸಮಗ್ರ ನೆಲೆಯಲ್ಲಿ ಕಟ್ಟುವ ಯೋಚನೆಯೊಂದಿಗೆ ಕನ್ನಡಿಗರಿಗೆ ಸಂದೇಶವನ್ನು ನೀಡಿದರು. ಇದಕ್ಕೆ ಕನ್ನಡಿಗರ ಒಗ್ಗಟ್ಟು ಬಹಳ ಮುಖ್ಯ ಎನ್ನುವುದು ಕವಿಗಳು ಕಂಡುಕೊಂಡಿದ್ದ ಸತ್ಯ. ಮಾತ್ರವಲ್ಲ ಕನ್ನಡ ಜನರು ಕೀಳರಿಮೆಯಿಂದ ಹೊರಬರಬೇಕಾದ ಅನಿವಾರ್ಯತೆಯಿದೆ. ಯಾಕೆಂದರೆ, ಕೀಳರಿಮೆ ಎನ್ನುವುದು ಭಾಷೆಯ ಅಸ್ಥಿತ್ವದ ಭೀತಿಗೆ ಕಾರಣವಾಗುತ್ತದೆ. ಅನ್ಯ ಭಾಷೆಯ ಮೇಲೆ ಮೋಹ ಇದ್ದಾಗ ತಾಯಿನುಡಿಯನ್ನು ಮರೆಯುವ ಸನ್ನಿವೇಶ ನಿರ್ಮಾಣಗೊಳ್ಳುತ್ತದೆ. ಅನ್ಯಭಾಷಿಕರ ಹಾವಳಿಯಿಂದ, ಕನ್ನಡಿಗರ ಕೀಳರಿಮೆಯಿಂದ, ಕನ್ನಡ ಭಾಷೆ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿದೆ. ಜಾಗತೀಕರಣದ ಪ್ರಭಾವ, ಇಂಗ್ಲೀಷ್ ಭಾಷೆಯ ಅವಲಂಬನೆ, ಹಿಂದಿ ಹೇರಿಕೆ, ಅಧಿಕಾರಿಗಳ ನಿರ್ಲಕ್ಷ್ಯವೂ ಸೇರಿದಂತೆ ಅನೇಕ ಕಾರಣಗಳಿಂದ ಭಾಷಿಕ ಆತಂಕ ನಿರ್ಮಾಣಗೊಂಡಿದೆ. ಉದ್ಯೋಗ ಕ್ಷೇತ್ರದಲ್ಲಿ ಅವಕಾಶದ ಕೊರತೆಯೂ ಕನ್ನಡಕ್ಕೊಂದು ಆತಂಕವೇ ಸರಿ. ಉತ್ತಮ ಭವಿಷ್ಯಕ್ಕೆ ಕನ್ನಡ ಮಾತ್ರ ಸಾಲದು ಎಂಬ ಮನೋಭಾವನೆ ಮೂಡಿದಾಗ, ಬದುಕನ್ನು ಕಟ್ಟಿಕೊಳ್ಳುವುದಕ್ಕಾಗಿ ಜನರು ಬೇರೆ ಬೇರೆ ಪ್ರದೇಶಗಳಿಗೆ ಹೋಗಬೇಕಾದ, ಇಂಗ್ಲೀಷಿಗೆ ಶರಣಾಗಬೇಕಾದ ಅನಿವಾರ್ಯತೆ ನಾಡಿಗೇನೂ ಹೊಸದಲ್ಲ. ಆದರೆ ಇಂತಹ ಅನಿವಾರ್ಯತೆಯ

ಮಧ್ಯೆಯೂ ಕನ್ನಡ ಉಸಿರಾಗಬೇಕೆಂಬುದನ್ನು ಹೊಸಗನ್ನಡ ಕವಿಗಳು ಗುರುತಿಸಿಕೊಡುವ ಪ್ರಯತ್ನ ಮಾಡಿದರು.

# ಅಧ್ಯಾಯ ೫

## ತುಳು–ಕೊಡವ ಅಸ್ಮಿತೆಗಳ ಅನಾವರಣ

೫:೧ ಕವನಗಳಲ್ಲಿ ತುಳುನಾಡು

೫:೨ ಕೊಡಗು ಮತ್ತು ನಾಡುನುಡಿ

೫:೩ ಕೊಡವ ಭಾಷೆ

## ಅಧ್ಯಾಯ –೫

### ತುಳು–ಕೊಡವ ಅಸ್ಮಿತೆಗಳ ಅನಾವರಣ

ಕನ್ನಡ ಬಾಷೆಯಂತೆಯೇ ಇತರ ಎಲ್ಲಾ ಭಾಷೆಗಳ ಸಾಹಿತ್ಯದಲ್ಲಿಯೂ ನಾಡು–ನುಡಿಯ ಹಿರಿಮೆಯನ್ನು ಹೇಳುವುದು ಸ್ವಾಭಾವಿಕ. ಅದರಲ್ಲಿಯೂ ಕರ್ನಾಟಕದ ಒಳಗಡೆ ಇರುವ ಹಾಗೂ ನೆರೆಯ ಭಾಷೆಗಳ ಕಾವ್ಯಗಳಲ್ಲಿ ನಾಡು ನುಡಿಯ ಪರಿಶೀಲನೆಯು ಪ್ರಸ್ತುತ ಅಧ್ಯಯನಕ್ಕೆ ಪೂರಕವೆಂದು ಭಾವಿಸಲಾಗಿದೆ. ಕನ್ನಡದ ಬಗೆಗೆ ಒಂದೆಡೆ ಹೆಮ್ಮೆ, ಇನ್ನೊಂಡೆದೆ ಆತಂಕ ಇರುವ ಕಾಲದಲ್ಲಿ ನಾಡಿನಲ್ಲಿರುವ ಅನ್ಯ ಭಾಷಿಕರಿಗೆ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುವ ಅಗತ್ಯವಿತ್ತು. ಇದಕ್ಕಾಗಿ ಕನ್ನಡಾಂತರ್ಗತ ಭಾಷೆಗಳಾದ ತುಳು, ಕೊಡವ ಭಾಷೆಗಳು ಪ್ರಯತ್ನಿಸಿದವು. ಈ ಎರಡೂ ಭಾಷೆಗಳಲ್ಲಿ ನಾಡು ನುಡಿಯ ಪ್ರೇಮವನ್ನು ಪ್ರಕಟಪಡಿಸುವ ಕವನಗಳು ರಚನೆಗೊಂಡವು. ಕೆಲವು ಮುಖ್ಯ ಕವಿತೆಗಳನ್ನು ಆರಿಸಿ ಈ ಭಾಷೆಗಳ ನಾಡು ನುಡಿಯ ಪ್ರತಿನಿಧೀಕರಣದ ಬಗೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ತುಳು ನಾಡು, ತುಳು ರಾಜ್ಯ, ತೌಳವದೇಶ ಮೊದಲಾದ ಹೆಸರುಗಳ ಮೂಲಕ ತುಳುನಾಡನ್ನು ಗುರುತಿಸಲಾಗಿದೆ. ಇದನ್ನು ತುಳುಭಾಷಿಕದೇಶವೆಂದು ಮಾತ್ರ ಗುರುತಿಸಿದರೆ ತಪ್ಪಾಗುವ ಸಾಧ್ಯತೆಯಿದೆ. ಯಾಕೆಂದರೆ, ಈ ನಾಡು ಅನೇಕ ಭಾಷೆಗಳ ಸಂಗಮ. ರಾಜಕೀಯವಾಗಿ, ಆಡಳಿತಾತ್ಮಕವಾಗಿ ವಿಸ್ತಾರವಾದ ಭೂಪ್ರದೇಶ. ಹಾಗಾಗಿ ಭಾಷೆಯ ಹಿನ್ನೆಲೆಯಲ್ಲಿ ಗುರುತಿಸುವುದಕ್ಕೂ, ರಾಜಕೀಯವಾಗಿ ನಾಡನ್ನು ನಿರ್ಧರಿಸುವುದಕ್ಕೂ ವ್ಯತ್ಯಾಸವಿದೆ. ತುಳುನಾಡೆಂಬುದು ಒಂದು ಆಡಳಿತ ಘಟಕ. ಇದು ಕನ್ನಡ ಮಾತನಾಡುವ ಪ್ರದೇಶವನ್ನು ಒಳಗೊಂಡಿತ್ತು. ಯಾವುದೇ ನಾಡನ್ನು ಗುರುತಿಸುವಾಗಲೂ ಭೌಗೋಳಿಕವಾಗಿ ಒಂದು ನಕ್ಷೆ ಕಣ್ಣಮುಂದಿರುತ್ತದೆ. ಹಾಗೆಯೇ, ತುಳುನಾಡಿಗೆ ಪಶ್ಚಿಮದಲ್ಲಿ ಅರಬೀಸಮುದ್ರ, ಪೂರ್ವದಲ್ಲಿ ಸಹ್ಯಾದ್ರಿಪರ್ವತಶ್ರೇಣಿ, ದಕ್ಷಿಣದಲ್ಲಿ ಚಂದ್ರಗಿರಿ ಹೊಳೆ, ಉತ್ತರದಲ್ಲಿ ಸೀತಾನದಿ ಎಂದು ಮೇರೆಯನ್ನು ಗುರುತಿಸಲಾಗಿದೆ. ಆದರೆ ರಾಜಕೀಯ ತುಳುನಾಡಿನ ಮೇರೆಯನ್ನು ಇಷ್ಟು

ಸುಲಭವಾಗಿ ಗುರುತಿಸಲಾಗುವುದಿಲ್ಲ. ಇದು ಪರಶುರಾಮನ ಸೃಷ್ಟಿ ಎನ್ನುವ ಗೋಕರ್ಣದಿಂದ ಕನ್ಯಾಕುಮಾರಿಯವರೆಗಿನ ವಿಸ್ತಾರವನ್ನು ಈ ನಾಡು ಪಡೆದುಕೊಂಡಿದೆ. ಒಟ್ಟಿನಲ್ಲಿ, ತುಳುನಾಡಿನ ಮೇರೆಯನ್ನು ಗುರುತಿಸಿದ್ದು, ಆಡಳಿತಾತ್ಮಕವಾಗಿಯೇ ಹೊರತು ಭಾಷಿಕವಾಗಿ ಅಲ್ಲವೆಂಬುದನ್ನು ನಿರಾಕರಿಸುವಂತಿಲ್ಲ.

ತುಳುನಾಡು ಭಾಷಾಬಾಂಧವ್ಯಕ್ಕೆ ಹೆಸರಾದ ನಾಡು. ಕಲ್ಯಾಣಪುರ ಹೊಳೆಯಿಂದ ಚಂದ್ರಗಿರಿ ಹೊಳೆಯವರೆಗೆ ತುಳುನಾಡೆಂದು ಗುರುತಿಸಲಾಯಿತು. ಈಗ ಅದರ ವ್ಯಾಪ್ತಿ ಇನ್ನಷ್ಟು ವಿಸ್ತರಿಸಿದೆ. ಇಲ್ಲಿ ತುಳು ಮಾತ್ರವಲ್ಲದೆ ಮರಾಠಿ, ಕೊಂಕಣಿ, ಮಲಯಾಳ, ಕನ್ನಡ ಎಲ್ಲ ಭಾಷಾಬಂಧುಗಳೂ ಸಾಮರಸ್ಯದ ಬದುಕನ್ನು ಕಟ್ಟಿಕೊಂಡವರು. ಈ ಬಾಂಧವ್ಯವನ್ನು ಸೇಡಿಯಾಪು ಕೃಷ್ಣಭಟ್ಟರು ಹೀಗೆ ಗುರುತಿಸಿದ್ದಾರೆ.

ತೊದಲೋ ಜಲ್ಪವೊ ಮುದ್ದು ನುಡಿಯೊ
ಹಸುಗೂಸಿನುಲಿಗೆ ಮನ ಸೋತದನೆ ತಾಯುಲಿವಳೋ?
ತುಳುವೊ ಕನ್ನಡವೊ ಕೊಂಕಣಿಯೊ ಪುತ್ರವತ್ಸಲೆ!
ನಿನ್ನ ಹೊನ್ನುಡಿಗಳಾಗಿವೆಯಲೋ – ನೀನು

ತುಳು ತಾಳಿಕಟ್ಟಿ, ಕನ್ನಡದೋಲೆಯಿಟ್ಟು
ಕೊಂಕಣಿ ಕಂಕಣವ ತೊಟ್ಟ ಮಾಂಗಲ್ಯಮೂರ್ತಿ
ನಮಿಪೆ ಓ ಕನ್ನಡತಿ, ನಮಿಪೆ ಓ ಕೊಂಕಣಿತಿ
ನಮಿಪೆ ಓ ತುಳುವಿತಿ, ಶ್ರೀ ಭಾರತಿ (ತುಳುನಾಡ ಹಾಡು)

ಪ್ರಕೃತ ಕವನದಲ್ಲಿ ಇಲ್ಲಿಯ ಪ್ರಕೃತಿಯನ್ನು, ಜನಪದವನ್ನು ವರ್ಣಿಸುತ್ತ 'ನೀನು ತುಳುತಾಳಿ ಕಟ್ಟಿ ಕನ್ನಡದೋಲೆಯಿಟ್ಟು ಕೊಂಕಣಿ ಕಂಕಣವ ತೊಟ್ಟ ಮಾಂಗಲ್ಯ ಮೂರ್ತಿ' ಎನ್ನುತ್ತಾರೆ. ಸಮನ್ವಯತೆ, ಸಾಮೂಹಿಕ ಪ್ರಜ್ಞೆ, ಅನ್ಯಭಾಷೆಗಳನ್ನು ಗೌರವಿಸುವ ಉನ್ನತವಾದ ಮನಸ್ಸು ಇಲ್ಲಿ ವ್ಯಕ್ತಗೊಳ್ಳುತ್ತದೆ. ಪ್ರತಿಯೊಬ್ಬ ಕವಿಯೂ ತಾನು ಬದುಕಿದ ಪರಿಸರ, ಜೀವನವಿಧಾನ, ಅಲ್ಲಿಯ ಸಂಸ್ಕೃತಿ ಎಲ್ಲವುಗಳಿಗೂ ವಿಶ್ವಮಾನ್ಯತೆಯನ್ನು ತಂದುಕೊಡುವ ಪ್ರಯತ್ನವನ್ನು ಮಾಡುತ್ತಾನೆ. ಹಾಗಾಗಿ ಕವಿಯ ಈ ಮಾತುಗಳಲ್ಲೂ ತುಳುನಾಡತಾಯಿ ವಿಶ್ವಭಾರತಿಯಾಗುತ್ತಾಳೆ.

'ತುಳು' ಎಂಬ ಪದಕ್ಕೆ 'ಆರ್ದ್ರ', 'ತುಳುಕುವ', 'ಮೆತ್ತಗೆ' ಮೊದಲಾದ ಅರ್ಥಗಳಿವೆ. ಅರ್ಥಕ್ಕನ್ವಯವಾಗಿ ನಾಡನ್ನು 'ತುಳುನಾಡು' ಎಂದು ಕರೆದರು. ಈ ಹೆಸರಿಗಿಂತ ಮೊದಲು ಈ ನಾಡಿಗೆ 'ಸತಿಯಪುತೊ' ಎಂಬ ಹೆಸರಿದ್ದಿರಬೇಕೆಂಬ ಅಭಿಪ್ರಾಯವಿದೆ. ಇದೇ ಕಾಲಾನಂತರದಲ್ಲಿ 'ಸತಿಯ ಪುತ್ರ'ವಾಗಿ ತುಳುವರಲ್ಲಿ 'ಸತ್ಯನಾಪುರ'ವೆಂದಾಯಿತು ಎಂಬುದು ಅಭಿಪ್ರಾಯ. ಹಾಗಾಗಿ ಸತ್ಯನಾಪುರವೆನ್ನುವುದು ಬಿರುಮಾಳ್ವರ ಅರಮನೆಯ ಹೆಸರಷ್ಟೇ ಆಗದೆ ಇಡೀ ತುಳುನಾಡನ್ನು ಸಂಕೇತಿಸುವ ಹೆಸರಾಗಿದೆಯೆನ್ನಬಹುದು.

ಭಾವನಾತ್ಮಕವಾಗಿ ತುಳುನಾಡೆಂದರೆ ಕಾಸರಗೋಡು, ಮಂಗಳೂರು ಮತ್ತು ಉಡುಪಿ ಜಿಲ್ಲೆಯೆನ್ನಬಹುದು. ಈ ಪ್ರದೇಶಗಳಲ್ಲಿ ತುಳುವಲ್ಲದೆ ಕನ್ನಡ, ಕೊಂಕಣಿ, ಮರಾಠಿ, ಮಲಯಾಳ ಭಾಷೆಯನ್ನು ಮಾತನಾಡುವವವರೂ ಇದ್ದಾರೆ. ತುಳು ಇವರಿಗೆ 'ಹೆತ್ತತಾಯಿ', 'ಕನ್ನಡ ಸಾಕುತಾಯಿ'. ಇಬ್ಬರಿಗೂ ಸಮಾನಸ್ಥಾನವನ್ನು ನೀಡಿದ್ದಾರೆ. ಪ್ರಕೃತಿ ವೈಭವದಿಂದ ಕೂಡಿದ ಈ ವಿಶಿಷ್ಟ ಪ್ರದೇಶದಲ್ಲಿ ಬದುಕು ನೀಡಿದ ತಾಯಿಯನ್ನು ತುಳುವರು 'ತುಳುವಪ್ಪೆ' ಎಂದೇ ಕರೆದರು. ಈ ಪ್ರದೇಶದ ತುಳು –ಕನ್ನಡ ಕವಿಗಳು ಈ ತಾಯಿಯನ್ನು ಮನದುಂಬಿ ವರ್ಣಿಸಿದ್ದಾರೆ.

ತುಳುನಾಡು ಸಂಪದ್ಭರಿತ ನಾಡು. ಇದನ್ನು ತಿಳಿಸುವ ಹವ್ಯಕ ಭಾಷೆಯ ನುಡಿ ಹೀಗಿದೆ,

> ತುಪ್ಪದಶನ ಉಂಬಲೆ ತುಳುನಾಡಿಂಗ್ಹೋಯೆಕ್ಕು
> ಅಕ್ಕಿಯ ಮೇಲೆ ಬರೆಯಿಲ್ಲೆ, ತುಳುನಾಡ ಮಕ್ಕಳ ಮೇಲೆ ಕಲೆಯಿಲ್ಲೆ
>
> (೨೦೧೧ ಪು.೯)

ಕೃಷಿ ಮತ್ತು ಗೋಸಂಪತ್ತು ನಾಡಿನ ಸಮೃದ್ಧಿಯನ್ನು ಸೂಚಿಸುತ್ತದೆ. ತುಳುನಾಡಿನಲ್ಲಿ ಇದಕ್ಕೆ ಕೊರತೆಯಿರಲಿಲ್ಲ ಎಂಬುದನ್ನು ಮೇಲಿನ ಮಾತಿನಿಂದ ಅರ್ಥೈಸಿಕೊಳ್ಳಬಹುದು.

ಪರಂಪರೆಯಿಂದಲೂ ತಾಯಿ ಮತ್ತು ತಾಯ್ನಾಡು ಎಲ್ಲ ಕವಿಗಳಿಂದಲೂ ಗೌರವಕ್ಕೆ ಒಳಗಾಗಿದೆ, ಅಂತೆಯೇ, ತುಳು ಜನರಿಗೂ 'ತುಳುವಪ್ಪೆ'ಯ ಬಗೆಗೆ ವಿಶೇಷ ಗೌರವ, ಅಭಿಮಾನ ಮತ್ತು ಪ್ರೀತಿ. ತುಳುನಾಡಿನ ಎಲ್ಲರೂ ತುಳು ಮಾತೃಭಾಷೆಯಲ್ಲದವರೂ ಕೂಡಾ ತುಳುಭಾಷೆಯಲ್ಲೇ ವ್ಯವಹರಿಸಿದ ಸಂಗತಿ ತಿಳಿದದ್ದೇ ಆಗಿದೆ. ನಾಡಿನೆಲ್ಲೆಡೆ ರಾಷ್ಟ್ರಪ್ರಜ್ಞೆ ಮೈದೋರಿ ಸಾಹಿತ್ಯದಲ್ಲಿಯೂ ಅದು ಅನಾವರಣಗೊಳ್ಳತೊಡಗಿತು. ತುಳುವಿನಲ್ಲಿ ಬರಹಕ್ಕೆ ಇನ್ನೂ ಚಾಲನೆ ದೊರೆತಿರಲಿಲ್ಲ. ಆಗ ಕನ್ನಡಭಾಷೆಯಲ್ಲೇ ಈ ಕೆಲಸವನ್ನು ಮಾಡಬೇಕಾಯಿತು. ತುಳುವೇತರ ಮಾತೃಭಾಷೆಯವರಾದ ಗೋವಿಂದ ಪೈ. ಎಂ. ಎನ್. ಕಾಮತ್, ಪಂಜೆ, ಕಡೆಂಗೋಡ್ಲು,

ಸೇಡಿಯಾಪು ಮೊದಲಾದವರೆಲ್ಲ ತುಳುನಾಡನ್ನು ತಾಯ್ನಾಡೆಂದೇ ಭಾವಿಸಿ ಬರವಣಿಗೆಯಲ್ಲಿ ಅನಾವರಣಗೊಳಿಸಿದರು.

ಪ್ರಾಕೃತಿಕವಾಗಿ ಒಂದು ಪ್ರಾದೇಶಿಕ ಘಟಕವಾದ ತುಳುನಾಡು ಕವಿಗಳಿಗೆ ಹೇಗೆ ಕಾಣಿಸಿದೆ ಮತ್ತು ಅಲ್ಲಿಯ ಸಂಸ್ಕೃತಿ ಅವರ ಮೇಲೆ ಬೀರಿದ ಪ್ರಭಾವವನ್ನು ಕೆಲವು ತುಳುಕವನಗಳ ಆಧಾರದಿಂದ ಅಧ್ಯಯನ ಮಾಡಲಾಗಿದೆ. ಪ್ರಾಚೀನ ತುಳುನಾಡು ಪಾಡ್ದನಗಳಲ್ಲಿಯೂ ಹೊಗಳಿಕೆಗೆ ಪಾತ್ರವಾಗಿದೆ. ತುಳುವಿನ ಪಂಜುರ್ಲಿ ಪಾಡ್ದನದಲ್ಲಿ ಈ ನಾಡನ್ನು 'ಸತ್ತಿಗೆದಾತ್ ಮಲ್ಲೆ ಹರಿವಾಣೊದಾತ್ ಉರುಟು, ಪಣವುದಾತ್ ಪೊರ್ಲು, ತಿರ್ತ್ ತುಳುರಾಜ್ಯ' (ಸತ್ತಿಗೆಯಷ್ಟು ಹಿರಿದು, ತಳಿಗೆಯಷ್ಟು ದುಂಡಗೆ, ಹೊನ್ನಿನಷ್ಟು ಸೊಗಸು, ಕೆಳಗೆ ತುಳುರಾಜ್ಯ ಬಲುಸೊಗಸು–(ಉದ್ಧೃತ: 'ತುಳುಸಾಹಿತ್ಯಚರಿತ್ರೆ' ಪು. ೧) ಎಂದು ವರ್ಣಿಸಲಾಗಿದೆ. ತುಳುನಾಡಿನ ಸುಂದರ ಪರಿಸರವನ್ನು ನೋಡಿ ಘಟ್ಟ ಇಳಿದು ಬರುತ್ತಿದ್ದ ದೈವಕ್ಕೂ ಈ ನಾಡಿನ ಬಗೆಗೆ ಮೋಹ ಹುಟ್ಟುತ್ತದೆ. ಈ ಮೋಹವೇ ಪಂಜುರ್ಲಿ ದೈವವು ಇಲ್ಲಿ ನೆಲೆಯಾಗುವುದಕ್ಕೆ ಕಾರಣ. ಕವಿಗಳು – ಸಾಹಿತಿಗಳು ತಮಗೆ ಬದುಕು ಕೊಟ್ಟ ನೆಲದ ಸಂಸ್ಕೃತಿಯನ್ನು ಸಾಹಿತ್ಯದ ಮೂಲಕ ಅನಾವರಣಗೊಳಿಸುವ ರಾಯಭಾರಿಗಳು. ತಾವು ಬದುಕುವ ನೆಲದ ಪ್ರಭಾವ ಅವರ ಕೃತಿಗಳಲ್ಲೂ ಇದ್ದೇ ಇರುತ್ತದೆ. ಹಾಗಾಗಿ ತುಳುಭಾಷೆಯನ್ನು ಮತ್ತು ತುಳುತಾಯಿಯನ್ನು ವರ್ಣಿಸುವ ಮತ್ತು ಇಲ್ಲಿಯ ಆಹಾರ – ವಿಹಾರ, ಆಚರಣೆ –ಆರಾಧನೆ, ಕೃಷಿಸಂಸ್ಕೃತಿ, ನಡೆನುಡಿ, ಹವಾಮಾನ ಮೊದಲಾದುವುಗಳನ್ನು ವರ್ಣಿಸಿರುವ ಕವನಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಕವನಗಳಲ್ಲಿ ತುಳುನಾಡು**

'ತುಳುನಾಡರಾಣಿ', 'ತುಳುಅಪ್ಪೆ', 'ತುಳುನಾಡಗೀತೆ', 'ತುಳುನಾಡಪದ', 'ತುಳುನಾಡ್‌ದ ನೆನಪು', 'ಬಂಗಾರ್‌ದಕಜ್ಜಣ', 'ಪೊರ್ಲುಕಂಟ್‌ನಾಡ್', 'ಏತ್‌ಪೋರ್ಲು', 'ಪಡ್ಡೈದೂರು', ತುಳುನಾಡ ಕವಿತೆ', 'ತುಳುನಾಡ್ದಪೆರ್ಮೆ', 'ತುಳುವನಾಡ್ಗ್', 'ಎದ್ಕೊನುವೆ', 'ಅಪ್ಪೆಇಲ್ಲ್', 'ತುಳುವತಮೆರಿ' ಮೊದಲಾದ ಕವನಗಳು ತುಳುನಾಡನ್ನು ವರ್ಣಿಸುವ ಬಗೆಯನ್ನು ಕಾಣಬಹುದಾಗಿದೆ.

ಗೋವಿಂದ ಪೈಯವರು ತುಳುತಾಯಿಯನ್ನು 'ತಂದೆತಾಯಂದಿರ ತಾಯೇ' ಎಂದು ಗುರುತಿಸಿ ವಿಶೇಷ ಗೌರವ ಸಲ್ಲಿಸುತ್ತಾರೆ. ಈಕೆಯನ್ನು ಹಿರಿಯಳೆಂಬುದಾಗಿ ಗುರುತಿಸುತ್ತಾ ಆಕೆಯ ಬಸಿರಲ್ಲಿ ಹುಟ್ಟಿದ್ದಕ್ಕಾಗಿ ಧನ್ಯತೆಯನ್ನು ಅನುಭವಿಸುತ್ತಾರೆ. ಮತ್ತೆಯೂ ಅದೇ ತಾಯಿಯ ಗರ್ಭದಿಂದ ಹುಟ್ಟಿಬರುವ ಆಸೆಯನ್ನು ಪ್ರಕಟಿಸುತ್ತಾರೆ. ಇದು ತುಳುವರಿಗೆ ತವರ್ಮನೆ

ಉಳಿದವರಿಗೆ ಕಾಯುವ ಮನೆ. ಎಲ್ಲ ಧರ್ಮ, ಜಾತಿಗಳ ಬಾಂಧವರನ್ನೂ ಒಂದೇ ತೊಟ್ಟಿಲಲ್ಲಿಟ್ಟು ಪೊರೆಯುವವಳು 'ತೌಳವಮಾತೆ' ಎನ್ನುತ್ತಾ ನಾಡಿನ ಬಗೆಗಿನ ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆ. ಸಾಮರಸ್ಯದ ಬದುಕಿಗೆ ಹೆಸರಾದದ್ದು ತುಳುನಾಡು. ಹಾಗಾಗಿಯೇ ನಮ್ಮೆಲ್ಲರ ತಂದೆ ದೇವರು, ತಾಯಿ ತೌಳವ ಮಾತೆಯೂಗಿದ್ದಾಳೆ. ಸರೋವರ ತಾವರೆಗೆ ಆಶ್ರಯ ಕೊಟ್ಟಂತೆ ತುಳುತಾಯಿ ಎಲ್ಲರನ್ನೂ ತನ್ನ ತೊಟ್ಟಿಲೊಳಿಟ್ಟು ಪೊರೆಯುವವಳೆಂಬ ನಂಬಿಕೆ ಕವಿಯದು. ಇದಕ್ಕೆ ಪೂರಕವಾಗಿ ಕೆಲಿಂಜ ಸೀತಾರಾಮ ಆಳ್ವರ ಮಾತುಗಳನ್ನು ಗಮನಿಸಬಹುದು.

'ಮಂದಿರೊ ಪಳ್ಳಿಲು, ಇಂಗ್ರೇಜಿ ಲೆಕ್ಕೊಗ್ ಸಾವಿರೊದಂದಾಜಿ ಕಲ್ಲ್‌ಡ್ ಕೆತ್ತ್‌ದ್ ಕಲ್ಕುಡೆರ್ ಉಂತಯಿ ಮೂರ್ತಿಲೆ ಗುಮ್ಮಟೆರ್'(ಸುಗಿಪು) (ಮಂದಿರ ಮಸೀದಿ ಚರ್ಚುಗಳು, ಲೆಕ್ಕಕೆ ಸಾವಿರಕ್ಕೂ ಮೇಲು ಕಲ್ಲಲಿ ಕೆತ್ತಿದ ಕಲ್ಕಡರು, ನೆಲೆಯಾಗಿಹರು ಗೊಮ್ಮಟರು). ಕವಿಯ ಈ ಮಾತು ಸಾಮರಸ್ಯದ ಬದುಕಿಗೆ ಸಾಕ್ಷಿ. ಸಂಘರ್ಷಕ್ಕೆ ಎಡೆಕೊಡದ ಈ ನಾಡು ಎಲ್ಲರಿಂದ ಹೊಗಳಿಕೆ ಪಾತ್ರವಾಗಿದೆ. ಆದರೂ ಕವಿಗಿರುವ ಬೇಸರವೆಂದರೆ, ಈ ಭಾಷೆಯ ಬರಹ ತೀರಾ ಕಡಿಮೆ. ಇನ್ನೂ ಬರೆಯಬೇಕಾದುದು ಬಹಳವಿದೆ. ತುಳುವಿನ ಸಾಹಿತ್ಯಕೃಷಿ ಇನ್ನೂ ಹುಲುಸಾಗಿ ಬೆಳೆಯಬೇಕಾಗಿದೆಯೆಂಬ ಆಶಯ ಇಲ್ಲಿದೆ. ಕನ್ನಡ, ಕೊಂಕಣಿ, ಮರಾಠಿ, ಮಲಯಾಳ ಎಲ್ಲ ಮಕ್ಕಳಿಗೂ ಅನ್ನ ನೀರುಣಿಸಿ ಪೊರೆವ ಸಾಧ್ವಿಯೆಂಬುದಾಗಿ ತುಳುತಾಯಿಯನ್ನು ವರ್ಣಿಸಲಾಗಿದೆ.

ಸೇಡಿಯಾಪು ಕೃಷ್ಣ ಭಟ್ಟರು ತುಳುನಾಡನ್ನು ವಿಶೇಷವಾಗಿ ಗುರುತಿಸಿದ್ದಾರೆ. 'ನೂರು ಊರುಗಳನ್ನು ಸುತ್ತಿಬಂದರೂ ಇಂತಹ ತಾಯಿಯನ್ನು ಕಂಡಿಲ್ಲ' ಎನ್ನುತ್ತಾರೆ ಕವಿ. ಆಕೆಯನ್ನು ವರ್ಣಿಸುತ್ತಾ,

ಕಾಡು ಕಣ್ಣಿಗೆ ಕಾಡಿಗೆ
ಹಸುರುಗುವ ಬೈಲು ಹೃದಯಕ್ಕೆ ಹಾಸಿಗೆ
ತೆಂಗಡಕೆ ತೋಟ ಮಾನಸಕೆ
ಸುಸ್ವಾಗತದ ಮಂಟಪ
ಗಂಭೀರ ಜಲನಿಧಿಯ ತೆರೆ ಭಾವಕುಡುಗೊರೆ
ಇಂಥ ನಾಡಿನಲಿ ಕಣ್ ತೆರೆದುದೆನ್ನ ಪುಣ್ಯ
ಹಾಡಿಹೊಗುಳುತ ನಿನ್ನನಪ್ಪೆ ಧನ್ಯ (ತುಳುನಾಡ ಹಾಡು)

ಎಂಬ ಮಾತುಗಳೊಂದಿಗೆ ತುಳುನಾಡನ್ನು ವರ್ಣಿಸುತ್ತಾ ಇಲ್ಲಿ ಜನಿಸಿದ್ದಕ್ಕೆ ಧನ್ಯತಾಭಾವವನ್ನು ತಾಳುತ್ತಾರೆ. ಕವಿಯ ಪ್ರಕಾರ ಇಲ್ಲಿರುವ ನೀರೆಲ್ಲ ಸಿಹಿನೀರು, ಇಲ್ಲಿ

ಬರಗಾಲವೆಂಬುವುದೇ ಇಲ್ಲ. ತುಳುನಾಡ ಬಯಲಿನಲ್ಲಿ 'ಕೆಯ್' ಕುಣಿಯದಿರುವ ದಿನವೇ ಇಲ್ಲ. ಒಟ್ಟಿನಲ್ಲಿ ಇಂತಹ ಸೊಬಗು ಇನ್ನೆಲ್ಲಿದೆ? ಎಂಬುದು ಕವಿಯ ಪ್ರಶ್ನೆ. ಆಕೆಯ ನೆಲ ಕರಿಮಣಿಯ ಫಲಕ, ಮುಳಿಯ ಮಾಡು ತಲೆಬಾಚಿ ಕುಳಿತ ಮುತ್ತೈದೆಯ ತಿಲಕ, ಎಂಬ ಮಾತಿನೊಂದಿಗೆ ಆಕೆಯ ಸರಳವಾದ ಬದುಕಿನ ಕಡೆಗೆ ಬೆಳಕು ಚೆಲ್ಲುತ್ತಾರೆ. 'ನಿನ್ನ ವಾತಾವರಣವಾರ್ದ್ರ, ಈ ನೆಲದ ಮಣ್ ಮಳಲ್ ನಿರ್ಮಲ ಜಲಾರ್ದ್ರ, ಬೆಳೆವೆಲ್ಲ ಧಾನ್ಯ ಹಣ್ಕಾಯತಿ ರಸಾರ್ದ್ರ, ಸರಪುರುಳಾರ್ದ್ರ, ಓ ತಾಯಿ ನಿನ್ನಂತರಂಗ ಬಹಿರಂಗವಾರ್ದ್ರ', ಎನ್ನುವುದರೊಂದಿಗೆ ತುಳುನಾಡಿನ ಸಾರಸರ್ವಸ್ವವನ್ನೂ ಗುರುತಿಸುತ್ತಾರೆ. ಇಲ್ಲಿ ವಾತಾವರಣ, ನೆಲ, ಜಲ, ಆತಿಥ್ಯ ಎಲ್ಲವೂ ಕವಿಗೆ ವಿಶೇಷವಾಗಿ ಗೋಚರಿಸಿದೆ. ನೆಲ-ಜಲವನ್ನು ಬಯಸಿ ಬಂದವರಿಗೆ, ಬೇರೆಯವರ ಉಪಟಳಕ್ಕೆ ಬೇಸತ್ತು ಬಂದವರಿಗೆ ಉಣ್ಣೆರೆಂದು ಹಾಲು ಸುರಿಸಿದ ಮಹಾತಾಯಿ ತುಳುನಾಡ ತಾಯಿ. ಈ ಎಲ್ಲ ಆಲೋಚನೆಗಳೊಂದಿಗೆ ಕವಿ ತುಳುತಾಯಿಯನ್ನು ವಿಶ್ವಾತ್ಮಕವಾಗಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಹಾಗಾಗಿಯೇ ಕವಿಯ ಮಾತಿನಲ್ಲೂ ಆಕೆ 'ಶ್ರೀಭಾರತಿ'ಯಾಗುತ್ತಾಳೆ.

ಪ್ರತಿಯೊಂದು ಸಮಾಜದಲ್ಲಿಯೂ ತಾರತಮ್ಯದ ಗ್ರಹಿಕೆ ಇದ್ದೇ ಇದೆ. ತುಳುನಾಡನ್ನು ತೆಂಗು ತೋಟದ ತೊಟ್ಟಿಲೆಂದು ವರ್ಣಿಸುವ ಕವಿ ಅಮ್ಮೆಂಬಳ ಶಂಕರನಾರಾಯಣ ನಾವುಡರು 'ತೆಂಗು ತೋಟದ ತೊಟ್ಟಲು' ಎಂಬ ಕವನದಲ್ಲಿ 'ಮುಗಿಲು ಮುಟ್ಟುವ ಸೌಧಗಳ ನೆರೆಯಲ್ಲಿ ಬಡವರ ಗುಡಿಸಲು, ಸಿರಿಯ ನಗು ನಲಿವುಗಳ ಮರೆಯಲಿ ಬಡವರಳುವರು ಸುತ್ತಲು' ಎಂಬಲ್ಲಿ ಅಂತಹ ತಾರತಮ್ಯದ ಬದುಕು ತುಳುನಾಡಲ್ಲಿಯೂ ಇದೆಯೆಂಬುದನ್ನು ಅತ್ಯಂತ ವಿಷಾದದಿಂದ ಗುರುತಿಸಿದಂತಿದೆ. ಇಲ್ಲಿ ನಿಸರ್ಗದ ಫಲವಂತಿಕೆ ಮತ್ತು ಬಡತನದ ಚಿತ್ರಣ ಅಭಿವ್ಯಕ್ತಗೊಂಡಿದೆ.

ಪಾ.ವೆಂ.ಆಚಾರ್ಯರು ತುಳುನಾಡನ್ನು ಆಗಾಗ ನೆನಪಿಸಿಕೊಳ್ಳುತ್ತಾರೆ. ತುಳುನಾಡಿನ ಮಣ್ಣಿನ ಪರಿಮಳ, ನೀರಿನತಂಪು, ಪಡುವಣಗಾಳಿ ಅವರ ಮನಸ್ಸನ್ನು ಸೂರೆಗೊಂಡಿದೆ. ಅನೇಕ ದೇಶಗಳನ್ನು ಸುತ್ತಿದ ಕವಿಮನಸ್ಸು ಇಂತಹ ಕಂಪನ್ನು ಬೇರೆಲ್ಲೂ ಅನುಭವಿಸಿಲ್ಲ. ಉಣ್ಣಲು ಗಂಜಿಯಿಲ್ಲದೆ ಭಾರವಾದ ಹೆಜ್ಜೆಯೊಂದಿಗೆ ತುಳುನಾಡಿನಿಂದ ನಿರ್ಗಮಿಸಿದ ಕವಿಯ ಮನಸ್ಸು ಇಲ್ಲಿಯ ಮೋಹವನ್ನು ಬಿಡಿಸಿಕೊಳ್ಳುವ ಪ್ರಯತ್ನಕ್ಕೆ ಮುಂದಾಯಿತು. ಆದರೂ ಆ ಮೋಹ ಮತ್ತೆ ಚಿಗುರಿತು ಎನ್ನುತ್ತಾರೆ ಕವಿ. ಬದುಕಿನ ಪರ್ಯಟನೆಯಲ್ಲಿ ನೂರು ಬಾವಿಯ ನೀರು ಕುಡಿದೂ, ಹತ್ತು ಭಾಷೆಗಳ ಓದು-ಬರಹ ಕಲಿತರೂ ಮನಸ್ಸು ಮಾತ್ರ ತುಳುನಾಡಿನಲ್ಲಿಯೇ, ಹಾಗಾಗಿಯೇ ಅಭಿಮಾನದಿಂದ ಕವಿ ಹೇಳುವ,

ಮಲೆತ್ತ್ ನಡಮು ತುಳುನಾಡ್‌ದ ಆಣ್

ತೆಲ್ತ್ ಪಾತೆರುಣ ಅಲ್ಪದ ಪೊಣ್ಣ್

ಗುರೆತ್ತ್ ಕೂಗು ತುಳುನಾಡ್‌ದ ಕಡಲ್ (ತುಳುನಾಡ್‌ದನಿನೆಪು)

'ಎದೆಯೆತ್ತಿ ನಡೆವ ತುಳುನಾಡಿನ ಗಂಡು ನಗುಬೀರುತ ನಡೆವ ಅಲ್ಲಿನ ಹೆಣ್ಣು, ಮೊರೆಯುತ ಕೂಗುವ ತುಳುನಾಡಿನ ಕಡಲು ಅದು ಬೇರೆಯೇ' ಎನ್ನುವ ಮಾತು ತುಳುನಾಡನ್ನು ಮತ್ತೆ ಮತ್ತೆ ನೆನಪಿಸುತ್ತದೆ. ಇಲ್ಲಿ ವ್ಯಕ್ತವಾಗುವ ತಾಯ್ನಾಡಿನ ಮೋಹ ಅತ್ಯಂತ ಗಾಢವಾದುದು. ಶಾಶ್ವತವಾಗಿ ಇಲ್ಲಿ ಬದುಕಲಾಗದಿದ್ದರೂ ಕೊನೆಯ ಉಸಿರು ಬಿಡಲಾದರೂ ತುಳುನಾಡಿಗೆ ಹೊಗಬೇಕೆನಿಸಿದ್ದು ಕವಿಗೆ. ಇಂತಹ ಅಗಾಧವಾದ ಸೆಳೆತ ಕವಿಗೂ– ತುಳುನಾಡಿಗೂ.

ಗಡಿನಾಡಿನಲ್ಲಿದ್ದುಕೊಂಡು ಕನ್ನಡಕ್ಕಾಗಿ ಅನವರತ ಹೋರಾಡಿ, 'ತುಳುವಪ್ಪೆ' (ತುಳು ಮಾತೆ)ಯನ್ನು ಹೊಗಳಿ ತುಳುನಾಡು – ನುಡಿಯನ್ನು ಅನೇಕ ಕವಿತೆಗಳ ಮೂಲಕ ಕಟ್ಟಿಕೊಟ್ಟವರು ಕಯ್ಯಾರರು. 'ಎನ್ನಪ್ಪೆ ತುಳುವಪ್ಪೆ' ಎನ್ನುವುದು ಇವರ ಕವನ ಸಂಕಲನ. ಕನ್ನಡನಾಡನ್ನು ಕಟ್ಟುವ ಸಂತಸದ ದನಿಯೊಂದಿಗೆ ಕಾಸರಗೋಡು ಆದರಿಂದ ಹೊರಗುಳಿದಾಗ ಅಲ್ಲಲ್ಲಿ ನೋವಿನ ಎಳೆಗಳನ್ನು ವ್ಯಕ್ತಪಡಿಸಿದವರು ಕಯ್ಯಾರರು. 'ಗುಡ್ಡೆ ಏರುತ, ಕಡಲು ದಾಟುತ ದೂರದೂರಿಗೆ ಹೋದರೂ, ಎಲ್ಲೇಹೋಗಲಿ ಭಾಷೆಯೊಂದೇ ಅಕ್ಕ–ಅಣ್ಣಾ ಎಂದರು'. ತುಳುನಾಡಿಗರು ಬೇರೆಬೇರೆ ಕಾರಣಗಳಿಗಾಗಿ ನಾಡನ್ನು ಬಿಡಬೇಕಾದ ಅನಿವಾರ್ಯತೆ ಬಂದರೂ ಅವರೆಲ್ಲರ ಉಸಿರು ತುಳುನಾಡಿನಲ್ಲಿಯೇ ಎನ್ನುವುದು ಪ್ರಸ್ತುತ ಕವಿಯ ಅಭಿಮತವಾಗಿದೆ.

ಕಯ್ಯಾರರು ತುಳುನಾಡು–ನುಡಿಯನ್ನು ವಿಭಿನ್ನರೂಪಕಗಳಲ್ಲಿ ಕವಿತೆಯಾಗಿಸಿದ್ದಾರೆ. ತುಳುನಾಡು–ನುಡಿಯನ್ನು ಅವರು ಪ್ರೀತಿಸಿದ ಗೌರವಿಸಿದ ಬಗೆಯನ್ನು ಇವರ ಕವನಗಳಿಂದ ಅರ್ಥೈಸಿಕೊಳ್ಳಬಹುದು. ಇವರ ಕಾವ್ಯದಲ್ಲಿ ದೇಶಭಕ್ತಿ, ಸಮಾಜದ ಕಲ್ಪನೆ ದೈವಿಕಶ್ರದ್ಧೆ ಒಂದೇ ಆಗಿದೆ. ಇವುಗಳೆಲ್ಲವುಗಳ ಆಳದಲ್ಲಿ ಅಡಗಿರುವುದು ಮಾನವೀಯತೆಯ ನೆಲೆಯೆಂದರೆ ತಪ್ಪಾಗದು.

ಅಮೃತಸೋಮೇಶ್ವರರು ತುಳುನಾಡನ್ನು 'ಚಿನ್ನದ ಬಟ್ಟಲು' ಎಂಬುದಾಗಿ ವರ್ಣಿಸಿದ್ದಾರೆ. ಈ ನಾಡನ್ನು ನೋಡಲು ಅದರ ಅಂದಚಂದವನ್ನು ಸವಿಯಲು ಸಾವಿರ ಕಣ್ಣುಗಳು ಬೇಕು ಎನ್ನುವುದರೊಂದಿಗೆ,

ಪೊಣ್ಣಾಳಿಕೆದ ಪೊರ್ಲುದಮಣ್ಣ್

ಪುಣ್ಯೊದ ಪರಿಪು ಐಸುರಕಣ್ಣ್

ರುಚಿರುಚಿದೋಣಸು ಬಗೆಬಗೆ ತಿನಸು

ಎಡ್ಡೆಪುಮೋಕೆ ಮಲ್ಲಿಗೆ ಮನಸು ನಮ ತುಳುನಾಡ್ (ಬಂಗಾರ್ದಕಜಣ)

ಹೆಣ್ಣಾಳಿಕೆಯ ಚೆಲುವಿನ ಮಣ್ಣು, ಪುಣ್ಯದ ಹರಿವು ಐಸಿರಿ ಕಣ್ಣು, ಸವಿಸವಿಯುಣಿಸು, ಬಗೆಬಗೆ ತಿನಿಸು, ಒಳಿತಿನ ಬಯಕೆ ಮಲ್ಲಿಗೆ ಮನಸ್ಸು ನಮ್ಮಯ ತುಳುನಾಡು' ಎಂದು ವರ್ಣಿಸುತ್ತಾ, ಸಿರಿಯಂತಹ ದಿಟ್ಟ ಹೆಣ್ಣುಮಗಳ ಆಳ್ವಿಕೆಯನ್ನಿಲ್ಲಿ ನೆನಪಿಸುತ್ತಾರೆ. ಇವರು ಕನ್ನಡ ಮತ್ತು ತುಳು ಸಾಹಿತ್ಯರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ನವಿರಾದ ಭಾಷೆಯಲ್ಲಿ ತುಳುನಾಡಿನ ಪ್ರಕೃತಿ, ಜಾನಪದ ಸಂಸ್ಕೃತಿ ಇವರ ಕವನಗಳೊಳಗೆ ಕಾಣಿಸಿಕೊಳ್ಳುತ್ತವೆ. ಇವರು ಗುರುತಿಸಿದ 'ಚಿನ್ನದ ಬಟ್ಟಲು' ಎಂಬುದನ್ನು ಗಮನಿಸಿದಾಗ ಪರ್ವತದ ಮೇಲಿಂದ ತುಳುನಾಡನ್ನು ನೋಡಿ ಪಂಜುರ್ಲಿದೈವ ಉದ್ಗರಿಸಿದ 'ಹರಿವಾಣದಷ್ಟು ಉರುಟು, ನಾಣ್ಯದಷ್ಟು ಚಂದ ತುಳುನಾಡು' ಎಂಬ ವರ್ಣನೆ ನೆನಪಿಗೆ ಬರುತ್ತದೆ.

ಕೋಲ, ನೇಮ, ಹರಕೆಗಳಲ್ಲಿ ತುಳುವ ಬದುಕು ಮೆರೆದಿದೆ. ಅಲ್ಲಿಯ ಸುಧೆ ತುಂಬಿದ ತೆಂಗು, ಬಂಗಾರ ಬಾಳೆಗೊನೆ, ಗೆಜ್ಜೆಯಂತಹ ಅಡಕೆ ಆಕರ್ಷಣೀಯ. ಕನರಾಡಿ ವಾದಿರಾಜ ಭಟ್ಟರು ವರ್ಣಿಸಿದ 'ಚಂದದ ನಾಡು ನಾಣ್ಯದಷ್ಟು ಚಂದ' ನಾಣ್ಯದ ಗುಣ ಉರುಟಾಗಿರುವುದು. ಅಮೃತರು ಹೇಳುವ ಬಂಗಾರದ ಬಟ್ಟಲು, ಕನರಾಡಿಯವರು ಹೇಳುವ ನಾಣ್ಯದ ಆಕಾರವನ್ನು ಗಮನಿಸಿದರೆ, ತುಳುನಾಡಿನ ಆಕಾರವನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಮಾತ್ರವಲ್ಲ, ನಾಣ್ಯ, ಬಂಗಾರ ಪದಗಳು ಈ ನಾಡಿನ ಸಮೃದ್ಧಿಯನ್ನು ಸೂಚಿಸುತ್ತವೆ. ಅಂತಹ ನಾಡಿನ ಬಿಳಿಯ ಛಾಯೆ ಹೋಗಿ, ಕಪ್ಪು ಬಳಿದದ್ದು, ತನ್ಮೂಲಕ ಹಣವೇ ಬದುಕಾದ, ವ್ಯವಹಾರವೇ ದೊಡ್ಡದಾಗಿ ಮಾನವೀಯತೆ ಮರೆತ ಸಂಗತಿಯನ್ನು ಪ್ರಸ್ತುತ ಕವನದಲ್ಲಿ ವಿಷಾದದೊಂದಿಗೆ ಗುರುತಿಸಲಾಗಿದೆ. ಇಲ್ಲಿಯ ಕಪಿಲೆಯ ಹಾಲು ಅತ್ಯಂತ ರುಚಿಕರ. ಇದನ್ನೆಲ್ಲಾ ಹೊಂದಿದ ನಾಡಿಗೆ ಒಳಿತಾಗಲೆಂಬ ಸದಾಶಯ ಕವನದಲ್ಲಿದೆ.

ಮನುಷ್ಯ ಸಂಪತ್ತಿನ ಆಸೆಯಿಂದ ತನ್ನ ನಾಡನ್ನು ತ್ಯಜಿಸಿ ಇನ್ನೊಂದೆಡೆ ತಳವೂರುವುದು ಸಹಜ. ಇದರಿಂದ ತುಳುವರೂ ಹೊರತಾಗಿಲ್ಲ. ಸುನೀತಾ ಎಂ. ಶೆಟ್ಟಿಯವರ ಏತ್‌ಪೊರ್ಲು (ಎಷ್ಟೊಂದು ಸುಂದರ) ಕವನವು ನಾಡಿನ ಸಮೃದ್ಧಿಯನ್ನು ಬಿತ್ತರಿಸುತ್ತಾ, ದೊಡ್ಡ ಮನೆತನ, ಕೂಡುಕುಟುಂಬಗಳ ನೆಲೆಯನ್ನು ಗುರುತಿಸುತ್ತಾ, ಗೋಸಂಪತ್ತು ತುಂಬಿರುವ ಹಟ್ಟಿ ತುಳುನಾಡಿನ ಸಂಸ್ಕೃತಿ, ಮದುವೆಯ ಸನ್ನಿವೇಶ, ತೆನೆ ಕಟ್ಟುವ, ಹೊಸಕ್ಕಿ ಊಟದ ಸಂಭ್ರಮವನ್ನು ವರ್ಣಿಸುವ ಜೊತೆಯಲ್ಲೇ ಇಂತಹ ಪ್ರೀತಿ ಎಲ್ಲಿ ಹೋಯಿತೆಂಬ ಪ್ರಶ್ನೆಯೆತ್ತಿದ್ದಾರೆ.

ನಾಡ್‌ಬುಡುನಗ ಪಿರ್ತಿ ಪಾರ್‌ಂಡ್ ಗಾಲಿ ಪೇಟೆಂದಾ
ಮೂಡಪಾರುಂಡು ಸಂಪುನಟ್ಟುಂಡು ಪೊರ್ಲುರ್ ಬದ್‌ಕ್‌ದಾ
ಗೋಡೆಕಟ್ಟ್‌ಗ ಮಾಡ್ದೆರ್ಪುಗ ತುಳುವ ಐಸ್‌ರದಾ (ಏತ್‌ಪೊರ್ಲುರ್)

'ಊರು ಬಿಟ್ಟರೆ ಪ್ರೀತಿ ಹೋಯಿತೆ ಪೇಟೆಗಾಳಿಯಲಿ, ಚೆಲುವ ಬದುಕಿನ ತಂಪನರಸುತ ಮನಸು ಸಾಗಿಹುದು, ಗೋಡೆಯೇರಿಸಿ ಮಾಡನೆಬ್ಬಿಸಿ ತುಳುವನಾಡಿನದು' ಎನ್ನುವ ಸಂಕಟವನ್ನು ತೆರೆದಿಟ್ಟಿದ್ದಾರೆ. ನಗರದ ಬಣ್ಣದ ಬದುಕಿಗೆ ತುಳುನಾಡಿನ ಜನ ಆಕರ್ಷಿತರಾಗಿದ್ದಾರೆ. ಹಾಗೂ ತನ್ಮೂಲಕ ನಾಡಪ್ರೀತಿಯನ್ನು ಕಳೆದುಕೊಂಡಿದ್ದಾರೆಂಬ ಖೇದ ಇಲ್ಲಿ ಅನಾವರಣಗೊಳ್ಳುತ್ತದೆ. ಕಡಲತಡಿಯ ಈ ನಾಡಿನಲ್ಲಿ ಕೂಡು ಕುಟುಂಬಗಳ ಕಲರವ, ಸತ್ಯದೈವಗಳ ಚಾವಡಿ, ಭಂಡಾರ, ಹಟ್ಟಿ ತುಂಬ ಹಸುಗಳ ಆಲಾಪ, ಕೋಳಿಅಂಕ, ಜಾತ್ರೆ, ಆಯನ, ವಾರ್ಷಿಕ ಆವರ್ತನಗಳು ಒಂದೊಂದು ಅರ್ಥಪೂರ್ಣ. ಇಂತಹ ಸಂಸ್ಕೃತಿ ಅನ್ಯಸಂಸ್ಕೃತಿಯ ಆಕರ್ಷಣೆಗೆ ಒಳಗಾಗಿದೆಯೆಂಬ ವಿಷಾದ ಇಲ್ಲಿದೆ.

'ಪಂಪನಿಗೆ ಬನವಾಸಿ ನಾನೊ ಅನಿವಾಸಿ, ಪಂಪನಂತೆಯೆ ನಾನು ವ್ಯಸನಿ. ಆರಂಕುಶಮಿಟ್ಟೊಡಂ ನೆನೆವುದೆನ್ನಮನ ನನ್ನ ಹುಟ್ಟೂರ'. ಇದು ಕೆ.ವಿ. ತಿರುಮಲೇಶರು ಕಾಸರಗೋಡನ್ನು ನೆನಪಿಸಿಕೊಂಡ ಬಗೆ. ಕಾಸರಗೋಡು ಭಾವನಾತ್ಮಕವಾಗಿ ತುಳುನಾಡು. ಅನೇಕ ಭಾಷೆಗಳ ತವರೂರು. 'ಕಾಸರಗೋಡು' ಎಂಬ ಈ ಕವನದಲ್ಲಿ ಕವಿ 'ಅತೀತ'ನಾಗುವ ಪ್ರಜ್ಞೆಯಿದೆ. ಇದೇ ಪ್ರಜ್ಞೆ ತುಳುವರನ್ನು ಬೆಳೆಸಿದೆ. ಪ್ರಬುದ್ಧರನ್ನಾಗಿಸಿದೆ.

ತುಳುತಾಯಿಗೆ ಮನೆಯನ್ನು ಕಟ್ಟುವ ಮೂಲಕ, ತುಳುನಾಡನ್ನು ಕಟ್ಟುವ ಆಶಯವುಳ್ಳ ಕವಿತೆ ಪಾಲ್ತಾಡಿಯವರ 'ಧ್ವಜಏರಲಿ' ಎನ್ನುವ ಕವನ. 'ಎಲ್ಲ ಸೇರುತ ತುಳು ನಿಧಾನವನಗೆದು ಮೇಲಕೆ ಎತ್ತುವ, ನೆಲೆಯೆ ಇಲ್ಲದ ನಮ್ಮ ತಾಯಿಗೆ ಮನೆಯನೊಂದನು ಕಟ್ಟುವ' ಹುಗಿದುಹೋಗಿರುವ ತುಳುವ ನಿಧಿಯನ್ನು ಮೇಲಕ್ಕೆತ್ತುವ, ನಾಡು ಮತ್ತೆ ಹೊಳೆಯುವ ಹಾಗೆ ಮಾಡುವ ಆಶಯವನ್ನು ಕವಿತೆ ವ್ಯಕ್ತಪಡಿಸುತ್ತದೆ.

ತನ್ನನ್ನು ಸಾಕಿದ ತುಳುತಾಯಿಗೆ ಕವಿತೆಯ ಮೂಲಕ ಕೃತಜ್ಞತೆ ಸಲ್ಲಿಸಿದವರು 'ತುಳುನಾಡಿನ ಹೆಮ್ಮೆ' ಕವನದ ಕರ್ತೃ ಎನ್.ಪಿ. ಶೆಟ್ಟಿಯವರು. ತಾಯಿ ಕಲಿಸಿದ ತುಳುವಿನ ಸವಿಯನ್ನು, ತಂದೆ ಕಲಿಸಿದ ದೇಸೀ ಭಾಷೆಯ ಸಂಪತ್ತನ್ನು ಜೋಳಿಗೆಯಲ್ಲಿ ತುಂಬಿ ಹಂಚಹೊರಟಿದ್ದಾರೆ ಕವಿ. ತುಳು ಸಂಸ್ಕೃತಿ, ತುಳು ಜನರ ನಂಬಿಕೆ, ಆರಾಧನೆಗಳನ್ನು ಅನಾವರಣಗೊಳಿಸುತ್ತಾ ಮುಂದುವರಿಯುವ ಕವನ ತುಳುನಾಡಿನ ಎಲ್ಲ ಸಂಗತಿಗಳನ್ನು ನೆನಪಿಸಿ

ಕೊಡುತ್ತದೆ. ಹೆತ್ತವರು ಮತ್ತು ಹೊತ್ತ ನಾಡು ತನಗೆ ಕೊಟ್ಟ ಶಕ್ತಿಯನ್ನು ಕಲಿಯಲು ಮತ್ತು ಕಲಿಸಲು ಬಳಸಿಕೊಂಡು ಜನ್ಮ ಸಾರ್ಥಕ ಮಾಡಿಕೊಳ್ಳುವ ಬಯಕೆ ಇಲ್ಲಿದೆ. ಈ ಮೂಲಕ ತಾನು ಭಾಷೆ ಮತ್ತು ದೇಶದ ಸೇವೆ ಮಾಡುತ್ತಿದ್ದೇನೆಂಬ ಆಲೋಚನೆ ಕವಿಯದು.

ತುಳುನಾಡನ್ನು ತನ್ನ ತವರು ಮನೆಯಾಗಿ ಪರಿಗಣಿಸಿ ಕವನ ರಚಿಸಿದವರು ಆತ್ರಾಡಿ ಅಮೃತಾ ಶೆಟ್ಟಿಯವರು. ಕವಯಿತ್ರಿಯ ಪಾಲಿಗೆ ಈ ನಾಡು ಪುತ್ಥಳಿ ಬಂಗಾರ ಬೆಳಗುವ ನಾಡು. ಈ ನಾಡನ್ನು ವರ್ಣಿಸಲು ಈಕೆಗೆ ನಾಲ್ಕು ಬಾಯಿಗಳಿದ್ದರೂ ಕಡಿಮೆಯೇ. ಯಾರಿಗಾದರೂ ಇದರ ಬಗ್ಗೆ ಸಂದೇಹವಿದ್ದಲ್ಲಿ ಒಮ್ಮೆ ಬಂದು ಕಣ್ಣಿಟ್ಟು ನೋಡಿ ಎಂದು ಕರೆ ಕೊಡುತ್ತಾರೆ. ಕವಯಿತ್ರಿಗೆ ತನ್ನ ತವರಿನ ಬಗೆಗಿರುವ ಪ್ರೀತಿ, ಅಭಿಮಾನ, ಗೌರವ ಇಲ್ಲಿ ಪ್ರಸ್ತುತಗೊಳ್ಳುತ್ತದೆ.

ಕವಿಗಳ ಕಣ್ಣಲ್ಲಿ ತುಳುನಾಡ ತಾಯಿ 'ಲೋಕಮಾನ್ಯೆ'ಯಾಗಿದ್ದಾಳೆ. ಆದರೆ ಕವಿಮನಸ್ಸು ಎಲ್ಲವನ್ನೂ ಅತ್ಯಂತ ಸೂಕ್ಷ್ಮವಾಗಿ ಗಮನಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಸೌಹಾರ್ದತೆಯ ಸಂಕೇತವಾಗಿದ್ದ ತುಳುನಾಡಿನಲ್ಲಿ ಶಾಂತಿಯನ್ನು ಕದಡುವ ಪ್ರಯತ್ನ ನಡೆಯುತ್ತಿದೆ. ಯಾವುದೇ ನಾಡು ಅನ್ಯಸಂಸ್ಕೃತಿಯ ದಾಳಿಯಿಂದಾಗಿ ತತ್ತರಿಸಿ ಹೋಗುವುದು ಸರ್ವೇಸಾಮಾನ್ಯ ಕೆ.ಟಿ. ಗಟ್ಟಿಯವರು ಸಮಾಜದ ಶಾಂತಿಯನ್ನು ಕದಡಿ ನೆಮ್ಮದಿ ಕೆಡಿಸುವ ಸೂಕ್ಷ್ಮ ಸಂಗತಿಯನ್ನು 'ಹುಲಿಹಸು ನೀರು ಕುಡಿಯುವ ಕೆರೆ' ಎಂಬ ಕನವದ ಮೂಲಕ ಪ್ರತಿಮಿಸಿದ್ದಾರೆ. 'ಇದು ಹುಲಿ ಹಸು ಜೊತೆಯಾಗಿ ನೀರು ಕುಡಿವ ಕೆರೆ, ಹುಲಿ ಸಾವಿರ ವರ್ಷ ಹಿಂದೆ, ಹಸು ನಿನ್ನೆ ಮೊನ್ನೆ ಇಂದು ಅದರ ಮೂರು ಹೆಣ್ಣು ಕರುಗಳು ಮಾತ್ರ ಉಳಿದಿವೆ. ಈಗ ಇವು ಕಬ್ಬಿನ ಹಿತ್ತಲಿಂದ ಬಂದ ನರಿಗಳು. ಇಡೀ ರಾತ್ರಿ ಹಿತ್ತಲಲ್ಲೇ ಮಲಗಿ, ಮುಂಜಾನೆ ಎದ್ದು ಗುಡ್ಡೆ ಹತ್ತುವ ಕಡಸು, ಅದು ನಾಗಬನ, ಈಗ ಇರುವುದು ಹಾವುಗಳು ಮಾತ್ರ. ಬನ ಓಟಿನಲ್ಲಿ ಗೆದ್ದವರ ಮಹಡಿಯಲ್ಲಿ, ಬನದ ಚಂದದ ದೈವ ಅದರ ಚಾವಡಿಯಲ್ಲಿ, ಇದು ನಾಗನಿಗೆ ಹಾಲೆರೆವ ಜಾಗ; ಈಗ ಸ್ನೇಹ. ಹಸುವಿನ ಮಾಂಸ ತಿನ್ನುವ ಹುಲಿಗಳಿಗೂ ಹಸುವಿನ ಹಾಲು ಕುಡಿವ ನಾಗರಿಗೂ'(೨೦೧೧, ಪು.೧೧೪) ಇತ್ತೀಚಿನ ದಿನಗಳಲ್ಲೂ ಇಲ್ಲಿಯ ಶಾಂತಿ ಕೆಟ್ಟು ಹೋಗುವ ಸನ್ನಿವೇಶ ನಿರ್ಮಾಣವಾಗುತ್ತಿರುವುದು, ಜನರ ಒಗ್ಗಟ್ಟು ಕೈಬಿಟ್ಟು ಹೋಗುತ್ತಿರುವುದು ಕವಿಯ ಕಣ್ಣಿಗೆ ಕಂಡಿರುವ ಸತ್ಯಗಳು. ಇದಕ್ಕೆ ಅವಕಾಶ ಬೇಡವೆನ್ನುವ ಕಳಕಳಿಯ ಜೊತೆಗೆ ತುಳುನಾಡಿನ ಕೆರೆ ಹಸುವಿನ ಮಾಂಸ ತಿನ್ನುವ ಹುಲಿಗೂ ಹಸುವಿನ ಹಾಲು ಕುಡಿಯುವ ನಾಗಗಳಿಗೂ ಸ್ನೇಹವುಂಟಾಗುವುದಕ್ಕೆ ಅವಕಾಶ ನೀಡದೇ ಹುಲಿ – ಹಸು ನೀರು ಕುಡಿವ ಕೆರೆಯಾಗಿಯೇ ಉಳಿಯಲಿ ಎಂದು ಹಾರೈಸುತ್ತಾರೆ.

ಈ ಮೇಲಿನ ಕವನದ ಅಧ್ಯಯನದ ಸಂದರ್ಭದಲ್ಲಿ ಪೇರೂರು ಜಾರು ಇವರು ಬರೆದಿರುವ 'ದೆಯ್ವೊಗ್ ಬೆರಕೆ ದೇವೆರ್' (ದೈವದೊಂದಿಗೆ ಬೆರೆತ ದೇವರು) ಕವನ ನೆನಪಿಗೆ ಬರುತ್ತದೆ. ತುಳುವಿನ ಅವನತಿಗೆ ತುಳುವನೇ ಕಾರಣವಾಗುವ ನೆಲೆಯನ್ನು ಈ ಕವನ ವ್ಯಕ್ತಗೊಳಿಸುತ್ತದೆ. ದೈವ ಬೇರೆ ದೇವರು ಬೇರೆಯೆಂಬ ಗ್ರಹಿಕೆ ಮನುಷ್ಯನದು. ಆಧುನಿಕತೆಯ ಯಾಂತ್ರಿಕ ಬದುಕಿನಲ್ಲಿ ಅವೆರಡೂ ಒಂದಾಗಿ ಬಿಟ್ಟಿವೆಯೆಂಬ ಧ್ವನಿ ಈ ಕವನದಲ್ಲಿದೆ. ಭಾಷೆ, ಸಂಸ್ಕೃತಿ, ಆಚರಣೆಗಳು ಬದಲಾಗುತ್ತಿರುವ ಬಗೆಯನ್ನು ಗುರುತಿಸುವ ಕವಿಯ ಆತಂಕ ಕವನದ ರೂಪ ಪಡೆದಿದೆ. 'ಗಾಳಿನೀರ್ ಅವ್ವೇ। ಆಂಡ ಬದಲಾಯೆ ತುಳುವೆ' (ಗಾಳಿ ನೀರು ಅದುವೆ ಆದರು ಬದಲಾದನಲ್ಲ ತುಳುವ) ಎಂದು ಆರಂಭವಾಗುವ ಈ ಕವನ ತುಳುವಿನಲ್ಲಾದ ಬದಲಾವಣೆಗಳನ್ನು ಪಟ್ಟಿ ಮಾಡುತ್ತದೆ. ದೆಯ್ವೊಗ್ ಬೆರಕೆ ದೇವೆರ್

ಬೂತದ ಮಂಚ ಬುಡಿಯೆ।ಇಲ್ಲಡ್  
ದೇವೆರೆ ಕೋಣೆ ಕಟ್ಟಿಯೆ  
ಕಾಲೊಗ ತಕ್ಕ ಕೋಲ ಇನ್ಡ್  
ದೆಯ್ವೊಗ್ ಕಲಸ ಕೊರಿಯೆ  
ಪೂಪಾಡುನಡೆ ಪೂತೆಸಲ್।ದಕಿಯೆ  
ಸಯ್ತಿನಗಲೇ ಮಿಸೆಲ್  
ಮಲ್ಲಾದಿಗೆದ ಪೂಪೊಲಿ  
ದೆಯ್ವದೆದುರೆ ಕುಸಲ್ (ದೆಯ್ವೊಗ್ ಬೆರಕೆ ದೇವೆರ್)

'ಭೂತದ ಮಂಚ ಬಿಟ್ಟ, ದೇವರಕೋಣೆ ಕಟ್ಟಿಸಿಟ್ಟ, ಕಾಲಕ್ಕೆ ತಕ್ಕಂತೆ ಕೋಲವನ್ನು ದೈವಗಳಿಗೂ ಕಲಶ ನೇಮ ಕೊಟ್ಟ, ಪುಷ್ಪಾರ್ಚನೆಯ ಬದಲು ಎಸಳು ಎಸೆದು ಸತ್ತವರ ಬೇರೆ ಮಾಡಿ ಬಿಟ್ಟು ಸಿರಿವಂತಿಕೆ ಹೂ ಸಿಂಗರದಿಂದ ದೈವಗಳ ಅಣಕಿಸಿಬಿಟ್ಟ', ಎಂಬಲ್ಲಿ ಹಿಂದಿನ ದೈವ ಶ್ರದ್ಧೆಯಿಲ್ಲದ ಭಕ್ತಿ, ಆಡಂಬರದ ಭಕ್ತಿ ಇಲ್ಲಿ ಚಿತ್ರಣಗೊಂಡಿದೆ. ಪುಷ್ಪಗಳಿಂದ ನಡೆಯುತ್ತಿದ್ದ ಅರ್ಚನೆ ಇಂದು ಪುಷ್ಪದ ಎಸಳಿನಿಂದ ಮಾತ್ರ ನಡೆಯುತ್ತಿದೆ. ಅದರಲ್ಲೂ ಸಿರಿವಂತಿಕೆ ಪ್ರಕಟಗೊಳ್ಳುವುದನ್ನು ಕವಿ ಗುರುತಿಸುತ್ತಾರೆ. 'ತುಳುವ ಧರ್ಮ ಮರೆತ, ಬೆರಕೆ ಭಾಷೆ ಮಾತನಾಡಿ ತುಳುವಿನಲ್ಲಿ ಸುಟ್ಟ' ಎಂಬ ಸಂಗತಿಯನ್ನು ಅತ್ಯಂತ ವಿಷಾದದೊಂದಿಗೆ ಇಲ್ಲಿ ಗುರುತಿಸಲಾಗಿದೆ.

ತುಳುನಾಡು ಸೊಬಗಿನಲ್ಲಿ ಸ್ವರ್ಗದಂತೆ, ಶಾಂತಿಯನ್ನು ಬಯಸುವ ಊರು, ಸಮನ್ವಯತೆಗೆ ಹೆಸರಾದ ಊರು. ದೇವಸ್ಥಾನ, ಚರ್ಚು, ದರ್ಗ ಎಲ್ಲವೂ ಒಂದೇ ಆಗಿರುವ

ಊರು, ಆಟ – ಕೂಟ ಯಕ್ಷಗಾನಕ್ಕೆ ಹೆಸರಾದ ನಾಡು. ಹಂಚು ಗೇರುಬೀಜದ ಉತ್ಪಾದನಾ ಸ್ಥಳ. ಅಧ್ಯಾತ್ಮವನ್ನು ಆಲೋಚಿಸುವುದಾದರೆ, ದೈವಭಕ್ತಿ – ಧರ್ಮಶಕ್ತಿಯನ್ನು ನಂಬಿರುವವರ ತವರು. ಕೇಳುವುದಕ್ಕೆ ಸುಂದರವಾದ ಭಾಷೆ, ನೋಡಿ ಆನಂದಿಸುವುದಕ್ಕೆ ಸುಂದರವಾದ ನಾಡು. ಇಂತಹ ನಾಡಿನ ಬಗ್ಗೆ ತಮಗಿರುವ ಅಭಿಮಾನವನ್ನು ಉಗ್ರಾಣ ಮಂಗೇಶರಾಯರು ಹೀಗೆ ಹೇಳುತ್ತಾರೆ,

> ಪರದೇಶೊ ಪರಧರ್ಮ ದೂರೊಡುಪ್ಪಡ ನಂಕ್
> ಪರೆಂಗಿ ಜನ ಸಾಂಗತ್ಯೊ ಬೊಡ್ಚಿ ಬೊಡ್ಚಿ,
> ಪರಪುರಪು ದಾಸ್ಯೊದಾ ಬಡ್ಕ್‌ಗಿಂಬುನೆ ಕೊರಂದೆ
> ವರಸನತನ ಧರ್ಮ ಒರಿಪಯರೆ ಬೆನ್ಕೊ (ತನ್ನ ಇಲ್ಲ್)

ಪರರ ನೀತಿಗೆ ಹರಿವ ಮನವನುರೆ ಬಿಗಿಹಿಡಿದು, ತರವಲ್ಲವದು ತನಗೆ ತಂದೆ ಬೋಧಿಸಿದ, ವರಸನಾತನಧರ್ಮವೆ ಮಾನ್ಯವೆಂದದನು ಧರಿಸಿ ಶಿರದಲಿ ಮರೆಯದೆ ಪೂರ್ವಿಕರನು. ಕೂಡು ಕುಟುಂಬ ತುಳುನಾಡಿನ ಹಿರಿಮೆ. ಹಾಗಾಗಿ ಜಗಳ ಬೇಡ, ಹೊಡೆದಾಟ ಬೇಡ, ಒಗ್ಗಟ್ಟಿನಿಂದ ಕೂಡಿ ತನ್ನ ನಾಡಿನ ಬಲ್ಮೆಗಾಗಿ ತನುಮನಧನವನ್ನು ಅರ್ಪಿಸಬೇಕೆಂಬ ಹಾಗೂ, ಆ ಮೂಲಕ ಸನಾತನ ಧರ್ಮದ ರಕ್ಷಣೆಯಾಗಬೇಕೆಂಬ ಕಳಕಳಿಯ ಕರೆ ಇಲ್ಲಿದೆ. ಹಾಗೆಯೇ ಪರದೇಶದ ಆಕರ್ಷಣೆಗೆ ಒಳಗಾಗದೆ ಪರಸಂಸ್ಕೃತಿಗೆ ಶಿರಬಾಗದೆ ತಮ್ಮ ಅಸ್ಮಿತೆಯನ್ನು ಕಾಪಾಡಿಕೊಂಡು ತಲೆಯೆತ್ತಿ ನಡೆಯಬೇಕೆಂಬ ಆಶಯವೂ ಇಲ್ಲಿದೆ.

ತುಳುವಮ್ಮನನ್ನು ಒಲಿಸಿಕೊಳ್ಳುವುದಕ್ಕೆ ಮುಗ್ಧ ಭಕ್ತಿಯ ಒಂದು ಹೂಮಾಲೆ ಸಾಕೆಂಬ ಅಭಿಪ್ರಾಯ ಪ್ರಮೋದಾ ಕೆ. ಸುವರ್ಣರದು. ಇಲ್ಲಿ ಅರಳುವ ಹೂಗಳ ಪರಿಮಳ, ಘಟ್ಟದಿಂದಿಳಿದು ಬರುವ ಸಿಹಿನೀರು, ಧನಧಾನ್ಯಗಳ ರಾಶಿ ಕವಯಿತ್ರಿಗೆ ರೋಮಾಂಚನವುಂಟು ಮಾಡಿದೆ. ಪುಣ್ಯನದಿಗಳ ಹರಿವು, ಪುಣ್ಯಕ್ಷೇತ್ರಗಳ ಸಾಲು ತುಳುನಾಡಿಗೆ ಮಾನ್ಯತೆಯನ್ನು ತಂದುಕೊಟ್ಟಿದೆ. ಧರ್ಮಸ್ಥಳ, ಸರ್ಪಸಂಸ್ಕಾರಕ್ಕೆ ಖ್ಯಾತಿವೆತ್ತ ಸುಬ್ರಹ್ಮಣ್ಯ, ಉಡುಪಿಯ ಶ್ರೀಕೃಷ್ಣದೇವಾಲಯ, ತಾಯಿ ಅನ್ನಪೂರ್ಣೇಶ್ವರಿಯ ಕಟೀಲು ಕ್ಷೇತ್ರ ಇವೆಲ್ಲ ಭಕ್ತರನ್ನು ಸದಾ ಆಕರ್ಷಿಸುವಂತಹ ಪುಣ್ಯಕ್ಷೇತ್ರಗಳು. ಮೂಡಣದ ಘಟ್ಟ, ಪಡುವಣದ ಕಡಲು ಈ ನಾಡಿಗೆ ವಿಶೇಷ ಶೋಭೆ ನೀಡಿದೆ. ಕವಿಮುದ್ದಣ, ರತ್ನಾಕರವರ್ಣಿ, ಪಾರ್ತಿಸುಬ್ಬನೇ ಮೊದಲಾದವರಿಗೆ ಜನ್ಮ ನೀಡಿದ ನಾಡು. ಇಂತಹ ನಾಡಿನಲ್ಲಿ ನಿತ್ಯ ಸುಖ ಶಾಂತಿ ನೆಲೆಸಲೆಂಬ ಹಾರೈಕೆಯನ್ನು ಎಲ್ಲ ಕವಿಗಳು ಮಾಡಿದ್ದಾರೆ.

ಮಾವು ಮಲ್ಲಿಗೆಗೆ ತನ್ನ ಕಾವ್ಯದ ಮೂಲಕ ಶ್ರೇಷ್ಠತೆಯನ್ನು ತಂದು ಕೊಟ್ಟವನು ಆದಿಕವಿ ಪಂಪ. ತುಳುನಾಡಿನ ಕವಿಗಳೂ ಮಲ್ಲಿಗೆಯನ್ನು ವಿಶೇಷವಾಗಿ ಗುರುತಿಸಿದ್ದಾರೆ. ಕವಿಗೆ ತುಳುವ ತಲೆಗೆ ತಾಜಾ ಮಲ್ಲಿಗೆ ಮುಡಿಸುವ ಬಯಕೆ. ಇದು ಅಂದಚಂದದ ಬೂಟಾಟಿಕೆಯ ಹೂವಲ್ಲ. ಆಘ್ರಾಣಿಸಿದ ಮೂಗಿನ ಮೆಯ್ ರೋಮಾಂಚನಗೊಳ್ಳುವ ಇಂಪಿನ ಕಂಪಿನ ತಾಜಾ ಮಲ್ಲಿಗೆ. ಇದರ ಮೇಲೆ ಕವಿಗೆ ವಿಶೇಷ ಪ್ರೀತಿ. ಅದಕ್ಕಾಗಿಯೇ ಕವಿ 'ಒತ್ತಿಲಿನ ಚಿಗುರೆಂಬ ತಾತ್ಸಾರ ಮಾಡದಿರಿ ಪಕ್ಕದೊಳಿರಿಸಿಕೊಳ್ಳಿ, ಕಸ್ತೂರಿ ಮೃಗದಂತೆ ಮಡಿಲೊಳಿದ್ದುದ ತಿಳಿಯದೆ ಅಳುಕದಿಂ' (ಮಂಗಳೂರ ಮಲ್ಲಿಗೆ) ಎನ್ನುತ್ತಾರೆ ಕವಿ. ತುಳುವ ತಲೆಗೆ ಮಂಗಳೂರ ಮಲ್ಲಿಗೆ ಮುಡಿಸುವ ಕವಿ ಬಯಕೆ ಇಲ್ಲಿ ಮೂಡಿ ಬಂದಿದೆ.

ಮುಂಜಾವದ ಕೋಳಿಯ ಕೂಗಿನಲ್ಲೂ ತಾಯ್ನೆಲದ ಬಣ್ಣನೆಯನ್ನು ಮಾಡಿದ ಕವಿ ಮುದ್ದು ಮೂಡುಬೆಳ್ಳೆಯವರು. ತುಳುನಾಡನ್ನು ವರ್ಣಿಸುತ್ತಾ, 'ಬೆಳೆವ ರಭಸಕ್ಕೆ ಕೊಚ್ಚಿ ಹೋಗದಿರಲಿ ನೆಲದ ಕಂಪು. ಹೆತ್ತವ್ವೆಯನ್ನೂ ಹುಟ್ಟಿದೂರನ್ನು ಮರೆಯದ ಬದುಕು ತುಳುವರದಾಗಲಿ' ಎಂದು ಆಶಿಸುತ್ತಾರೆ. ತುಳು ಸಂಸ್ಕೃತಿಯ ಮೇಲಿನ ಆಕ್ರಮಣ ಕವಿಗಳಿಗೆ ಸಹ್ಯವಾಗುವುದಿಲ್ಲ. ನಾಡ ಜನರೆಂದರೆ ಕೊಟ್ಟ ಮಾತಿಗೆ ತಪ್ಪಿ ನಡೆಯದವರು. ಸುಟ್ಟರೂ ಛಲ ಬಿಡದವರು. ದಿಟ್ಟತನದಿಂದ ಮುನ್ನಡೆಯುವವರು. ಹಾಗೆಯೇ ಪರರ ನೋವಿಗೆ ಸ್ಪಂದಿಸುವ ಗುಣವುಳ್ಳವರು. ಇಂತಹ ನಾಡಲ್ಲಿ ನಮ್ಮೊಳಗೆ ಐಕ್ಯವಿರಬೇಕು. ಕೊಡಲಿ ರಾಮನ ಎದೆಗಾರಿಕೆ ತುಳುವರಲ್ಲಿ ಅಳಿಯದೇ ಇರಲಿ ಎಂಬ ಸದಾಶಯದೊಂದಿಗೆ ಕವಿಗಳು ತುಳುನಾಡನ್ನು ಅಭಿಮಾನದಿಂದ ವರ್ಣಿಸಿದ್ದನ್ನು ಕಾಣಬಹುದು.

ತುಳುನುಡಿಯನ್ನೂ ಕವಿಗಳು ಗುರುತಿಸಿದ್ದಾರೆ. ತುಳುನಾಡಿನಲ್ಲಿ ಸರ್ವತ್ರ ಬಳಕೆಯಲ್ಲಿರುವ ಭಾಷೆ ತುಳು. ಇಲ್ಲಿ ಹೆಚ್ಚಿನವರು ದ್ವಿಭಾಷಿಗಳು. ತುಳುವಿನಲ್ಲೂ ಇಲ್ಲಿ ಪ್ರಾದೇಶಿಕ ವ್ಯತ್ಯಾಸಗಳನ್ನು ಕಾಣಬಹುದು. ಸುನೀತಾ ಶೆಟ್ಟಿಯವರು 'ಮುಗಿಲಿ ದೀಪಿನ ಪೊರ್ತು' ಕವನದಲ್ಲಿ ತುಳುನುಡಿಯನ್ನು ವಿಶಿಷ್ಟವಾಗಿ ವರ್ಣಿಸಿದ್ದಾರೆ. 'ಬಾಸೆದ ಒಸರ್‌ಡ್ ಅಮುರ್ತದ ಸಬಿ ಉಂಡು' (ಭಾಷೆಯ ಒಸರಲ್ಲಿ ಅಮೃತದ ಸವಿಯಿದೆ) ಕವಯಿತ್ರಿಯ ಪ್ರಕಾರ ತುಳುನುಡಿ ಅಮೃತದ ಸವಿಯಿದ್ದಂತೆ. ಇದೇ ಆಲೋಚನೆ ಕಯ್ಯಾರರ 'ಸಾರೊ ಎಸಳ್‌ದ ತಾಮರೆ' ಕವನದಲ್ಲಿಯೂ ಅನಾವರಣಗೊಂಡಿದೆ.

ಏತ್ ಪೊರ್ಲುದ ಬಾಸೆ ನಮ ತುಳು,
ಸಾರೊ ಎಸಳ್‌ದ ತಾಮರೆ, ಪಂಡಿ ಬಾಯಿಟ್ ಕೇಂಡ್

ಕೆಬಿಟ್ ಉರ್ಕುಂಡಮೃತೊದ ನೊರೆ ನೊರೆ (ಸಾರೊಎಸಳದ ತಾಮರೆ)

'ಏನು ಸೊಬಗಿನ ಭಾಷೆ ಸಿರಿ ತುಳು ಸಾವಿರ ದಳದ ತಾವರೆ, ನುಡಿವ ಬಾಯಲಿ ಕೇಳ್ವ ಕಿವಿಯಲಿ ಉಕ್ಕುವುದು ಸುಧೆ ನೊರೆನೊರೆ' ಈ ಕವನ ತುಳು ಭಾಷೆಯ ಸೌಂದರ್ಯವನ್ನು, ಸವಿಯನ್ನು, ಸತ್ವವನ್ನು ವರ್ಣಿಸುತ್ತದೆ. ಜೊತೆಗೆ ವಿಶೇಷ ಅರ್ಥ ಪರಂಪರೆಯನ್ನು ಹೊಂದಿದೆ. ತಾವರೆಯ ದಳಗಳನ್ನು ಬಿಡಿಸಿದಾಗಲೂ, ಅರ್ಥ ಬಿರಿದಾಗಲೂ ಅದಕ್ಕೆ ವಿಶೇಷ ಸೌಂದರ್ಯವಿದೆ. ಮಾತ್ರವಲ್ಲ, ಭಾರತೀಯ ಅಧ್ಯಾತ್ಮಿಕಪರಂಪರೆಯಲ್ಲಿ ಈ ಹೂವಿಗೆ ವಿಶೇಷ ಸ್ಥಾನವಿದೆ. ಇದು ನೋಡುವುದಕ್ಕೂ ಚಂದ. ಸಂತಸದ, ಶಾಂತಿಯ, ಸಂಕೇತವಾಗಿ ಹೂಗಳ ರಾಜನಾಗಿ ಮೆರೆದಿದೆ. ಹೆಣ್ಣಿನ ವರ್ಣನೆಯ ಮಾತು ಬಂದಾಗಲೂ ಇದಕ್ಕೆ ವಿಶೇಷ ಮಹತ್ವ ನಾನಾ ಉದ್ದೇಶಗಳಿಂದಾಗಿ ನಾಡು ಬಿಟ್ಟು ದೂರ ಸರಿದವರೂ 'ಅಕ್ಕಾ', 'ಅಣ್ಣಾ' ಎನ್ನುವುದರೊಂದಿಗೆ ತುಳುನಾಡಿನ ಭಾವನಾತ್ಮಕ ಸಂಬಂಧದಿಂದ ಆಚೆ ಸರಿಯುವುದಿಲ್ಲವೆಂಬ ಭಾವವೂ ಕವನದಲ್ಲಿ ವ್ಯಕ್ತಗೊಳ್ಳುತ್ತದೆ. ಎನ್. ಪಿ. ಶೆಟ್ಟಿಯವರ 'ತುಳು ಮಣ್ಣ್‌ದ ಜೋಕುಲು' ಎಂಬ ಕವನ ತುಳುನುಡಿಯ ಶೋಭೆಯನ್ನು ಗುರುತಿಸುತ್ತದೆ. ಕಾಣುವ ಬೆಳಕಿನಲ್ಲಿ, ಬೀಸುವ ಗಾಳಿಯಲ್ಲಿ, ನಡೆಯುವ ಭೂಮಿಯಲ್ಲಿಯೂ, ಹರಿಯುವ ನದಿಯಲ್ಲಿ ತುಳುವಿನ ಕಲರವ ಕೇಳಿಬರುತ್ತದೆ. ತುಳುವರದು ಕೃಷಿ ಮೂಲ ಸಂಸ್ಕೃತಿ. ಹಾಗಾಗಿ ತುಳುವರಿಗೂ ಪ್ರಕೃತಿಗೂ ಆಪ್ಯಾಯಮಾನ ಸಂಬಂಧ. ಅಂತೆಯೇ ತುಳು ಮಾತು ಬೆಳಕಿನಂತೆ, ಗಾಳಿಯಂತೆ, ನೀರಿನ ಜುಳು ಜುಳು ನಾದದಂತೆ ಕಾಣಿಸುತ್ತದೆ.

ತುಳುನಾಡಿನ ಕಲ್ಪನೆಯ ಜೊತೆಯಲ್ಲಿ ಅನ್ಯರ ಆಕ್ರಮಣದ ನೆಲೆಯನ್ನು ಗಮನಿಸಲಾಗಿದೆ. ನಾಡನ್ನು ತೊರೆದವರೂ ಬದುಕಿನ ಕೊನೆಯನ್ನು ಈ ನಾಡಿನಲ್ಲೇ ಕಳೆಯಬೇಕೆಂಬ ಅಪೇಕ್ಷೆ ವ್ಯಕ್ತಪಡಿಸಿದ್ದನ್ನೂ ಗಮನಿಸಲಾಯಿತು. ಇದೇ ಮಾತು ಭಾಷೆಗೂ ಅನ್ವಯಿಸುತ್ತದೆ. ನಾಡಿದ್ದರೆ ನುಡಿ; ನುಡಿಯಿದ್ದರೆ ನಾಡು. ಅಮಾವಾಸ್ಯೆ ಬಂದಾಗ ಹುಣ್ಣಿಮೆ ನಿಲ್ಲುವುದಿಲ್ಲ. ಭಾಷೆ ಹೋದಾಗ ಪರಂಪರೆ, ಬದುಕು ಯಾವುದೂ ಉಳಿಯುವುದಿಲ್ಲ. ತುಳುಭಾಷೆ ಇಂಗ್ಲೀಷ್ ಬೊಳ್ಳಕ್ಕೆ ಕೊಚ್ಚಿ ಹೋದೀತೆಂಬ ಭಯ ತುಳು ಕವಿಗಳದ್ದು. ಹಾಗಾಗಿ ತುಳುನಾಡನ್ನು ಕಾಯುವಂತೆ, ಭಾಷೆಯನ್ನು ಉಳಿಸುವಂತೆ ಭಗವಂತನಲ್ಲಿ ಪ್ರಾರ್ಥಿಸುವುದನ್ನು ಕಾಣಬಹುದು.

'ದೇಶ ಕಟ್ಟೊಡು ಭಾಷೆ ಬುಳೆಪೊಡು' ಕೇಶವ ಬಂಗೇರರ ಕವನ. ಕವನದ ಶೀರ್ಷಿಕೆಯೇ ಸೂಚಿಸುವಂತೆ ನಾಡು ಮತ್ತು ನುಡಿಯ ಉಳಿವಿಗಾಗಿ ಕವಿ ಕರೆ ಕೊಡುವುದನ್ನು ಈ ಕವನ ಅಭಿವ್ಯಕ್ತಗೊಳಿಸುತ್ತದೆ. ದೇಶ ಕಟ್ಟಬೇಕು. ಭಾಷೆ ಬೆಳೆಯಬೇಕು. ತುಳುವ ದೇಶವನ್ನು,

ತುಳುಭಾಷೆಯನ್ನು ತುಳುನಾಡ ಮಕ್ಕಳಾದ ನಾವು ಮರೆಯಬಾರದೆಂಬ ಕಳಕಳಿಯ ವಿನಂತಿ ಇಲ್ಲಿದೆ. ಹರಿವ ಕುಮಾರಧಾರೆಯಲ್ಲಿ, ನೇತ್ರಾವತಿಯಲ್ಲಿ, ಫಲ್ಗುಣಿಯಲ್ಲಿ ಮೆಯ್ಮನಸ್ಸು ತೊಳೆದು ಅಂತರಂಗಶುದ್ಧಿಯಿಂದ ದೇಶವನ್ನು ಉಳಿಸುವತ್ತ ಪ್ರಯತ್ನ ಮಾಡಿ. ಪರದೇಶದ ಸಂಸ್ಕೃತಿಗೆ, ಸಂಪತ್ತಿಗೆ ದಾಸರಾಗಬೇಡಿರೆಂಬ ಹಂಬಲವನ್ನು ಕವಿ ವ್ಯಕ್ತಪಡಿಸಿದ್ದಾರೆ.

ತುಳುನಾಡು ಕರಾವಳಿ ತೀರದ ಪ್ರದೇಶ, ಹಾಗಾಗಿ ಇಲ್ಲಿಯ ವಾತಾವರಣ ಕಲ್ಪನೆಗೆ ನಿಲುಕದ್ದು. ಮಳೆ ಸುರಿಯುತ್ತಿದ್ದರೂ ಬೆವರುವ ಬದುಕು. ಹಾಗೆಯೇ ತಿಂಡಿತಿನಿಸುಗಳಲ್ಲೂ ವೈಶಿಷ್ಯವಿದೆ. ಚಿದಂಬರ ಬೈಕಂಪಾಡಿಯವರ 'ತುಳುನಾಡ್‌ಗ್ ಎದ್ಕೊನುವೆ' ಕವನದಲ್ಲಿ ತುಳುನಾಡಿನ ತಿಂಡಿಗಳ ಪಟ್ಟಿಯೇ ಇದೆ. 'ತೇವು ತಿಂತರ, ಕನಿಲೆ ತೂತರ, ಕಂಚಲದ ಕಜಿಪು, ಬಂಗುಡೆ, ಬೂತಾಯಿ, ಮಾಂಜಿ ..... ತಿನಸ್ ತಿಂದ್‌ದ್ ತೂಲೆಯೇ'. ಮಂಗಳೂರು ಮಲ್ಲಿಗೆ ಮತ್ತು ಮೀನಿಗೆ ಪ್ರಸಿದ್ಧವಾದದ್ದು. ಒಂದು ಅತ್ಯಂತ ಕಂಪಿನಿಂದ ಮೂಗರಳಿಸುವಂತಹದ್ದಾದರೆ ಇನ್ನೊಂದು ಕಟುವಾಸನೆಯಿಂದ ಮೂಗು ಮುಚ್ಚುವಂತಹದ್ದು. ಆದರೂ ತುಳುನಾಡಿಗರು ಎರಡನ್ನೂ ತಮ್ಮ ಬದುಕಿನ ಭಾಗವಾಗಿ ಸ್ವೀಕರಿಸಿದ್ದಾರೆ. ಕವಿ ಎಸ್.ಪಿ. ಮಂಚಿಯವರು ಮಲ್ಲಿಗೆಯ ಸಂಕೇತದೊಂದಿಗೆ ತುಳುವರ ವ್ಯಕ್ತಿತ್ವವನ್ನು ಗುರುತಿಸಿದ್ದಾರೆ. ತುಳುಭಾಷೆಯಲ್ಲೂ ಇತರ ಭಾಷೆಗಳಂತೆಯೇ ಪ್ರಾದೇಶಿಕ ವ್ಯತ್ಯಾಸಗಳಿವೆ. ಬ್ರಾಹ್ಮಣತುಳು, ಬ್ರಾಹ್ಮಣೇತರ ತುಳು, ಅದರಲ್ಲೂ ಉಡುಪಿ ತುಳು, ಪುತ್ತೂರು ತುಳು, ಕಾರ್ಕಳದ ತುಳು, ಮಂಗಳೂರು ತುಳು ಪ್ರಾದೇಶಿಕ ವ್ಯತ್ಯಾಸವನ್ನೂ ಒಳಗೊಂಡಿದೆ. ಕಾಸರಗೋಡಿನ ತುಳು ಮಲಯಾಳದ ಪ್ರಭಾವಕ್ಕೊಳಗಾದ ಭಾಷೆ. ಈ ಕವಿಗಳಿಗೆ ನಾಡು ಕೇವಲ ತುಳುನಾಡಲ್ಲ; ಕಯ್ಯಾರರ ಮಾತಿನಂತೆ ಕರ್ನಾಟಕಾಂತರ್ಗತವಾದ ತುಳುನಾಡು. ಈಕೆ ಭಾರತಮ್ಮನ ಕಿರಿಯ ಮಗಳು. ಆಶುಕವಿಯಾಗಿರುವ ಪುತ್ತಿಗೆ ಈಶ್ವರ ಭಟ್ಟರು ಬ್ರಾಹ್ಮಣ ತುಳುವಿನಲ್ಲಿ ಭಾಷೆಯ ಬಗೆಗೆ ಮಾತನಾಡುತ್ತಾರೆ.

> ಚಪ್ಪೆ ಭಾಷೆ ತುಳೂಂತ್ ಎಣ್ಣ್‌ತ್,
> ಪರ್ಪಿ ಪೇರ್‌ನ್ ದಂಡೊ ಅಂಪಡ,
> ಉರ್ಪೆಲುಂಪುದೊ ತೆಳಿತೊ ಸಾರ ತುಳು ಭಾಷೆ,
> ಬೆಪ್ಪೆ ಪಣ್ಣೆರ್ ಪಣ್ಣ್‌ತ್ತೆಣ್ಯಡ,
> ಸುರ್ಪೆ ಪೋವಾ ಪಣ್ತ್ ನೆನಪಡ,
> ಅಪ್ಪೆ ತುಳು ದೇವತೆನೊ ನಡೆನುಡಿ ಮದೆಪರಾವನ್‌ಣೆ (ಮಾಣಿಗೆರಡ್ ಪಾತೆರೊ)

ಇದರ ಅನುವಾದ ಹೀಗಿದೆ, 'ಸಪ್ಪೆ ಬಾಷೆಯು ತುಳುವು ಎನುತಲಿ ತಿಪ್ಪೆಗೆಸೆಯುತ ಕುಡಿವ ಹಾಲನು ಉಪ್ಪು ತಿಂದರಮನೆಗೆರಡು ಬಗೆಯದಿರು ಕೊನೆಯತನಕ. ದಪ್ಪ ಕುಚ್ಚಲು ಗಂಜಿ ತಿಳಿಯದು ಕೊಪ್ಪರಿಗೆಯೊಳಿರುವ ಕಸರವು ಚಿಪ್ಪಿನಲಿ ಹುದುಗಿರುವ ಮುತ್ತದು ಬೆಪ್ಪ ತಿಳಿಯೆಲವೊ' ತುಳುಭಾಷೆಯೆಂದರೆ ಅತ್ಯಂತ ವಿಶಿಷ್ಟವಾದುದು. ಹೇಗೆಂದರೆ ಕುಚ್ಚಿಲಕ್ಕಿಯ ಗಂಜಿಯಂತೆ, ಕೊಪ್ಪರಿಗೆಯೊಳಗಿನ ಚಿನ್ನದಂತೆ, ಚಿಪ್ಪಿನೊಳಗಣ ಮುತ್ತಿನಂತೆ ಅನ್ನುವುದು ಅರ್ಥಪೂರ್ಣವಾದ ಹೋಲಿಕೆಗಳು. ಬಲ್ಲವನೇ ಬಲ್ಲ ಬೆಲ್ಲದ ಸವಿಯ ಎಂಬಂತೆ ತಿಳಿದವನಿಗೆ ಮಾತ್ರ ಗೊತ್ತು ಆ ಭಾಷೆಯ ಸತ್ವ. ತುಳುನಾಡನ್ನು ಕವಿಗಳು ವಿಭಿನ್ನ ದೃಷ್ಟಿಕೋನಗಳಿಂದ ನೋಡಿದ್ದಾರೆ. ಒಬ್ಬೊಬ್ಬ ಕವಿಯ ದರ್ಶನ ಒಂದೊಂದು ಬಗೆ. ಕಳಕಳಿಯ ಮನವಿ, ಹೊಗಳಿಕೆ, ತೆಗಳಿಕೆ, ತಲ್ಲಣ, ಆತಂಕ ಎಲ್ಲವೂ ಕವನಗಳ ಮೂಲಕ ವ್ಯಕ್ತಗೊಂಡಿವೆ. ಇದರ ಆಳದಲ್ಲಿರುವುದು ನಾಡು-ನುಡಿಯ ಬಗೆಗಿನ ಪ್ರೀತಿ, ಆದರ, ಗೌರವ. ತಮಗೆ ನಾಡತಾಯಿ ನೀಡಿದ ಜೀವಶಕ್ತಿಯನ್ನು ಕವಿಗಳೆಲ್ಲ ನೆನಪಿಸಿಕೊಂಡಿದ್ದಾರೆ.

**ಕೊಡಗು ಮತ್ತು ನಾಡು-ನುಡಿ**

ಮಡಿಕೇರಿ, ವಿರಾಜಪೇಟೆ ಮತ್ತು ಸೋಮವಾರ ಪೇಟೆ ಎಂಬ ಮೂರು ತಾಲೂಕುಗಳನ್ನು ಒಳಗೊಂಡಿರುವ ಚಿಕ್ಕ ಜಿಲ್ಲೆ ಕೊಡಗು. ದಕ್ಷಿಣ ಕಾಶ್ಮೀರವೆಂದು ಗುರುತಿಸಿಕೊಂಡ ಇದು ಉತ್ತರದಲ್ಲಿ ಹೇಮಾವತಿ, ದಕ್ಷಿಣದಲ್ಲಿ ಬ್ರಹ್ಮಗಿರಿ, ಪೂರ್ವದಿಂದ ಕುಶಾಲ ನಗರ, ಹಾಗೂ ಪಶ್ಚಿಮಕ್ಕೆ ಸಂಪಾಜೆಯವರೆಗೆ ವಿಸ್ತರಿಸಿಕೊಂಡಿದೆ.

ಕೊಡಗು ಬೆಟ್ಟಗುಡ್ಡಗಳಿಂದ ಕೂಡಿ ಸಸ್ಯ ಸಂಪತ್ಸಮೃದ್ಧಿಯನ್ನು ಒಳಗೊಂಡ ಸುಂದರ ಜಿಲ್ಲೆ. ಈ ಜಿಲ್ಲೆಯ ಹೆಸರಾದ 'ಕೊಡಗು' ಪದದ ಮೂಲವನ್ನು ತಿಳಿದಾಗ 'ಕೊಡಗು' ಎನ್ನುವುದು 'ಕುಡುಮಲೆನಾಡು' ಎಂಬುದರಿಂದ ರೂಪಾಂತರಗೊಂಡ ಶಬ್ಧ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ 'ಕುಡುಮಲೆನಾಡು' ಅಥವಾ 'ಕುಡುಕಂ' ಎಂಬ ಉಲ್ಲೇಖ ಇದೆ. ಈ ಪ್ರದೇಶವು ಎತ್ತರ ತಗ್ಗುಗಳಿಂದ ಮತ್ತು ಅರಣ್ಯ ಭಾಗದಿಂದ ಕೂಡಿದೆ. ಕಡಿದಾದ ಬೆಟ್ಟಗಳಲ್ಲಿ ದಟ್ಟವಾದ ಕಾಡು ಪ್ರದೇಶವನ್ನು ಹೊಂದಿದೆ. ಹೀಗಾಗಿ ಕೊಡಗು ಜಿಲ್ಲೆಗೆ 'ಕೊಡಿಮಲೆನಾಡು' ಎಂಬ ಹೆಸರು ಬಳಕೆಯಲ್ಲಿದ್ದು ಅದರಿಂದ 'ಕೊಡಗು ದೇಶ' ಎಂದಾಗಿದೆ ಎನ್ನುವುದಿದೆ.

ಮತ್ಸ್ಯ ದೇಶಾಧಿಪತಿ ಚಂದ್ರವರ್ಮ ಎಂಬುವವನು ಇಲ್ಲಿ ರಾಜ್ಯಭಾರ ಮಾಡಿದುದರಿಂದ ಮತ್ಸ್ಯದೇಶ ಎಂದು ಹೆಸರಾಯಿತೆಂಬ ಐತಿಹ್ಯವಿದೆ. ಬ್ರಹ್ಮನು ಬೆಟ್ಟದಲ್ಲಿ ಕೆಲಕಾಲ ನಿಂತು ವಿಷ್ಣುವನ್ನು ಪೂಜಿಸಿದುದರಿಂದ ಇಲ್ಲಿಗೆ ಬ್ರಹ್ಮಕ್ಷೇತ್ರವೆಂಬ ಹೆಸರು ಬಂತೆಂಬ ಕಥನವೂ ಇದೆ.

ಕೊಡಗಿನ ಮೂಲರಾಜನಾದ ಕದಂಬ ವಂಶದ ಚಂದ್ರವರ್ಮ ಅರಸನ ಸಂತತಿಯವರು ಕೊಡಗು ದೇಶದ ಭೂಭಾಗವನ್ನು ತಮ್ಮ ಶಕ್ತಿಯುತವಾದ ಉಗುರುಗಳಿಂದ ಅಗೆದು ಫಲವತ್ತಾಗಿಸಿದರಂತೆ. ಕ್ರೋಢ (ಹಂದಿ)ಗಳಂತೆ ನೆಲವನ್ನು ಅಗೆದು ಹಸನು ಮಾಡಿದ್ದರಿಂದ ಕ್ರೋಡ ಜನರು ಎಂಬ ಹೆಸರು ಬಂತು.

ಕರ್ನಾಟಕದ ಅವಿಭಾಜ್ಯ ಅಂಗವಾದ ಕೊಡಗಿಗೆ ತನ್ನದೇ ಆದ ಭವ್ಯ ಇತಿಹಾಸವಿದೆ. ಇದು ಕ್ರಿ.ಶ. ೧೦ನೇ ಶತಮಾನದಲ್ಲಿ ಗಂಗರಸರ ಆಳ್ವಿಕೆಗೆ ಒಳಪಟ್ಟಿತೆಂದು ಶಾಸನಗಳಿಂದ ತಿಳಿದು ಬರುತ್ತದೆ. ಗಂಗರಿಂದ ಆರಂಭಿಸಿ ಚೋಳ, ಹೊಯ್ಸಳ, ಕೊಂಗಾಳ್ವ, ಚೆಂಗಾಳ್ವ ನಾಯಕರು, ಒಡೆಯರು ಆಳಿದರು. ನಂತರ ೧೬೩೨ ರಿಂದ ಮುದ್ದುರಾಜ –ದೊಡ್ಡ ವೀರಪ್ಪ, ಚಿಕ್ಕ ವೀರಪ್ಪ ಕೊಡಗನ್ನ ಆಳಿದರು. ನಂತರ ದೊಡ್ಡ ವೀರಪ್ಪನ ಪುತ್ರ ನಂಜರಾಜನ ಮಗ ಮುದ್ದಯ್ಯರಾಜ ಆಳ್ವಿಕೆ ನಡೆಸಿದನು. ಈ ಸಮಯದಲ್ಲಿ ಹೈದರಾಲಿ ದಾಳಿ ನಡೆಸುತ್ತಾನೆ. ಲಿಂಗ ರಾಜೇಂದ್ರನ ಮಗ ಚಿಕ್ಕವೀರ ರಾಜೇಂದ್ರ ಕೊಡಗನ್ನು ಆಳಿದ ಕೊನೆಯ ರಾಜ. ಕ್ರಿ.ಶ. ೧೮೩೪ ರಿಂದ ಕೊಡಗು ಬ್ರಿಟಿಷರ ಆಳ್ವಿಕೆಗೆ ಒಳಪಡುತ್ತದೆ.

೧೯೫೨ರಲ್ಲಿ ಭಾರತ ಸಂವಿಧಾನ ಕೊಡಗನ್ನು 'ಸಿ' ಗುಂಪಿನ ರಾಜ್ಯವಾಗಿ ಮಾನ್ಯತೆ ಮಾಡಿತು. ೧೯೫೬ರ ನವೆಂಬರ್ ೧ಕ್ಕೆ ಕೊಡಗು ಕರ್ನಾಟಕದೊಂದಿಗೆ ವಿಲೀನಗೊಂಡಿತು. ಹೊರಜಗತ್ತಿಗೆ ಕೊಡಗೆಂದರೆ ಕೊಡವ ಭಾಷೆಯನ್ನು ಮಾತ್ರ ಆಡುವ ಜನರಿದ್ದಾರೆ ಎಂಬ ನಂಬಿಕೆ ಇದೆ. ಇಲ್ಲಿ ಕೊಡವ, ಅರೆಭಾಷೆ, ತುಳು, ಹವ್ಯಕ, ಮಲೆಯಾಳಂ, ತಮಿಳು, ತೆಲುಗು, ಬ್ಯಾರಿ ಹೀಗೆ ಬೇರೆ ಬೇರೆ ಭಾಷೆಗಳನ್ನಾಡುವ ಜನವಾಸಿಸುತ್ತಿದ್ದಾರೆ.

ಕೊಡವ ಭಾಷೆಯನ್ನು ಮಾತನಾಡುವ ೧೮ ಜನಸಮುದಾಯ ಕೊಡಗಿನಲ್ಲಿದ್ದಾರೆ. ಇವರಲ್ಲಿ ಹಿಂದುಳಿದ ವರ್ಗದವರು, ಪರಿಶಿಷ್ಟ ಜಾತಿಯವರು ಇದ್ದಾರೆ. ಕೊಡವ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬಂದ ಈ ಸಮುದಾಯಗಳು ಈಗ ವಿನಾಶದ ಅಂಚಿನಲ್ಲಿವೆ. ಕೊಡಗು ಹೆಗ್ಗಡೆ, ಅಮ್ಮ ಕೊಡವ, ಪಿರಿ, ಕಣಿಯ, ಕುಡಿಯ, ಕೆಂಬಟ್ಟಿ, ಕೊಯವ, ಕೋಲೆಯ, ಗೊಲ್ಲ, ಕೊಡವ ನಾಯರ್, ಕೊಡವ ಹಜಾಮ, ತಣಿಕ, ಬಣ್ಣ, ಬಾಣಿಯ, ಕೊಡವ ಮಡಿವಾಳ, ಮಲಿಯ, ಮೇದ, ಭೂಮೆಪಟ್ಟಮ, ಕಾಪಾಳ ಮುಂತಾದವರು ಕಡಿಮೆ ಇದ್ದು ಅವರು ಕೊಡವ ಭಾಷೆ ಆಚಾರ ಸಂಸ್ಕೃತಿಯನ್ನು ನೆಚ್ಚಿಕೊಂಡು ಬದುಕಿ ಬಾಳುತ್ತಿದ್ದಾರೆ.

ಕೊಡವರು ಹುಟ್ಟಿನಿಂದಲೇ ಧೀರರು ಹಾಗೂ ಸಾಹಸಿಗಳು, ಶೌರ್ಯ ಪರಂಪರೆಯನ್ನು ಹೊಂದಿದವರು. ರಾಜರ ಕಾಲದಲ್ಲಿ ತಮ್ಮ ನಾಡನ್ನು ಕಾಪಾಡುವಲ್ಲಿ ನೆರೆಹೊರೆಯ ರಾಜರೊಡನೆ ಹೋರಾಡಿ ಶಕ್ತಿ ಪ್ರದರ್ಶನ ಮಾಡಿದ್ದಾರೆ. ಇಲ್ಲಿನ ಕೊಡವರು, ಗೌಡರು ಬ್ರಿಟಿಷರ ಆಳ್ವಿಕೆಯ ನಂತರ ಸ್ವಾತಂತ್ರ್ಯೋತ್ತರದಲ್ಲಿಯು ಭಾರತದ ಭೂ, ವಾಯು, ಹಾಗೂ ನೌಕಾಪಡೆಯಲ್ಲಿ ದೊಡ್ಡ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರಲ್ಲಿ ಜನರಲ್ ಕಾರ್ಯಪ್ಪ, ಜನರಲ್ ತಿಮ್ಮಯ್ಯ ಮುಖ್ಯರಾಗುತ್ತಾರೆ. ಸ್ವಾತ್ರಂತ್ರ್ಯ ನಂತರ ಭಾರತ ಸರಕಾರ ಸ್ಥಾಪಿಸಿದ ಸೈನಿಕರಿಗೆ ಮೀಸಲಾದ ಅಶೋಕ ಚಕ್ರ, ಕೀರ್ತಿಚಕ್ರ, ಶೌರ್ಯ ಚಕ್ರಗಳನ್ನು, ಪರಮವೀರ ಚಕ್ರ, ಪರಮ ವಿಶಿಷ್ಟ ಸೇವಾಪದಕ ಹೀಗೆ ಅನೇಕ ಪ್ರಶಸ್ತಿಗಳನ್ನು ಕೊಡಗಿನವರು ಪಡೆದಿದ್ದಾರೆ.

ಜನಪದ ನೃತ್ಯಗಳಿಗೆ ಬಂದಾಗ ಕರ್ನಾಟಕದ ಇತರ ಪ್ರದೇಶಗಳಲ್ಲಿ ಕಂಡುಬರದ ವಿಶಿಷ್ಟ ನೃತ್ಯಗಳು ಇಲ್ಲಿರುವುದು ಗಮನಾರ್ಹ. ಸುಗ್ಗಿಯ ಕೋಲಾಟ, ಬೆಳಕಿನ ನೃತ್ಯ, ವಾಲಗ ನೃತ್ಯ, ಕೊಂಬಾಟ, ಪೀಲಿಯಾಟ್, ಪರಿಯಕಳಿ, ಚೌರಿಯಾಟ, ಕಪ್ಪೆಯಾಟ, ಕತ್ತಿಯಾಟ, ಪಾಂಬಾಟ್, ಉಮ್ಮತಾಟ್ ಮೊದಲಾದ ಕುಣಿತಗಳು ಎರವ ಜನಾಂಗದ ಯೆರೆಯಾಟ್, ಮಂದಿಯಾಟ್ ಕುರುಬರ ಸುಗ್ಗಿ ಕುಣಿತ, ಕೋಲಾಟ, ಜೋಗಿ ಕುಣಿತ, ಅರೆಭಾಷಿಕರ ಸಿದ್ಧವೇಷ ಕೋಲಾಟ, ಬೆಳಕಿನ ಆಟ ಹೇಗೆ ಸುಮಾರು ೫೬ ವಿಧದ ನೃತ್ಯಗಳು ಕೊಡಗಿನಲ್ಲಿ ಕಂಡುಬರುತ್ತವೆ.

ಕೊಡಗಿನ ಪರಿಸರದ ಚೆಲುವಿಗೆ ಮಾರುಹೋಗಿ ಅದನ್ನು ಸುಂದರವಾಗಿ ಮತ್ತು ಪರಿಣಾಮಕಾರಿಯಾಗಿ ತಮ್ಮ ಕವಿತೆಗಳ ಮೂಲಕ ಪ್ರಕಟಗೊಳಿಸಿರುವ ಕವಿ –ಕವಯತ್ರಿಯರಿಂದ ಈ ನಾಡು ತನ್ನದೇ ವೈಶಿಷ್ಟ್ಯವನ್ನು ಪಡೆದಿದೆ.

ಕೊಡಗಿನ ಪ್ರಾಚೀನ ಕವಿಗಳ ಪರಂಪರೆಯನ್ನು ಸುಮಾರು ೧೧ನೇಯ ಶತಮಾನದಿಂದಲೇ ಗುರುತಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ. 'ಛಂದೋಂಬುಧಿ'ಯನ್ನು ರಚಿಸಿದ ನಾಗವರ್ಮ ಕೊಡಗಿನಲ್ಲಿದ್ದ ಎಂದು ಹೇಳಲಾಗುತ್ತದೆ. ಕೊಡಗಿನ ದಕ್ಷಿಣ ಭಾಗದಲ್ಲಿರುವ ಲಕ್ಷ್ಮಣತೀರ್ಥ ನದಿಯ ಪ್ರಾಂತ್ಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ರಕ್ಕಸಗಂಗನು ಈತನ ಆಶ್ರಯದಾತನಾಗಿದ್ದನೆಂದೂ, ಈ ನಾಗವರ್ಮನನ್ನೇ ಕೊಡಗು ದೇಶದ ಪ್ರಥಮ ಸಾಹಿತ್ಯ ಸೇವಕನೆಂದು ಹೇಳಲಾಗುತ್ತಿದೆ.

ಈ ಶತಮಾನದ ಆರಂಭದಲ್ಲಿ ಕೊಡಗಿನಲ್ಲಿ ಕನ್ನಡ ಮತ್ತು ಕೊಡವ ಈ ಎರಡು ಭಾಷೆಗಳಲ್ಲೂ ಸಾಹಿತ್ಯ ರಚನೆಗೈಯಲು ಶ್ರಮಿಸಿದ ಹಲವಾರು ಹಿರಿಯ ಬರಹಗಾರರು ಕಂಡು

ಬರುತ್ತಾರೆ. ಅಂತಹ ಪ್ರಮುಖರಲ್ಲಿ ಕೊಡಗಿನ 'ಕಲಾ ಪಿತಾಮಹ' ಎಂದು ಕರೆಯಲ್ಪಟ್ಟ ಮಡಿಕೇರಿಯ ವೆಂಕಟಾದ್ರಿ ಶಾಮರಾವ್ ಒಬ್ಬರು. ಕೊಡಗಿನ ಆದಿಕವಿ ಎಂದು ಪ್ರಖ್ಯಾತರಾದ ಮಡಿಕೇರಿ ತಾಲೂಕು ಕಿರುಂದಾಡು ಗ್ರಾಮದ ಹರದಾಸ ಅಪ್ಪಚ್ಚ ಕವಿ. ನಡಕೇರಿಯಂಡ ಚಿಣ್ಣಪ್ಪರವರು ಕೊಡವ ಭಾಷೆಯಲ್ಲಿ ಕೊಡವರ ಮೂಲ ಬದುಕು ಮತ್ತು ಸಂಸ್ಕೃತಿಗಳನ್ನು ಕುರಿತ 'ಪಟ್ಟೋಲೆ ಪಳಮೆ'ಯನ್ನು ಬರೆದಿದ್ದಾರೆ.

ಕೊಡಗಿನ ಸಾಹಿತ್ಯದ ಬಗ್ಗೆ ಹೇಳುವುದಾದರೆ, ಕೊಡಗಿನಲ್ಲಿ ಹುಟ್ಟಿ ಬೆಳೆದು ಕೊಡಗಿನಲ್ಲೇ ಸಾಹಿತ್ಯ ರಚನೆ ಮಾಡಿದವರು, ಕೊಡಗಿನಲ್ಲಿ ಹುಟ್ಟಿ ಬೆಳೆದು ಜೀವನ ನಿರ್ವಹಣೆಗಾಗಿ ದೂರ ಹೋಗಿ ನೆಲೆಸಿ ಸಾಹಿತ್ಯ ರಚನೆ ಮಾಡಿದವರು ಹಾಗು ಬೇರೆಡೆ ಹುಟ್ಟಿ ಬೆಳೆದು ಜೀವನಕ್ಕಾಗಿ ಕೊಡಗಿಗೆ ಬಂದು ನೆಲೆಸಿ ಸಾಹಿತ್ಯ ರಚನೆ ಮಾಡಿದವರೆಂದು ಗುರುತಿಸಬಹುದು.

**ಕೊಡವ ಭಾಷೆ**

ಕೊಡವ ಭಾಷೆಯನ್ನು ಕೊಡವರು, ಅಮ್ಮಕೊಡವರು, ಕೊಡವರು, ವರಿಗಳು, ಕೊಯವರು, ಬಣ್ಣದವರು, ನಾಯಿಂದರು, ಕೆಂಬಟ್ಟಿಗಳು, ಕುಡಿಯರು, ಪಣಿಕ್ಕರು, ಕಣಿಯರು, ಮೇದರು ಮುಂತಾದ ಜನಾಂಗದವರು ಬಳಸುತ್ತಾರೆ ಮತ್ತು ಇದು ಅವರ ಮಾತೃಭಾಷೆ.

ಕೊಡವ ಭಾಷೆಯ ಮೇಲೆ ಮಲೆಯಾಳ, ತುಳು ಮತ್ತು ಕನ್ನಡ ಭಾಷೆಗಳ ಪ್ರಭಾವವನ್ನು ಗುರುತಿಸಬಹುದು. ಇದು ದ್ರಾವಿಡ ಭಾಷಾ ಪರಿವಾರದಲ್ಲಿ ದಕ್ಷಿಣ ದ್ರಾವಿಡ ಭಾಷಾ ಗುಂಪಿಗೆ ಸೇರುತ್ತದೆ. ಕೊಡವ ಭಾಷೆಯನ್ನು ಇಂದು ಗ್ರಾಂಥಿಕ ರೂಪದ ಭಾಷೆ ಎಂದು ಪರಿಗಣಿಸುತ್ತಿದ್ದರೂ ಕಾಲ್ಡ್‌ವೆಲ್ ಈ ಭಾಷೆಯನ್ನು ಗ್ರಾಂಥಿಕ ವರ್ಗಕ್ಕೆ ಸೇರಿಸಲು ಇಚ್ಛಿಸಿರಲಿಲ್ಲ. ಆತ ಈ ಭಾಷೆಯನ್ನು ಹಳೆಗನ್ನಡ ಮತ್ತು ತುಳು ಭಾಷೆಗಳ ನಡುವೆ ನಿಲ್ಲುವ ಭಾಷೆ ಎಂದು ಪರಿಗಣಿಸಿದ್ದರು.

ಕೊಡವ ಭಾಷೆ ಕನ್ನಡಕ್ಕಿಂತಲೂ ಮಲೆಯಾಳ ಮತ್ತು ತಮಿಳು ಭಾಷೆಗೆ ಹತ್ತಿರವೆಂಬ ಅಭಿಪ್ರಾಯವನ್ನು ಡಾ. ಮೊಗ್ಲಿಂಗ್ ವ್ಯಕ್ತಪಡಿಸಿದ್ದಾರೆ. ಕೊಡವ ಭಾಷೆಗೆ ಮೊಟ್ಟ ಮೊದಲು ವ್ಯಾಕರಣವನ್ನು ರಚಿಸಿದಾತ ಕೋಲ್. ಈತ ತನ್ನ ವ್ಯಾಕರಣದಲ್ಲಿ ಕೊಡವ ಭಾಷೆಯನ್ನು ತುಳು ಮತ್ತು ಮಲೆಯಾಳ ಭಾಷೆಗಳೊಡನೆ ಹೋಲಿಸಲು ಯತ್ನಿಸಿದ್ದಾನೆ. ಕೊಡಗಿನ ಸೌಂದರ್ಯ ಕನ್ನಡದ ಕೆಲವು ಉತ್ತಮ ಭಾವಗೀತೆಗಳಿಗೆ ವಸ್ತುವಾಗಿದೆ.

ಕೊಡಗಿನ ಸೌಂದರ್ಯ, ಕೊಡವರ ವೇಷಭೂಷಣ, ತಿಂಡಿತಿನಿಸು, ಕೊಡಗಿನ ತಾಯಿ ಕಾವೇರಿ, ಕೊಡವರ ಆರಾಧ್ಯದೈವ ಇಗ್ಗುತ್ತಪ್ಪ, ಇವೆಲ್ಲಾ ಕೊಡವ ಕವನಗಳ ವಸ್ತುವಾಗಿವೆ. ಐತಿಚಂಡ ರಮೇಶ್ ಉತ್ತಪ್ಪ ಅವರು ಕೊಡಗಿನ ಜನರ ಬದುಕಿಗೆ ಪೂರಕವಾದ ಎಲ್ಲ ಸಂಗತಿಗಳನ್ನೂ ಕವನವೊಂದರಲ್ಲಿ ಅನಾವರಣಗೊಳಿಸಿದ್ದಾರೆ.

ಕೊಡಗಿದ್ ನಂಗಡ ಪೊನ್ನಕೊಡಗಿದ್ ನಂಗಡ
ಕ್ರೋಡದೇಶತ್‌ರ ವೀರಶೂರಂಗಡ ಜಮ್ಮಭೂಮಿದ್
ದೇಶಕಾಪ ಬಂಬಂಗಡ ನೆಲೆಯಿದ್ ಪಡೆಯಾಳಿಯಡನ
ಭಾರತಾಂಬೆರ ಕೊದಿಕುಂಞ್ಯಡ ನಾಡ್ಕೊಡಗಿದ್
ಇದೇಕೊಡಗ್ ನಂಗಡ ಪೊನ್ನಕೊಡಗಿದ್ (ಕೊಡಗ್‌ರ ಬೀರ್ಯ)

ಈ ಸಾಲುಗಳ ಪ್ರಕಾರ 'ಕೊಡಗಿದು ನಮ್ಮದು ಚಿನ್ನದ ಬೀಡಿದು ನಮ್ಮದು ಕ್ರೋಡದೇಶದ ಕೊಡವ ವೀರರ ಜನ್ಮಭೂಮಿಯಿದು. ದೇಶಕಾಯುವ ಶೂರವೀರರ ನೆಲೆ ಕೊಡಗಿದು. ಭಾರತಾಂಬೆಯ ಮುದ್ದುಕಂದರ ನಾಡು ಕೊಡಗಿದು. ಇದೇ ನೋಡಿ ಕೊಡಗು. ಇದೇ ನೋಡಿ ಹೊನ್ನಬೀಡು'. ಇದು ಕವಿ ಅಭಿಮಾನದಿಂದ ಗುರುತಿಸಿದ ಕೊಡಗು. ಇಲ್ಲಿಯ ಜನರು ವೀರರೆಂಬ ಹಿರಿಮೆ, ಇದು ಚಿನ್ನದ ನಾಡೆಂಬ ಹೆಮ್ಮೆ ಕವಿಯದು. ಇಂತಹ ನಾಡು ಏಲಕ್ಕಿ, ಕಿತ್ತಳೆ, ಕರಿಮೆಣಸಿಗೆ ಪ್ರಸಿದ್ಧವಾದುದು. ಕಣ್ಣುಬಿಟ್ಟು ನೋಡಿದಲ್ಲೆಲ್ಲಾ ಕಾಣುವುದು ಆಕಾಶದೆತ್ತರಕ್ಕೆ ಬೆಳೆದು ನಿಂತ ಮರಗಳು. ಸಸ್ಯಸಮೃದ್ಧಿಯನ್ನು ಗುರುತಿಸಿದ ಕವಿ ಈ ಪುಣ್ಯಭೂಮಿ ಕಾವೇರಿಯ ತವರು ಎನ್ನುತ್ತಾರೆ.

ಪುಣ್ಯಭೂಮಿ ಎಣ್ಣಿತಿಲ್ಲ ಪುಟ್ಟಿಯೆ ಕಾವೇರಿ
ಕೈತೊತ್ತು ಬೇಡುವ ಕೊಡವ ಬೆಚ್ಚಿ ಅಂದಿತಿರಿ
ಮಳೆಬೊಳೆಕ್ ನೆಲೆನಿಂದಿತ್ ಇಗ್ಗುತಪ್ಪಸ್ವಾಮಿ
ಪೋಡಿ ಇಲ್ಲೆ ನಂಗಕ್ಕೆಲ್ಲ ಬಿರುಗಾಳಿ ಸುನಾಮಿ, ಇದೇ ಕೊಡಗ್
(ಕೊಡಗ್‌ರ ಬೀರ್ಯ)

'ಪುಣ್ಯಭೂಮಿಯೆಂದಿಲ್ಲಿ ಜನಿಸಿದಳು ಕಾವೇರಿ, ಕೈಮುಗಿದು ಬೇಡುವರು ಕೊಡವರು, ಇಟ್ಟು ಅಂದಿತಿರಿ, ಮಳೆಬೆಳೆಗಾಗಿ ನೆಲೆನಿಂತನಲ್ಲಿ ಇಗ್ಗುತಪ್ಪಸ್ವಾಮಿ ನಮಗಿಲ್ಲಿ ಹೆದರಿಕೆಯಿಲ್ಲ, ಬಿರುಗಾಳಿ, ಸುನಾಮಿ. ಇದೇ ನೋಡು ಕೊಡಗು'. ಭೂಮಿಯನ್ನು ತಣಿಸಿ ನೆಮ್ಮದಿಯ ಬದುಕನ್ನು ಕೊಡುವವಳು ಕಾವೇರಿತಾಯಿ. ಮಳೆಬೆಳೆಯ ಅಧಿದೈವ ಇಗ್ಗುತಪ್ಪ. ಇವರಿಬ್ಬರೂ ಬಹುತೇಕ ಕೊಡವ ಕವನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಕವಿಯ ಪ್ರಕಾರ ಮನಸ್ಸನ್ನು

ಚೇತೋಹಾರಿಯಾಗಿಸುವ ಅನೇಕ ಸಂಗತಿಗಳು ಕೊಡಗಿನಲ್ಲಿವೆ. 'ನೆಳ್‌ಂಜಿ ಬೀಜುವಕಾತ್, ಕಳಚಿಒಕ್ಕುವ ನೀರ್, ಮೇಲೆ ಮುತ್ತುವ ಮಂಜ್'. ಅಂದರೆ, ಸುಯ್ಯೆಂದು ಬೀಸುವ ಗಾಳಿ, ಬಳುಕಿ ಹರಿಯುವ ನೀರು ಮೈಮುತ್ತಿಕ್ಕುವ ಮಂಜು ಇತ್ಯಾದಿ. ಮಾತ್ರವಲ್ಲ, ಧಾರಾಕಾರವಾಗಿ ಸುರಿಯುವ ಮಳೆ, ಗುಡುಗು–ಸಿಡಿಲು, ಪ್ರಾಣಿಪಕ್ಷಿಗಳ ಕೂಗು ಮನಸ್ಸಿನ ಚೈತನ್ಯಕ್ಕೆ ಮದ್ದು ಎಂಬುದು ಕವಿಯ ಅಭಿಪ್ರಾಯ. ಮುಂದುವರಿದು ಕೊಡವರ, ಕೊಡವತಿಯರ ವೇಷಭೂಷಣದ ವರ್ಣನೆಯೂ ಕವನದಲ್ಲಿದೆ.

ಕುಪ್ಪಚ್ಯಾಲೆ ಪೊಡಿಯ ಜಾಕೀಟ್ ಉಡುಪ್ ತೊಡುಪ್‌ರ ಬೀರ್ಯ
ಬೊಳಕಾಟ್, ಕೋಲಾಟ್, ಉಮ್ಮತ್ತಾಟ್ ಜಾನಪದ ಕಳಿತೆಳಿರ ಕಾರ್ಯ
ಒಟ್ಟಿಕಡಂಬುಟ್ಟ್ ತಂಬುಟ್ಟ್ ಪಾಪುಟ್ಟ್ ತಿಂದ್‌ನೋಟಂಡು ಬೆರ್ಯ
ಬೋಟೆ, ಬೊಡಿ, ತೋಕ್ ಕತ್ತಿರನೈಪು

ಕುಪ್ಪಸದಟ್ಟಿ, ಕೊಡವಸೀರೆ, ಜಾಕೀಟು ಕೊಡವರ ಉಡುಗೆ. ಇವು ನಾಡಜನರ ಸಂಸ್ಕೃತಿಯ ಪ್ರತಿಬಿಂಬ. ಕೊಡವತಿಯರ ಸಾಂಪ್ರದಾಯಿಕ ಉಡುಗೆ ಸೀರೆ. ಅದನ್ನು ಅವರು ಉಡುವ ರೀತಿಯಲ್ಲೂ ಭಿನ್ನತೆಯಿದೆ. ಸೀರೆಗೆ ತಕ್ಕಂತೆ ವಿಶಿಷ್ಟ ಆಭರಣಗಳೂ ಅವರ ಸಂಸ್ಕೃತಿಯ ಸಂಕೇತ. ಬೊಳ್‌ಕಾಟ್, ಕೋಲಾಟ್. ಉಮ್ಮತ್ತಾಟ್, ಮುಂತಾದುವು ಕೊಡವರ ಜಾನಪದ ನೃತ್ಯಗಳು. ರೊಟ್ಟಿ, ಕಡಂಬಿಟ್ಟ್, ತಂಬಿಟ್ಟ್, ಪಾಪುಟ್ಟು ಮೊದಲಾದವುಗಳು ಇಲ್ಲಿಯ ಸಾಂಪ್ರದಾಯಿಕ ತಿಂಡಿ–ತಿನಿಸುಗಳು. ಕೋವಿ ಹಿಡಿದು ಬೇಟೆಯಾಡುವುದರಲ್ಲಿಯೂ ಇಲ್ಲಿಯ ಜನರು ಮುಂದಿದ್ದಾರೆ ಎನ್ನುತ್ತಾ, ಕೊಡವರ ಬದುಕಿನ ಬಗೆಗಿನ ಎಲ್ಲಾ ಸಂಗತಿಗಳನ್ನೂ ಕವಿ ಐತಿಚಂಡ ರಮೇಶ್ ಉತ್ತಪ್ಪ ಈ ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

ಚೆಕ್ಕೆರೆ ಅಪ್ಪಯ್ಯ ತ್ಯಾಗರಾಜ ಅವರು ಕೊಡಗಿನಂತಹ ನಾಡು ಯಾವ ದೇಶದಲ್ಲಿಯೂ ಇಲ್ಲ ಎನ್ನುತ್ತಾ ಅದನ್ನು ವರ್ಣಿಸುವ ಪರಿಯನ್ನು 'ಏದೂ ದೇಶತ್ತ್ ಇಲ್ಲೆ' ಕವನದಲ್ಲಿ ಕಾಣಬಹುದು. 'ಏದೂ ದೇಶತ್ತ್ ಇಲ್ಲೆ ಪೊಮ್ಮಾಲೆ, ರನ್ನತ ಜಿಲ್ಲೆ, ವೀರರಸತ್‌ರಾ ಜಿಲ್ಲೆ, ಭಾರತದೇಶಕ್ ಪೊನ್ನ್‌ರ ಬಿಲ್ಲ್' ಎನ್ನುತ್ತಾರೆ. ಕೊಡಗೆಂದರೆ ವೀರರಸದ ಜಿಲ್ಲೆ, ಭಾರತದೇಶಕ್ಕೆ ಚಿನ್ನದ ಬಿಲ್ಲೆ. ಇದು ನಾಡಿನ ಬಗೆಗೆ ಉತ್ಕಟ ಅಭಿಮಾದ ಮಾತುಗಳು. ಇಡೀ ಕವನ ಕೊಡಗಿನ ಪ್ರಕೃತಿ ಸೌಂದರ್ಯ, ಕಾವೇರಿತಾಯಿ ಮತ್ತು ವೀರಸೇನಾನಿಗಳನ್ನು ಕುರಿತು ವಿವರಿಸುತ್ತದೆ. ಜೊತೆಗೆ ವಾಣಿಜ್ಯ ಬೆಳೆಗಳಾದ 'ತೇನ್‌ಚೋದ್‌ರನಾಡ್', ಕಾಪಿ, ಮಳುಮಳಿ ಯಾಲಕ್ಕಿಗೂಡ್', (ಜೇನು, ಕಾಫಿ,ಕರಿಮೆಣಸು, ಕಿತ್ತಳೆ, ಏಲಕ್ಕಿಯ ಗೂಡು) ಇವುಗಳಿಂದ ನಾಡಿಗೆ ಸಮೃದ್ಧಿ ಪ್ರಾಪ್ತಿಯಾಗಿದೆ. ಕೊಡಗಿನಲ್ಲಿರುವ ವೀರಸೇನಾನಿಗಳು ಬೇರೆಲ್ಲೂ ಇಲ್ಲ. ಭರತಮಾತೆಯ ಮಕ್ಕಳಾಗಿರುವ ಫೀಲ್ಡ್

ಮಾರ್ಶಲ್ ಕಾರ್ಯಪ್ಪ, ಜನರಲ್ ತಿಮ್ಮಯ್ಯ ಕೊಡಗಿನವರು ಎನ್ನುತ್ತಾ, ನಾಡಪ್ರೇಮವನ್ನು ಮೆರೆದಿದ್ದಾರೆ. 'ಕುಂಡಿಕೆಕ್ ಕಳೆ'ಯು ಚೆಕ್ಕೆರೆ ಅಪ್ಪಯ್ಯ ತ್ಯಾಗರಾಜ ಅವರ ಇನ್ನೊಂದು ಕವನ. ಇದು ಕಾವೇರಿಯನ್ನು ಕುರಿತಾಗಿದೆ. ತಾಯಿಯಾಗಿ ಕಾವೇರಿಯನ್ನು ಕಂಡವರು ಕೊಡವರು. ಹಾಗಾಗಿ,

ಬೇಲ್ ಬಾಣೆ ರಂಗ್‌ಡ ತೆಳಿಲೂ ನೀನಮ್ಮೆ
ಕಾಜುಮಾಲೆರ ಆಜ ಬೋಬೋಜತು
ಎಂದು ನೀನಮ್ಮೆ ಪಡೆಲ್ ಬಂಬಂಗ
ಮಂದ್ ಮನೆಲೆಂಗ ನಿನ್ನ ತುದಿಪಮ್ಮೆ
ತುಂಬ್ ಸಭೆಲೂ ನಿಂದ್ ತುದ್‌ಚವ
ನಂದ್ ಮಾಡಮ್ಮೆ (ಕುಂಡಿಕೆಕ್ ಕಳೆ)

'ಕೊಡಗಿನ ಪ್ರಕೃತಿ ಸೌಂದರ್ಯದಲ್ಲಿ ಕಾವೇರಿತಾಯಿಯ ನಗುವಿದೆ. ಮಲೆಮಲೆಗಳ ಬೆಟ್ಟದ ಸಾಲಿನಲ್ಲಿ ಅವಳ ಸೊಬಗಿದೆ. ತುಂಬಿದ ಸಭೆಯಲ್ಲಿ ನಿನ್ನ ಪ್ರಾರ್ಥಿಸುವೆ ಒಳಿತು ಮಾಡಮ್ಮ' ಇದು ಕವಿಯ ಪ್ರಾರ್ಥನೆ. ಕಾವೇರಿಯನ್ನು ಬಿಟ್ಟು ಕೊಡವರ ಬದುಕಿಲ್ಲ. ಪ್ರತಿಯೊಂದರಲ್ಲಿಯೂ ಒಳಿತು ಮಾಡಬೇಕೆಂದು ನಿತ್ಯ ಕಾವೇರಿಯನ್ನು ಪ್ರಾರ್ಥಿಸುವಷ್ಟು ಆಪ್ಯಾಯಮಾನ ಸಂಬಂಧ ಈ ನಾಡು ಮತ್ತು ನದಿಯದ್ದು. ಅದು ಕೊಡಗಿನ ಜೀವನದಿ. ಉಳ್ಳಿಯಡ ದಾಟಿಪೂವಯ್ಯ ತಮ್ಮ ಕವನವೊಂದರಲ್ಲಿ ಕೊಡಗಿನ ವಿಶೇಷತೆಗಳನ್ನು ಗುರುತಿಸಿದ್ದಾರೆ. ಅಲ್ಲಿಯ ಬೆಳೆಗಳನ್ನು ಕವಿ ತಾಯಿಯ ಮಡಿಲಿಗೆ ಅರ್ಪಿಸುತ್ತಾರೆ. ಭಾರತಮಾತೆಯ ನೆತ್ತಿಯ ಕಿರೀಟ ಕೊಡಗು ಎಂಬುದನ್ನು ಅಭಿಮಾನದಿಂದ ಗುರುತಿಸಿದ ಕವಿ ಅಲ್ಲಿಯ ಬೆಳೆಗಳೇ ಆಕೆಯ ಆಭರಣವೆನ್ನುತ್ತಾರೆ. ಕೊಡಗುಮಲೆಯ ಏಲಕ್ಕಿಮಾಲೆ ಅವಳ ಕೊರಳಮಾಲೆ.

ಕಳಚಿ ಒಕ್ಕಳ
ಕಾವೇರಿ ತೀರ್‌ತ
ತಾಯಿ ಕೆಲತ್‌ರ ತಂಪುಕೇ
ಗಡಿಲ್ ನಿಂತದಾ
ಕೊಡವ ಬಂದಾಗ
ಮಾತೆ ನಿನ್ನಾ ಕಾಪುಕೇ (ಭಾರತಾಂಬೆಕ್)

'ನರ್ತಿಸಿ ಹರಿಯುವ ಕಾವೇರಿ ತೀರ್ಥ ತಾಯಿ ಒಡಲಿನ ತಂಪಿಗೆ. ಗಡಿಯ ಕಾಯುವ ಕೊಡವಯೋಧರು ಮಾತೆ ನಿನ್ನಾ ರಕ್ಷೆಗೆ'. ಪ್ರಕೃತಿಮಾತೆಯ ದಯೆಯಿಂದ, ಕಾವೇರಿಮಾತೆಯ ವರಪ್ರಸಾದದಿಂದ ಧೀರರಾಗಿ ಬೆಳೆದ ಯುವಸಮುದಾಯ ಗಡಿಯಲ್ಲಿ ದೇಶಕಾಯುವ ಕರ್ತವ್ಯದಲ್ಲಿ ನಿರತರಾಗಿದ್ದಾರೆ. ಭಾರತಮಾತೆಯನ್ನು ಕಾಯುವಲ್ಲಿ ಕೊಡಗು ಸಮರ್ಥವಾಗಲಿ ಎಂಬ ಹಾರೈಕೆ ಕವಿಯದು.

ಮನುಷ್ಯರಿಗೆ ಮಳೆ ಬದುಕಿನ ಸಮೃದ್ಧಿಯ ಭಾಗ. ನಾಗೇಶ್ ಕಾಲೂರು ಅವರ ಕವನ ಇಂತಹ ಸಂಗತಿಯನ್ನು ಮುಂದಿಡುತ್ತದೆ. ಮಳೆ ಸುರಿದು ಕಾವೇರಿ ತುಂಬಿ ಹರಿಯಬೇಕೆಂಬ ಆಶಯ ಕವನದಲ್ಲಿದೆ. ಮಳೆಯನ್ನೇ ನಂಬಿ ಬದುಕುವ ಕೊಡಗು ಉರಿಬಿಸಿಲನ್ನು ತಾಳಲಾರದ ಸ್ಥಿತಿ ನಿರ್ಮಾಣಗೊಂಡಿದೆ. ಇದನ್ನು ಕಂಡ ಕವಿ 'ತೊರ್‌ಂಜಿರ್ ನೀ ತೊರ್‌ಂಜಿರ್' (ಸುರಿದುಬಿಡು ನೀ ಸುರಿದುಬಿಡು) ಎನ್ನುತ್ತಾರೆ. ಕೊಡಗಿನ ಮಳೆಯೆಂದರೆ ಗುಡುಗು ಸಿಡಿಲಿನ ಅಬ್ಬರದೊಂದಿಗೆ ಸುರಿಯುತ್ತಾ ನದಿ, ಹಳ್ಳ, ಕೊಳ್ಳಗಳೆಲ್ಲಾ ತುಂಬಿ ದ್ವೀಪವಾಗುವ ಸನ್ನಿವೇಶ. ಆದರೆ ಈಗ ಅಲ್ಲಿಯೂ ಮಳೆಯ ಪ್ರಮಾಣ ಕಡಿಮೆಯಾಗಿದೆ. ಮಳೆಯ ನೀರನ್ನು ನಂಬಿ ಬದುಕುವ ಮಂದಿಗೆ ಅನಾವೃಷ್ಟಿ ಆಘಾತವನ್ನುಂಟುಮಾಡಿದೆ. ಮಳೆ ಕೊಡಗಿನ ಗಡಿಯನ್ನು ದಾಟಿ ಸುರಿಯಬೇಕೆಂಬ ಹಂಬಲ ಕವನದಲ್ಲಿದೆ.

ಪಸೆ ಆರ್‌ನಾ ಮನಕ್
ಮಾಕಾತ್‌ರಾ ಕೂಡೆ
ಕುಸಿ ಕುಳ್‌ರ್ ಮುತ್ತಾಯಿ
ತುಳಿಯಾಂಡ್ ಮಳೆಯೇ
ಚುಡ್‌ಬೆದರ್ ಕಾಚ್‌ಕ್
ತಡಿಪೋಲೆ ಈ ಜನಡ
ಪಡ್‌ಬೇಲ್ ತಣುವಾಯಿ
ವರ ತರೊಂಡು ಮಳೆಯೆ (ಜಡಿಮಳೆನೆ ಬಯ್‌ಂದ್)

'ಗರಬಡಿದ ಮನದೊಳಗೆ ಬಿರುಗಾಳಿಯೊಡನೆರಗಿ ಗರಿಗೆದರುವೊಲು ಮುತ್ತಹನಿಯಾಗು ಮಳೆಯೇ ಸುಡುಬಿಸಿಲತಾಪಕ್ಕೆ ಬಡಜನರ ಒಡಲೆಂಬ ಹೊಲಗದ್ದೆಗಳ ತಣಿಸಿ ವರವಾಗು ಸಿರಿಯೆ' ಎನ್ನುವ ಮೂಲಕ ಮಳೆ ತಮ್ಮನಾಡಿಗೆ ವರವಾಗಬೇಕೆಂಬ ಪ್ರಾರ್ಥನೆಯಿದೆ. ಅನಾವೃಷ್ಟಿಗೆ ಕಾರಣವಾದ ಸಂಗತಿಗಳನ್ನು ಕವನ ಮುಂದಿಡುತ್ತದೆ. 'ಮರಕಾಡ್‌ನಾ ಕೆತ್ತಿ ಮಣಸಾಲ್ ಮಾಡ್‌ನಾ ಕೇಡಾಳಿಕೆರೆದೆ ಚೌಟಿ ಮೆರ್‌ಂದ್ ನೀ ದೊರೆಯೆ' (ಮರಗಿಡಗಳನು ಕಡಿದು

ಮರುಳುಗಾಡಾಗಿಸಿದ ದುರುಳರೆದೆಗಳ ಮೆಟ್ಟಿ ಮೆರೆದುಬಿಡು ದೊರೆಯೇ). ಮನುಷ್ಯ ಸ್ವಾರ್ಥಕ್ಕಾಗಿ ಸಸ್ಯಸಮೃದ್ಧಿಯನ್ನು ಬಳಸಿಕೊಂಡದ್ದು ಅನಾವೃಷ್ಟಿಗೆ ಕಾರಣ. ಇಂತಹ ಸ್ವಾರ್ಥಿಗಳ ಬಗೆಗೆ ಅನುಕಂಪವಿರಿಸಿ, ಕೊಡಗಿನ ಒಡಲಿನ ನೀರು ಕಡೆತನಕ ಇರುವಂತೆ ಸುರಿದುಬಿಡು ಎಂಬುದಾಗಿ ನಿವೇದಿಸುತ್ತಾರೆ. ಜೀವರಕ್ಷಕಳಾದ ಕಾವೇರಿ ತುಂಬಿ ಹರಿಯಬೇಕಾದ ಅವಶ್ಯಕತೆ ಮತ್ತು ಅನಿವಾರ್ಯತೆಯನ್ನು ಕವನ ಮುಂದಿಡುತ್ತದೆ.

ಮಳೆಯಿಲ್ಲದ ಕೊಡಗಿನ ಸ್ಥಿತಿಯನ್ನು ಮೊಣ್ಣಂಡ ಶೋಭಾ ಸುಬ್ಬಯ್ಯ ಇವರ ಕವನ ಅನಾವರಣಗೊಳಿಸಿದೆ. ನಿರಂತರವಾಗಿ ಸುರಿಯುವ ಮಳೆಯಿಂದ ಕೃಷಿಚಟುವಟಿಕೆಗಳ ಮೂಲಕ ಸಮೃದ್ಧಿಯನ್ನು ಕಾಣುತ್ತಾ ಸದಾ ಕ್ರಿಯಾಶೀಲವಾಗಿರುವ ಕೊಡಗನ್ನು ಕನವರಿಸುವ ರೀತಿಯಲ್ಲಿದೆ ಈ ಕವನ.

ಕುಂದ್‌ಡರಸಿ ಕೊಡಗಲಿಂದ್ ಮಬ್ಬ್ ಕವ್‌ಂಜತ್ತ್
ಅಂದತಿಂಜ ಕಾವೇರಮ್ಮೆ ಇಂದ್ ಒಣಂಗಿತ್ತ್ (ಕೊಡಗ್‌ರ ಪಾಡ್)

(ಅಂದದರಸಿ ಕೊಡಗಲಿಂದು ಮಬ್ಬುಕವಿದಿದೆ. ಚಂದಗಾರ್ತಿ ಕಾವೇರಮ್ಮ ಇಂದು ಬೆಂದಳು.) ಮಳೆಯ ಕೊರತೆಯಿಂದಾಗಿ ಕೊಡಗಿನಲ್ಲಿ ಮಬ್ಬು ಕವಿದಿದೆ. ಪರಿಣಾಮವಾಗಿ ಕಾವೇರಿತಾಯಿ ಬೆಂದುಹೋಗಿದ್ದಾಳೆ. ಮಕ್ಕಳೆಲ್ಲ ಹೆದರಿ ನಡುಗುವಂತಹ ಗುಡುಗು, ಮಿಂಚು, ಗಾಳಿಯಿಂದ ಕೂಡಿದ ಮಳೆ ಎಲ್ಲೋ ದೂರ ಸರಿದಿದೆ. ಆಗ ಮೂಡಿಬಂದ ಸಂದೇಹವೆಂದರೆ, ಮಳೆಬೆಳೆಯ ದೈವವಾದ ಇಗ್ಗುತಪ್ಪ ನಾಡನ್ನು ಮರೆತನೇ? ಕುಲದೇವಿ ಕಾವೇರಿ ಬತ್ತಿಹೋದಳೇ? ಬದುಕಿನ ಅಭದ್ರತೆ ಕಾಡುವಂತಹ ಪರಿಸ್ಥಿತಿ ನಿರ್ಮಾಣಗೊಂಡಿದೆ. ಬದುಕಿನ ಭಾಗ್ಯವಾದ ಭತ್ತವನ್ನು ಕೊಯ್ದು ಹುತ್ತರಿ ಮಾಡಿ ಮನೆತುಂಬಿಸಿಕೊಳ್ಳುವ ಸೌಭಾಗ್ಯ ದೊರೆಯದಿದ್ದರೆ ಆ ಸಂಕಟ ಮನುಷ್ಯರನ್ನು ಕಾಡುವಂತದ್ದು. ಹಾಗಾಗಿ ಕಾಣೆಯಾಗಿರುವ ಮಳೆಗಾಲವನ್ನು ಮತ್ತೆ ಕಾಣಬಯಸುವ ಕವಯಿತ್ರಿ ಆಶಾಭಾವನೆಯನ್ನು ತಾಳುತ್ತಾ, 'ಒತ್ತುಗೂಡಿ ತೊತ್‌ಪಾಡಿ ಕಾವೇರಮ್ಮನ ಮತ್ತ್ ಏರಿ ಮರೆಯತಿ ಪೊನ್ನಿಗುತ್ತಪ್ಪನ' (ಒಂದುಗೂಡಿ ಹಾಡಿ ಸ್ತುತಿಸುವ ಕಾವೇರಮ್ಮೆಯ ಮದವೇರಿ ಮರೆಯದಿರಿ ಪಾಡಿ ಇಗ್ಗುತಪ್ಪನ) ಎನ್ನುತ್ತಾ, ಹುತ್ತರಿಯ ಹಬ್ಬ ಮರಳಿ ಕೊಡಗನ್ನು ಹರಸಲಿ. ಹತ್ತುಜನ ಒಗ್ಗೂಡಿ ಮತ್ತೆ ಬೇಡುವ ಎನ್ನುತ್ತಾರೆ. ದೇವರ ಕೃಪೆಯ ಮೇಲೆ ನಂಬಿಕೆಯುಳ್ಳವರು ಕೊಡವರು. ಕೃಷಿ ಪ್ರಧಾನವಾದ ಆ ನಾಡಿನಲ್ಲಿ 'ಹುತ್ತರಿ'ಗೆ ವಿಶೇಷವಾದ ಮಹತ್ವವಿದೆ. ಮುಂಗಾರು ಆರಂಭದಲ್ಲಿ ಗದ್ದೆಯನ್ನು ಉತ್ತುಬಿತ್ತಿ ಕಟಾವಿನ ಹಂತಕ್ಕೆ ಬಂದಾಗ ಭೂತಾಯಿಗೆ ಕೃತಜ್ಞತಾಪೂರ್ವಕವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಆದರೆ ಅನಾವೃಷ್ಟಿಯಿಂದಾಗಿ ಈ ಸಂಭ್ರಮ ದೂರಸರಿದಿದೆಯೆಂಬ ನೋವನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ.

ಐ.ಮಾ.ಮುತ್ತಣ್ಣ ಅವರು ಕೊಡಗಿನ ಗ್ರಾಮವೊಂದನ್ನು ವಿಶೇಷವಾಗಿ ವರ್ಣಿಸಿದ್ದಾರೆ. ಅಳಿಯನೊಬ್ಬ ಅತ್ತೆಯ ಮನೆಗೆ ಹೋಗುವ ಸಂದರ್ಭದಲ್ಲಿ ಮರೆನಾಡನ್ನು ವರ್ಣಿಸುವ ಮಾದರಿಯಲ್ಲಿ ಕವನ ರಚನೆಯಾಗಿದೆ. 'ಮರೆನಾಡು' ಎನ್ನುವುದು ಕೊಡಗಿನ ಒಂದು ಕುಗ್ರಾಮ. ಬ್ರಹ್ಮಗಿರಿ ಬೆಟ್ಟದ ತಪ್ಪಲಿನಲ್ಲಿರುವ ಪುಣ್ಯಕ್ಷೇತ್ರದ ಹಿಂಭಾಗದಲ್ಲಿ ಬೆಟ್ಟಗಳ ಸಾಲಿನ ಮಧ್ಯೆ ಇರುವ ಈ ನಾಡು ಸತ್ಯದ ಮತ್ತು ಕಾರಣಿಕದ ನಾಡೆಂಬ ಅಭಿಪ್ರಾಯ ಕವನದಲ್ಲಿದೆ. 'ಟಿಪ್ಪು ಎತ್ತ್‌ತ ಊರು ನಾಡ್ ಸುತ್ತ್‌ನ ಪೊಳೆಯು ಪಾರೆಕಲ್ಲ್ ಕಕ್ಕಟ್ಟೆಲ್ಲ' (ಮರೆನಾಡು) ಎನ್ನುವ ಕವಿ ಹಿಂದೆ ಟಿಪ್ಪು ಕೊಡಗಿನ ಮೇಲೆ ದಂಡೆತ್ತಿ ಬಂದಾಗ 'ಮರೆನಾಡು' ಅವನ ಕಣ್ಣಿಗೆ ಕಾಣಿಸಲಿಲ್ಲ. ಕಾರಣ ಸುತ್ತಲೂ ಹರಿಯುವ ನದಿ ಮತ್ತು ಆವರಿಸಿರುವ ಬಂಡೆಕಲ್ಲು. ಈ ನಾಡನ್ನು ತಲುಪಬೇಕಾದರೆ ದಾರಿಯಲ್ಲಿ ವೈನಾಡು, ಮಲೆನಾಡು, ಮುಂದಿರುವ ಬಿರುವಾಣಿ ಸೀಮೆಯನ್ನು ದಾಟಿ ಸಾಗಬೇಕಾಗಿದೆ. ಅದನ್ನೆಲ್ಲ ನೋಡಿ ಮುಂದೆ ಸಾಗುವಾಗ ಹೆಣ್ಣು ಮಕ್ಕಳೆಲ್ಲ ಕ್ರಿಯಾಶೀಲರಾಗಿ ತೋಟಗದ್ದೆಯ ಕೆಲಸಗಳಲ್ಲಿ ತೊಡಗಿರುವುದು ಕಾಣಿಸುತ್ತದೆ.

ವುಂಡ್‌ಕಾಡ್‌ರ ಚಾಯಿ ಬೇಕೊರಿಟ್ ಬೊಳೆಚಾಲು
ಸಾಲೋಳ ತಲೆಮುಟ್ಟಿವೊ
ಮರಕಾಡ್ ದಂಡ್‌ಬರಿ ಕಾಲ್ಬಟ್ಟಿ ಕಲ್ಲ್‌ಚೂರ್
ಉಂಬಳ್‌ರ ತಾಮಾನೆಯೂ (ಮರೆನಾಡ್)

ಅನೇಕ ಸೀಮೆಗಳನ್ನು ದಾಟಿ ಮುಂದೆ ಸಾಗುವಾಗ ಬಿದಿರು ಹಿಂಡಿನ ಚೆಲುವು, ಬೆಳೆದ ಬೆಳೆಗಳ ಚೆಲುವು, ವೃಕ್ಷರಾಶಿ ತುಂಬಿರುವ ಕಾಡುಗಳ ಸೌಂದರ್ಯ, ಕಾಲುದಾರಿಯಲ್ಲಿ ತುಂಬಿರುವ ಜಿಗಳೆಗಳ ರಾಶಿಯ ಪರಿಚಯವಾಗುತ್ತದೆ. ಊರಿಗೊಬ್ಬ ಮುಖ್ಯಸ್ಥ ಹಾಗೂ ಚೋನೀರ, ಚೇರಂಡ, ನೆಲ್ಲೀರ, ಅಣ್ಣೀರ ಮುಂತಾದ ಮನೆತನಗಳು ಅಲ್ಲಿ ನೆಲೆಸಿದ್ದಾರೆಂಬುದು ಕವನದಲ್ಲಿ ದಾಖಲಾಗಿದೆ. ದಾರಿಯುದ್ದಕ್ಕೂ ಗಿಳಿ, ಕಾಡುಕೋಳಿ, ಕೋಗಿಲೆಗಳ ಹಾಡು ಮುದನೀಡುವಂತದ್ದು. ಅದರ ಜೊತೆಗೆ ಸಿಹಿಜೇನು, ಸುಖಜೀವನದ ನಾಡು. ಈ ಸಂಗತಿಗಳ ಮೂಲಕ ಬದುಕಿಗೆ ನೆಮ್ಮದಿಯನ್ನು ನೀಡುವ, ಔದಾಸೀನ್ಯವನ್ನು ಬಿಟ್ಟು ಸದಾ ಕ್ರಿಯಾಶೀಲರಾಗಿರುವ ಜನರಿಂದ ತುಂಬಿದ ಸಸ್ಯಸಮೃದ್ಧಿಯ ನಾಡನ್ನು ಕವಿ ಗುರುತಿಸಿದ್ದಾರೆ. ಇಡೀ ಕವನ ಮರೆನಾಡಿನ ಪರಿಸರವನ್ನು ವರ್ಣಿಸುತ್ತದೆ. ಆಧುನೀಕರಣದ ಪ್ರಭಾವಕ್ಕೆ ಒಳಗಾಗದ ತನ್ನ ಸರ್ವಸಮೃದ್ಧಿಯನ್ನು ಸಹಜವಾಗಿ ಉಳಿಸಿಕೊಂಡಿರುವ ನಾಡಿನ ಗ್ರಹಿಕೆಯಿದಾಗಿದೆ.

ಪಾರಂಪರಿಕ ಕೊಡಗಿನ ಸಾಮಾಜಿಕ ವ್ಯವಸ್ಥೆಯನ್ನು ವಿವರಿಸುವುದರೊಂದಿಗೆ ಆಧುನಿಕತೆಯಿಂದಾಗಿ ಕೊಡಗಿನ ಸಂಸ್ಕೃತಿಯಲ್ಲಾದ ಬದಲಾವಣೆಯನ್ನು ಅಜ್ಜಿನಿಕಂಡ ಸಿ

ಮಹೇಶ್ ನಾಚಯ್ಯ ಅವರ ಕವನ ಅನಾವರಣಗೊಳಿಸಿದೆ. ನಿರೀಕ್ಷೆ ಮೀರಿದ ಬದಲಾವಣೆಯ ಬಗೆಗೆ ಕವಿ ದಾಖಲಿಸಿದ್ದಾರೆ. ಭತ್ತದಗದ್ದೆಗಳು ಮಾಯವಾಗಿ ನಿವೇಶನಗಳಾಗಿ, ಕಾಫಿತೋಟಗಳಾಗಿ ಮಾರ್ಪಾಡಾಗಿವೆ. ಅಂದು ರಾಮರಾಜ್ಯವಾಗಿದ್ದ ಕೊಡಗು ಇಂದು ರಾವಣರಾಜ್ಯವಾಗಿದೆಯೆಂಬ ವಿಷಾದ ಕವನದಲ್ಲಿದೆ. ಹಿಂದೆ 'ಕೊಡಗು' ಎಂಬ ಭೂಪ್ರದೇಶವು ತನ್ನದೇ ಆಡಳಿತವ್ಯವಸ್ಥೆಯನ್ನು ಹೊಂದಿದ್ದು ೧೨ ಭಾಗವಾಗಿ, ೩೫ ನಾಡುಗಳನ್ನು ಒಳಗೊಂಡಿತ್ತು. 'ಪಂಡ್ ಕೊಡಗ್‌ದೇಶ ಪನ್ನೆರಂಡ್‌ಕೊಂಬ್ ನುಪ್ಪತ್ತಂಜಿನಾಡ್ ಊರ್‌ತಕ್ಕ ನಾಡ್‌ತಕ್ಕ ದೇಶತಕ್ಕಾಮೆ' ಎಂಬ ಸಾಲಿನಿಂದ ಇದನ್ನು ತಿಳಿಯಬಹುದು.

ಊರ್‌ಮಂದ್ ನಾಡ್‌ಮಂದ್
ದೇಶಕ್ಕೋರ್‌ಮಂದ್ ಪುತ್ತರಿಕೋಲ್‌ಮಂದ್
ನಮ್ಮೆ...........ನಾಳ್‌ಕ್............. ( ಅಡಂಗಿತುಳ್ಳ ನೊಂಬಲ)

ಮೇಲಿನ ಸಾಲುಗಳನ್ನು ಗಮನಿಸುವಾಗ ಕೊಡಗಿನಲ್ಲಿ ಗ್ರಾಮ, ನಾಡು, ಹಾಗೂ ದೇಶಮಟ್ಟಕ್ಕೆ ಹೊಂದಿಕೊಂಡಂತೆ 'ಮಂದು'ಗಳಿದ್ದು (ಮೈದಾನ) ಹಬ್ಬದ ಸಂದರ್ಭಗಳಲ್ಲಿ ಎಲ್ಲರೂ ಜೊತೆಸೇರಿ ಸಂಭ್ರಮಿಸುವ ಬಗೆ ತಿಳಿದುಬರುತ್ತದೆ. ಆಗ ನಾಡಿನ ಜನಪದ ಕಲೆಗಳಾದ ಬೊಳ್‌ಕಾಟ್, ಪುತ್ತರಿಕೋಲಾಟಗಳ ತರಬೇತಿಯನ್ನು ನೀಡಲಾಗುತ್ತಿತ್ತು. ಮಕ್ಕಳಿಗೆ ಸಂಸ್ಕೃತಿಯ ಅರಿವನ್ನು ಮೂಡಿಸುವ ಪ್ರಯತ್ನ ಇದಾಗಿದೆ. ಕೊಡವರಲ್ಲಿ ಅನೇಕ ಮನೆತನಗಳಿವೆ. ಗ್ರಾಮ, ನಾಡು, ದೇಶದ ಸಾಸ್ಕೃತಿಕ ರಾಯಭಾರಿಗಳಂತೆ 'ತಕ್ಕಾಮೆ' ಎಂಬ ಪದವಿಯನ್ನು ಕೊಡವರ ಒಂದೊಂದು ಮನೆತನಕ್ಕೆ ನೀಡಲಾಗುತ್ತಿತ್ತು.

ಊರುಕೋರ್ ನಾಡ್‌ಕೋರ್ ದೇವತಕ್ಕಂಗ
ಪಟ್ಟ್-ಪಣ ಮಾಲ್-ಮಟಕ್ ಭಂಡಾರತಕ್ಕಂಗ
ನಮ್ಮೆ-ನಾಳ್ ನಡಮುಕೊತ್ತ್
ಪದ್ಧತಿಪೋಲೇ ಎಡಮುಂಗೊಡ್‌ಪು
ತಿರುವಳಕಾರ ನೋಡಿಯಂಡಿಕ್ಕು ತಟ್ಟ್‌ಮುಟ್ಟ್‌ನ

(ಊರಿಗೊಂದು ನಾಡಿಗೊಂದು ದೇವತಕ್ಕರು, ವಸ್ತ್ರ ವೈಢೂರ್ಯ ಹಣಾಭರಣಕ್ಕೆ ಭಂಡಾರತಕ್ಕರು, ಹಬ್ಬಹರಿದಿನ ನಿಯಮದಂತೆ ಪದ್ಧತಿಯಂತೆ ಕೊಡುಕೊಳ್ಳುವಿಕೆ, ನರದೇವನು ನೋಡುತ್ತಿರುವನು ತಪ್ಪಿ ನಡೆದರೆ) ಇಲ್ಲಿ ಹಬ್ಬ, ಆಚರಣೆಗಳು ಸಂಪ್ರದಾಯಬದ್ಧವಾಗಿ ನಡೆಯುತ್ತಿತ್ತು. ಒಂದುವೇಳೆ ತಪ್ಪಿ ನಡೆದರೆ ಮೈಮೇಲೆ ಬರುತ್ತಿದ್ದ ದೇವರು ಇವರನ್ನು ನೋಡಿಕೊಳ್ಳುತ್ತಿದ್ದರೆಂಬ ನಂಬಿಕೆಯಿತ್ತು. ಹಾಗೆಯೇ ಇವರ ಕುಟುಂಬದ ರೀತಿನೀತಿಗಳನ್ನು

ಗಮನಿಸುವಾಗ ಪ್ರತೀ ಕುಟುಂಬಕ್ಕೊಬ್ಬ 'ಪಟ್ಟೆದಾರ'ನಿರುವ ಪದ್ಧತಿಯಿತ್ತು. ಈತ ಕುಟುಂಬಕ್ಕೆಲ್ಲ ಹಿರಿಯನು. ಜೊತೆಗೆ ಮಾರ್ಗದರ್ಶಕ. ಕುಟುಂಬದೊಳಗೆ ಈತನಿಗೆ ವಿಶೇಷ ಮನ್ನಣೆ. ಶುಭಾಶುಭ ಸಂದರ್ಭಗಳಲ್ಲಿ ಇವರ ಜೊತೆ ಸಹಕರಿಸುವುದಕ್ಕೆ ಇನ್ನೊಂದು ಕುಟುಂಬದವರು ಇರುತ್ತಿದ್ದು ಇಂತಹ ಕುಟುಂಬವನ್ನು 'ಅರುವ' ಎಂದು ಕರೆಯಲಾಗುತ್ತಿತ್ತು. ಇಷ್ಟೆಲ್ಲ ವ್ಯವಸ್ಥೆಗಳಿದ್ದರೂ ನಾಡಿನಲ್ಲಿ ತಿಳಿದವರಿಗೆ ವಿಶೇಷ ಗೌರವ, ಸ್ಥಾನಮಾನವಿತ್ತೆಂಬುದನ್ನು ಕವನದ ಮೂಲಕ ಗಮನಿಸಬಹುದು. ಕೇರಿ–ಊರು–ನಾಡಿನವರು ಕೂಡಿ ಬಾಳಿದ ಚಿತ್ರಣ ಇಲ್ಲಿದೆ. 'ಕೇರಿ–ಊರು–ನಾಡ್‌ಕಾರ ಕೂಡಿಕಳಿಕುಲ, ಇನ್ನನೆ ಪೊಲ್‌ಂದ ಮಾಲವಂಗ ಈ ಕೊಡವಳಾಕುಲ'. ಅಂದರೆ ಹಬ್ಬಹರಿದಿನಗಳಲ್ಲಿ ಒಟ್ಟುಸೇರುತ್ತ ಆಡಿ ಹಾಡಿ ಕುಣಿದು ಸಂತಸಪಡುವ ಮಾನವರಿವರು ಕೊಡವ ಕುಲದವರು ಎನ್ನುತ್ತಾರೆ ಕವಿ. ಇವರ ಶಿಸ್ತಿನ ಬಗೆಯನ್ನೂ ಕವನ ದಾಖಲಿಸಿದೆ.

ಕೇರಿ–ಊರ್–ನಾಡ್‌ಲೆಲ್ಲ ನಲ್ಲ ಇಡಕಟ್ಟ್
ದಾರ್ ಬಪ್ಪ ದಾರ ಪೋಪ ಎಲ್ಲಾ ಗೊತ್ತಿಪ್ಪ
ಕಂಡಂವನ ಕಂಡಕೆಲ್ಲ ತಡ್‌ತಿತೇ ಕೇಕು
ತಡಿ–ತಾಕತೆನ್ನತದೂ ಅಂವಂಡ, ಬಗ್ಗಿಯೇಪೋಕು

(ಕೇರಿ, ಊರು, ನಾಡಿನಲ್ಲೆಲ್ಲ ಒಳ್ಳೆಯ ಹಿಡುಕಟ್ಟು, ಯಾರು ಬರುವರು ಯಾರು ಹೋಗುವರು ಎಲ್ಲಾ ತಿಳಿವುದು. ಅಪರಿಚಿತರ ಕಂಡಾಕ್ಷಣ ತಡೆದು ಕೇಳುವರು, ಶರೀರ ತಾಕತ್ತೇನಿದ್ದರೂ ಬಗ್ಗಿ ನಡೆವರು)

ಇದು ಶಿಸ್ತಿನ ಬದುಕಿಗೆ ಮಾದರಿ. ಊರಿನೊಳಗಡೆ ಹೊಸಬರ ಆಗಮನವಾದಾಗ ನಿರ್ದಾಕ್ಷಿಣ್ಯವಾಗಿ ವಿಚಾರಿಸುವ ಬಗೆ ಅಲ್ಲಿಯ ನಿರ್ಭೀತ ಬದುಕಿಗೆ ಅವಕಾಶ ಮಾಡಿಕೊಟ್ಟಿದೆ. ಹಾಗಾಗಿಯೇ ಕವಿ ಹೇಳುತ್ತಾರೆ 'ಹೊತ್ತಾರೆ ತೆರೆದ ಮನೆಯ ಬಾಗಿಲು ಸಂಜೆಯು ಹೊತ್ತಿಗೇ ಮುಚ್ಚುವರು, ಇರಲಿಲ್ಲ ದಿಗಿಲು, ಕಳ್ಳ–ನರಿಗಳಿರಲಿಲ್ಲ, ಕಂಡವರ ನೆರಳಿಲ್ಲ, ಯಾರಿಗೂ ಹೆದರಿಕೆಯಿಲ್ಲ, ಕಾನೂನಿಗೆ ತಡೆಯಿಲ್ಲ'. ಕಟ್ಟುನಿಟ್ಟಾದ ಕಾನೂನಿನ ರಕ್ಷಣೆ ಕೊಡವ ಜನತೆಗಿತ್ತು. ಬಾಯಿಮಾತಿಗೆ ಪ್ರಮಾಣ ಮಾಡಿದಷ್ಟು ಬೆಲೆಯಿತ್ತು ಎನ್ನುವಾಗ ಜನರು ಸೌಹಾರ್ದಯುತವಾದ ಬದುಕನ್ನು ಕಟ್ಟಿಕೊಂಡು ನಾಡಿನ ಏಳಿಗೆಗಾಗಿ ಶ್ರಮಿಸಿದವರೆಂಬುದು ಸ್ಪಷ್ಟವಾಗುತ್ತದೆ. ಆದರೆ ರಾಮರಾಜ್ಯದಂತಿದ್ದ ಈ ನಾಡು ಈಗ ರಾವಣರಾಜ್ಯವಾಗಿದೆ ಎಂಬ ನೋವನ್ನು ಕವಿ ವ್ಯಕ್ತಪಡಿಸುತ್ತಾರೆ.

ಇನ್ನತ ಕೊಡಗ್ ದೇಶ ಅಂದ್ ರಾಮರಾಜ್ಯ
ಇಂದಾಯಿಪೋಯಿತ್ ರಾವಣರಾಜ್ಯ

ಲಂಚ ಇಲ್ಲತೆ ಕಾರ್ಬಾರಿಲ್ಲೆ ಒನ್ನಾಂದೊಕೊಂದೂ ಆಪದಿಲ್ಲೆ
ಕಂಡಂವಂಡದೇ ಇಕ್ಕ ಇಲ್ಲಿಯೆಲ್ಲಾ
ಕೊಂದ್‌ಬೆಚ್ಚಿರ್ ನಾಡ್‌ರ ಇಡ್‌ಕೆಟ್ಟ್‌ನೆಲ್ಲಾ
ಮೂಲನಿವಾಸಿಯಡ ಬಾಳ್‌ಬದ್‌ಕ್‌ನೆಲ್ಲಾ

ಆಧುನಿಕತೆಯ ಪ್ರಭಾವದಿಂದ ಕೊಡಗು ಬದಲಾಗಿದೆಯೆಂಬ ನೋವು ಈ ಸಾಲುಗಳಲ್ಲಿ ಪ್ರಕಟಗೊಂಡಿದೆ. ಭ್ರಷ್ಟಾಚಾರವಿಲ್ಲದ ನಾಡಿನಲ್ಲಿ ಈಗ ಲಂಚವಿಲ್ಲದೆ ಯಾವ ಕೆಲಸವೂ ಆಗುವುದಿಲ್ಲ. ಕೊಡವರದ್ದೇ ಕಾರುಬಾರು ಆಗಿದ್ದ ಅಲ್ಲಿ ಈಗ ಕಂಡವರದ್ದೇ ಕಾರುಬಾರು. ನಾಡಿನ ಮತ್ತು ಇಲ್ಲಿಯ ಮೂಲನಿವಾಸಿಗಳ ಹಿಡುಕಟ್ಟನ್ನು ಕೊಂದುಹಾಕಿದರೆಂಬ ಸಂಕಟವನ್ನು ಕವಿ ವ್ಯಕ್ತಪಡಿಸಿದ್ದಾರೆ. ಸದಾಚಾರದಿಂದ, ಸಂಪ್ರದಾಯಗಳಿಂದ, ಅರ್ಥಪೂರ್ಣವಾದ ಸಾಮಾಜಿಕ ಬದುಕಿನಿಂದ ಶಿಸ್ತನ್ನು ರೂಢಿಸಿಕೊಂಡಿದ್ದ ಕೊಡಗಿನ ಜನರ ಬದುಕಿನಲ್ಲಿ ಬದಲಾವಣೆಯ ಗಾಳಿ ಬೀಸಿದ್ದನ್ನು ಕವಿ ದಾಖಲಿಸಿದ್ದಾರೆ. ಯಾವುದೇ ನಾಡಿನಲ್ಲಿ ಅನ್ಯರ ಪ್ರವೇಶವಾದಾಗ ಆ ನಾಡು ತನ್ನ ಮೂಲಸಂಸ್ಕೃತಿಯನ್ನು ಕಳೆದುಕೊಳ್ಳುವ ಸಾಧ್ಯತೆ ಹೆಚ್ಚು. ಇದು ಕೊಡಗಿನಲ್ಲಿ ಘಟಿಸಿದೆ. ಹೀಗೆ ಕೊಡವ ಕವಿಗಳು ತಮ್ಮ ನಾಡಿನ ಮತ್ತು ನುಡಿಯ ಪ್ರತಿನಿಧೀಕರಣವನ್ನು ಮಾಡಿದ್ದಾರೆ. ಇವರ ಕವನಗಳ ಅಧ್ಯಯನದಿಂದ ಕಂಡುಕೊಂಡ ಮುಖ್ಯ ಸಂಗತಿಯೆಂದರೆ, ಲಿಪಿಯಿಲ್ಲದ ಈ ಭಾಷೆ ಕನ್ನಡದ ಲಿಪಿಯನ್ನು ಬಳಸಿಕೊಂಡು, ಕೊಡವತನವನ್ನು ಉಳಿಸಿಕೊಂಡು ಶ್ರೀಮಂತವಾದ ಸಂಸ್ಕೃತಿಯ ನಾಡಾಗಿ ಗಮನಸೆಳೆದಿದೆ. ಬಹುತೇಕ ಎಲ್ಲಾ ಕವನಗಳೂ ನಾಡಿನ ಜೀವನದಿಯಾದ ಕಾವೇರಿ ಮತ್ತು ಅಧಿದೈವವಾದ ಇಗ್ಗುತಪ್ಪನನ್ನು ಗುರುತಿಸುವುದನ್ನು ಮರೆತಿಲ್ಲ.

## ಅಧ್ಯಾಯ ೬

### ಸ್ವಾಭಿಮಾನದ ಹೃದಯನಿವೇದನೆಯ ಅಕ್ಷರರೂಪ

ನಾಡು ಮತ್ತು ನುಡಿಯ ಸಂವೇದನೆ ಕಾಲದಿಂದ ಕಾಲಕ್ಕೆ ಬದಲಾಗುತ್ತಲೇ ಬಂದಿದೆ. ಈ ಬದಲಾದ ಸಂವೇದನೆಯ ಸ್ವರೂಪವನ್ನು ಕಾವ್ಯಾಧ್ಯಯನದ ಮೂಲಕ ಅರಿತುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಕನ್ನಡ ಕಾವ್ಯಗಳಲ್ಲಿ ನಾಡು–ನುಡಿಯ ಪ್ರತಿನಿಧೀಕರಣ ವೈವಿಧ್ಯಮಯವಾಗಿ ನಡೆದಿದೆ. ಕವಿರಾಜ ಮಾರ್ಗದಿಂದ ಆರಂಭಗೊಂಡು ಆಧುನಿಕ ಕಾಲಘಟ್ಟದವರೆಗಿನ ಪ್ರಾತಿನಿಧಿಕ ಕಾವ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಕಂಡುಕೊಂಡ ಫಲಿತಗಳನ್ನು ಇಲ್ಲಿ ದಾಖಲಿಸಲಾಗಿದೆ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ನಾಡು ಮತ್ತು ನುಡಿ ಎನ್ನುವುದು ಅಭಿಮಾನದ ನೆಲೆಯಲ್ಲಿ ಪ್ರಕಟಗೊಂಡಿದೆ. ರಾಜಕೀಯವಾಗಿ ಅಲ್ಲಿ ಯಾವುದೇ ಗಡಿರೇಖೆಗಳಿರಲಿಲ್ಲ. ಆದಾಗ್ಯೂ, ರಾಜಾಶ್ರಯವನ್ನು ಪಡೆದುಕೊಂಡಿದ್ದ ಆ ಕಾಲದ ಕವಿಗಳು ಕಾವ್ಯದ ಮೂಲಕ ಗಡಿರೇಖೆಗಳನ್ನು ನಿರ್ಮಿಸಿಕೊಡುವ ಪ್ರಯತ್ನ ಮಾಡಿದರು. ಬೇರೆ ಬೇರೆ ರಾಜ ಮನೆತನಗಳು ಕರ್ನಾಟಕವನ್ನು ಆಳ್ವಿಕೆ ಮಾಡಿದ್ದು, ಅವರವರ ಶೌರ್ಯ ಸಾಹಸಕ್ಕೆ ಅನುಗುಣವಾಗಿ ರಾಜ್ಯ ವಿಸ್ತರಣೆಗೊಂಡಿತ್ತು. ರಾಜಾಶ್ರಯದಲ್ಲಿದ್ದ ಆ ಕಾಲದ ಕವಿಗಳಿಗೆ ನಾಡಿನ ಗಡಿಗಳನ್ನು ಕಟ್ಟುವ ಹಂಬಲವಿದ್ದಂತೆ ಕಾಣಿಸುತ್ತದೆ. ಕಾವ್ಯಗಳ ಮೂಲಕ ಈ ಅದಮ್ಯ ಹಂಬಲ ಅನಾವರಣಗೊಂಡಿತು. ನಾಡಿನ ಸೀಮೆಯನ್ನು ದಾಖಲಿಸುವುದರ ಮೂಲಕ ಅಂದಿನ ಆಳರಸರುಗಳಿಗೆ ನಾಡಿನ ಭೌಗೋಳಿಕ ವ್ಯಾಪ್ತಿಯನ್ನು ಗುರುತಿಸಿ ಭದ್ರಗೊಳಿಸುವಂತೆ ಸೂಚಿಸುವ ಉದ್ದೇಶವು ಕವಿಗಳಿಗೆ ಇದ್ದಿರಬಹುದು. ಹಾಗಾಗಿ ಬೇರೆ ಬೇರೆ ಸಂಗತಿಗಳ ಮೂಲಕ ನಾಡನ್ನು ಪ್ರತಿನಿಧೀಕರಿಸುವ ಪ್ರಯತ್ನವನ್ನು ಪರಂಪರೆಯ ಕವಿಗಳು ಮಾಡಿದ್ದಾರೆ.

ಕನ್ನಡದ ಪ್ರಾಚೀನ ಕವಿಗಳು ಕನ್ನಡ ಮತ್ತು ಸಂಸ್ಕೃತದ ಸಮನ್ವಯವನ್ನು ಸಾಧಿಸಿದರು. ಅದರ ಜೊತೆಗೆ ದೇಸಿಯ ಸೊಬಗನ್ನು ಕಂಡುಕೊಂಡರು. ರಾಜಾಶ್ರಯದಲ್ಲಿದ್ದ ಪಂಪ, ರನ್ನ ಮೊದಲಾದ ಕವಿಗಳು ಪಂಡಿತರನ್ನು ಸಹೃದಯರನ್ನಾಗಿ ಪಡೆದುಕೊಂಡು ಆಶ್ರಯದಾತ ಮತ್ತು ಕಾವ್ಯ ನಾಯಕನನ್ನು ಸಮೀಕರಿಸಿಕೊಂಡು ಕಾವ್ಯ ನಿರ್ಮಾಣ ಮಾಡಿದರು. ಮಾರ್ಗ- ದೇಸಿಯ ಸಮನ್ವಯತೆಯು ಇಲ್ಲಿ ಗಮನಿಸತಕ್ಕ ಸಂಗತಿ. ನಯಸೇನನಂತಹ ಕವಿ ಭಾಷೆಯಲ್ಲಿ ಆಯ್ಕೆಗೆ ಆವಕಾಶ ನೀಡಿದ್ದಾನೆ. ಕನ್ನಡ –ಸಂಸ್ಕೃತದಲ್ಲಿ ಯಾವುದನ್ನಾದರೂ ಬಳಸಿಕೊಳ್ಳಬೇಕೇ ಹೊರತು ಎಣ್ಣೆ ಮತ್ತು ತುಪ್ಪದ ಬೆರಕೆಯನ್ನು ಈತ ವಿರೋಧಿಸಿದ್ದಾನೆ. ಆಂಡಯ್ಯನು ಸಂಸ್ಕೃತವನ್ನು ನಿರಾಕರಿಸಿ ಅಚ್ಚಗನ್ನಡದಲ್ಲಿ ಕಾವ್ಯ ಬರೆದನು. ಈತನಿಂದ ಹೊಸ ಕಾವ್ಯ ಮಾರ್ಗ ನಿರ್ಮಾಣವಾಗಲಿಲ್ಲ ಮತ್ತು ಈತನ ದಾರಿಯನ್ನು ಮುಂದಿನ ಕವಿಗಳು ಅನುಸರಿಸಲಿಲ್ಲ.

ನಡುಗನ್ನಡ ಕಾಲಘಟ್ಟಕ್ಕೆ ಬಂದಾಗ, ನುಡಿ ಪ್ರಯೋಗಕ್ಕೆ ಮಹತ್ವದ ಸ್ಥಾನ ನೀಡಲಾಯಿತು. ಈ ಕಾಲಘಟ್ಟದ ಕವಿಗಳಿಗೆ ಭೌಗೋಳಿಕ ನಕ್ಷೆಯ ಬಗೆಗೆ ಆತಂಕವಿರಲಿಲ್ಲ. ಅದನ್ನು ಈಗಾಗಲೇ ಹಿಂದಿನ ಕವಿಗಳು ಗುರುತಿಸಿದ್ದರು. ಪಂಡಿತ ಮಂಡಳಿಗೆ ಸೀಮಿತವಾಗಿದ್ದ ಕಾವ್ಯಗಳನ್ನು ಜನಪರವಾಗುವಂತೆ ಮಾಡುವುದಕ್ಕಾಗಿ ಛಂದಸ್ಸಿನ ವಿವಿಧ ಪ್ರಯೋಗಗಳನ್ನು ಮಾಡಿದರು. ಕಾವ್ಯ ರಚನೆಯ ವಿವಿಧ ಮಾದರಿಗಳನ್ನು ನೆಲದ ಸತ್ವದಿಂದ ಪಡೆದು ಕನ್ನಡ ನುಡಿಗೊಂದು ಮನ್ನಣೆಯನ್ನೊದಗಿಸಿದರು. ವಿವಿಧ ದೇಶೀ ಛಂದಸ್ಸುಗಳಲ್ಲಿ ಕಾವ್ಯರಚನೆಗೆ ಕನ್ನಡವನ್ನು ಅಣಿಗೊಳಿಸಿದ ಹಿರಿಮೆಗೆ ಈ ಕಾಲಘಟ್ಟದ ಕವಿಗಳು ಕಾರಣರಾದರು. ಸಂಸ್ಕೃತದಿಂದ ಬಿಡುಗಡೆ ಪಡೆದು ಕಾವ್ಯ ಜನಮುಖಿಯಾಗಬೇಕೆಂಬ ಹಂಬಲ ಇಲ್ಲಿ ಕಾಣಿಸಿಕೊಳ್ಳುತ್ತದೆ. ಕಾಲ ಧರ್ಮಕ್ಕನುಗುಣವಾದ ಭಕ್ತಿ ಪರಂಪರೆಯನ್ನು ನಾಡಿನೆಲ್ಲೆಡೆ ವಿಸ್ತರಿಸಲು ಇವರಿಗೆ ಸಾಧ್ಯವಾಯಿತು. ಭಾಷೆಯಲ್ಲಿ ಸರಳತೆ, ಮತ್ತು ನಾಡಿನಲ್ಲಿ ಸಮಾನತೆಯ ಬದುಕನ್ನು ಕಾಣುವ ಹಂಬಲ ಅದರ ಜೊತೆಗೆ ಸಂಸ್ಕೃತ ಭಾಷೆಯ ನಿರಾಕರಣೆ ಇಲ್ಲದೆ ಮಣ್ಣಿನ ಭಾಷೆಯ ಸತ್ವವನ್ನು ಎತ್ತಿ ಹಿಡಿಯುವ ಪ್ರಯತ್ನ ಇವರಿಂದ ನಡೆಯಿತು. ಇಲ್ಲಿ ಜನಸಾಮಾನ್ಯರ ಭಾಷೆ ಸಾಹಿತ್ಯದ ಭಾಷೆಯಾಯಿತು. ನಾಡು ಎನ್ನುವುದನ್ನು ಇವರು ಯಾವುದೇ ಗಡಿರೇಖೆಗಳಿಂದ ರೂಪಿಸಿಕೊಂಡಿಲ್ಲ.

ನಡುಗನ್ನಡ ಕಾಲಘಟ್ಟವು ಪ್ರಾಯೋಗಿಕವಾಗಿ ತನ್ನನ್ನು ತೊಡಗಿಸಿಕೊಂಡ ಕಾಲ ಈ ಸಂದರ್ಭದಲ್ಲಿ ಸಾಹಿತ್ಯದಲ್ಲಿ ಕಾಣಿಸಿಕೊಂಡ ಬದಲಾವಣೆಯ ಹೊಸ ಹುರುಪಿನಿಂದ ಸಾಹಿತ್ಯಕ್ಕೆ ಒಂದು ರೀತಿಯ ಚಲನಶೀಲ ಶಕ್ತಿ ಪ್ರಾಪ್ತಿಯಾಯಿತು. ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಚಾಮರಸ ಮುಂತಾದವರು ಈ ಸಂದರ್ಭದಲ್ಲಿ ಸಾಹಿತ್ಯಕ್ಕೆ ಶಕ್ತಿ ತುಂಬಿದರು. ಚಂಪೂ

ಕಾವ್ಯರಚನೆಯ ಮೂಲಕ ಪರಂಪರೆಯ ಸಾಹಿತ್ಯದ ಕೊಂಡಿಯನ್ನು ಮುಂದುವರಿಸಿದ ಹರಿಹರ ಕೃತಿಯ ಕೇಂದ್ರ ಸ್ಥಾನವನ್ನು ಹಂಪಿಯನ್ನಾಗಿಸಿಕೊಂಡು, ರಗಳೆಯ ಪ್ರಯೋಗದ ಮೂಲಕ ನಾಡುನುಡಿಯನ್ನು ಪ್ರತಿನಿಧೀಕರಿಸಿದ್ದಾನೆ. ಷಟ್ಪದಿಗೆ ಹೆಸರಾದ ರಾಘವಾಂಕನು ತನ್ನ ಕೃತಿಯ ಮೂಲಕ 'ಸತ್ಯ'ವೆಂಬ ಮೌಲ್ಯವನ್ನು ಪ್ರತಿಪಾದಿಸಿದ್ದಾನೆ. ದೇಸಿನಿಷ್ಠೆಯ ಪ್ರತಿನಿಧಿಯಾಗಿ ಕಾಣಿಸಿಕೊಂಡ ಕುಮಾರವ್ಯಾಸ ತನ್ನ ಕೃತಿಯ ಮೂಲಕ ಜನಮಾನಸದಲ್ಲಿ ನೆಲೆ ನಿಂತಿದ್ದಾನೆ. ಇವರೆಲ್ಲ ನಾಡು ನುಡಿಯ ಬಗೆಗಿನ ಪ್ರತ್ಯಕ್ಷ ಘೋಷಣೆಗಳಿಲ್ಲದೆ ಅದರ ಸಂವೇದನೆಯನ್ನು ಅಭಿವ್ಯಕ್ತಗೊಳಿಸಿದುದನ್ನು ಕಾಣಬಹುದು.

ಆಧುನಿಕ ಸಂದರ್ಭಕ್ಕೆ ಬಂದಾಗ ಸಂಸ್ಕೃತದ ಜಾಗವನ್ನು ಇಂಗ್ಲೀಷ್ ಭಾಷೆ ಆಕ್ರಮಿಸಿಕೊಂಡಿತು. ಇದು ಯಾಜಮಾನ್ಯವನ್ನು ಸ್ಥಾಪಿಸಿದಾಗ ಕನ್ನಡ ತನ್ನ ಆಸ್ತಿತ್ವಕ್ಕೆ ಹೋರಾಡಬೇಕಾಯಿತು. ಮುಂದಿನ ಹಂತ ಏಕೀಕರಣದ ಕೂಗು. ಈ ಸಂದರ್ಭದ ಕವಿಗಳ ಮುಂದೆ 'ನಾಡು' ಇತ್ತು. ಕಾವ್ಯದ ವಿವಿಧ ಮಾದರಿಗಳಿದ್ದುವು. ಆದರೆ ಕನ್ನಡ ನಾಡು ಎನ್ನುವುದು ಒಂದು ಏಕರೂಪದ ಚೌಕಟ್ಟಿನೊಳಗೆ ಬಂದಿರಲಿಲ್ಲ. ಆಗ ಐಕ್ಯತೆಯ ನಾಡಿಗೆ ಏಕೀಕರಣ ಅಗತ್ಯವಾಗಿತ್ತು. ಪರಂಪರೆಯ ಕವಿಗಳ ಆದರ್ಶವನ್ನು ಮತ್ತೆ ಹೊಗಳುವುದಕ್ಕೆ ಆರಂಭಿಸಿದರು. ಯಾಕೆಂದರೆ ಭಾಷೆಯ ಬಗ್ಗೆ ಪ್ರೀತಿ ಮೂಡಬೇಕಾದದ್ದು ಅನಿವಾರ್ಯವಾಗಿತ್ತು. ಹಾಗೆಯೇ ನಾಡಿನ ಬಗೆಗೆ ಒಲುಮೆ ಮೂಡಬೇಕಾಗಿತ್ತು. ಹಾಗಾಗಿ ಈ ಕಾಲಘಟ್ಟದಲ್ಲಿ ನಾಡು-ನುಡಿ ಪೂಜನೀಯ ಸ್ಥಾನವನ್ನು ಪಡೆಯಿತು. ತಾಯಿ ಭುವನೇಶ್ವರಿಯ ರೂಪದಲ್ಲಿ ಕನ್ನಡ ಮಾತೆ ಕಾಣಿಸಿಕೊಂಡಳು. ವಸಾಹತುಶಾಹಿ ಕಾಲಘಟ್ಟದಲ್ಲಿ ಬ್ರಿಟಿಷರಿಗೆ ವಿರುದ್ಧವಾಗಿ ನೆಲದ ಮಹತ್ವವನ್ನು ಸಾರುವ ದೇಶ ಪ್ರೇಮವನ್ನು ಬಿಂಬಿಸುವ ಕವನಗಳು ಕಾಣಿಸಿಕೊಂಡುವು. ನಾಡಿನ ಪ್ರಾಕೃತಿಕ ಸಂಪತ್ತನ್ನು, ಸಾಂಸ್ಕೃತಿಕ ಸಂಪತ್ತನ್ನು, ಪೂರ್ವ ಕವಿಗಳ ಸ್ಮರಣೆಯನ್ನು, ಪುರಾಣದ ಪ್ರತಿಮೆಗಳನ್ನು, ಸಮನ್ವಯದ ನೆಲೆಯನ್ನು ಗುರುತಿಸುವ ಭಾವಪೂರ್ಣ ರಚನೆಗಳ ಮೂಲಕ ನಾಡು ಮತ್ತು ನುಡಿಯ ಐಕ್ಯತೆಯ ಕನಸು ಕಾಣತೊಡಗಿದರು. ಅನ್ಯಭಾಷಿಕರ ನಡುವೆ ಹಂಚಿಹೋದ ಕನ್ನಡ ನಾಡನ್ನು ಒಂದುಗೂಡಿಸಲು ಏಕೀಕರಣದ ಕನಸು ಕಾವ್ಯಗಳಲ್ಲಿ ಚಿಗುರೊಡೆದದ್ದು ಈ ಕಾಲಘಟ್ಟದ ಮುಖ್ಯವಾದ ಬೆಳವಣಿಗೆ. ಹಾಗಾಗಿ ವಿಭಜನೆಗೊಂಡಿರುವ ನಾಡನ್ನು ಮತ್ತೆ ಪಡೆದುಕೊಳ್ಳುವ ಆಕಾಂಕ್ಷೆ ಕವಿತೆಗಳಲ್ಲಿ ವ್ಯಕ್ತವಾಯಿತು.

ಅನ್ಯಭಾಷಿಕರ ಆಕ್ರಮಣ, ನಾಡವರಲ್ಲಿ ಕನ್ನಡದ ಬಗೆಗಿನ ನಿರಾಸಕ್ತಿ ಇವುಗಳಿಂದಾಗಿ ಆತಂಕಕ್ಕೆ ಒಳಗಾದ ಕವಿಗಳು ನಾಡು-ನುಡಿಯ ರಕ್ಷಣೆಗೆ ಸಂಬಂಧಪಟ್ಟಂತಹ ರಚನೆಗಳನ್ನು

ಮಾಡಿದ್ದು ಮುಂದಿನ ಹಂತ. ನಾಡು-ನುಡಿಗೆ ಅಪಾಯವಿದೆಯೆಂದರಿತ ಕವಿಗಳು ಈ ಆತಂಕವನ್ನು ಕವಿತೆಗಳಲ್ಲಿ ಕಾಣಿಸಿದರು. ಕ್ಷೀಣಿಸುತ್ತಿರುವ ಕನ್ನಡದ ಬಗೆಗಿನ ತೀವ್ರ ಕಾಳಜಿ ಕವಿತೆಗಳ ಪ್ರಮುಖ ಆಶಯವಾಯಿತು. ಕನ್ನಡ ನಾಡಿನೊಳಗಡೆ ಅನೇಕ ಭಾಷಿಕರು ನೆಲೆಸಿದ್ದಾರೆ.

ಈ ನೆಲದ ಭಾಷೆಗಳೇ ಆದ ತುಳು, ಕೊಡವ ಮುಂತಾದುವುಗಳಲ್ಲಿಯೂ ಕವಿಗಳು ನಾಡು-ನುಡಿಯ ಅಭಿಮಾನವನ್ನು ಅನಾವರಣಗೊಳಿಸಿದ್ದಾರೆ. ಕನ್ನಡದ ಬಗೆಗೆ ಒಂದೆಡೆ ಹೆಮ್ಮೆ, ಇನ್ನೊಂದೆಡೆ ಆತಂಕ ಇರುವಂತಹ ಸಂದರ್ಭದಲ್ಲಿ ಕನ್ನಡಾಂತರ್ಗತ ಭಾಷೆಗಳಾದ ತುಳು, ಕೊಡವ ಬಾಷೆಗಳಿಗೆ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳುವ ಅಗತ್ಯವಿತ್ತು. ಅದಕ್ಕಾಗಿ ನಿರಂತರ ಪ್ರಯತ್ನಗಳು ನಡೆದಿವೆ.

ಹೀಗೆ ಸ್ವಾಭಿಮಾನದ ಸ್ವತಂತ್ರ ಅಭಿವ್ಯಕ್ತಿಯಿಂದ ಆರಂಭವಾದ ಕನ್ನಡ ನಾಡು ನುಡಿಯ ಹಿರಿಮೆಯು ತಲ್ಲಣಗಳ ಅಭಿವ್ಯಕ್ತಿಯಾಗಿ ಕೊನೆಯಾಯಿತು. ಕಾವ್ಯ ಯಾತ್ರೆಯ ವಿಭಿನ್ನ ಆಯಾಮಗಳನ್ನು, ಹರಹುಗಳನ್ನು ಪ್ರಸ್ತುತ ಅಧ್ಯಯನವು ವಿಶ್ಲೇಷಿಸುವ ಪ್ರಯತ್ನ ಮಾಡಿದೆ. ಕನ್ನಡ ನಾಡು ನುಡಿಯ ಬಗೆಗಿನ ಕಾವ್ಯಾಭಿವ್ಯಕ್ತಿಯು ಕೇವಲ ಭಾವುಕವಾದುದಲ್ಲ. ಅದು ಕನ್ನಡ ನಾಡು-ನುಡಿಗಳ ವಸ್ತು ಸ್ಥಿತಿಯನ್ನು ಕುರಿತು ನಿರೂಪಣೆಯೂ ಆಗಿದೆ. ಈ ಅರ್ಥದಲ್ಲಿ ಪ್ರಸ್ತುತ ಅಧ್ಯಯನವು ನಾಡು-ನುಡಿಯನ್ನು ಕುರಿತು ಕವಿಗಳು ಕಂಡ ಕನ್ನಡ ಸಾಂಸ್ಕೃತಿಕ ಜಗತ್ತಿನ ಒಳನೋಟವು ಆಗಿ ಪರಿಣಮಿಸಿದೆ. ಕವಿಗಳು ಕಂಡ ನಾಡು, ಅಭಿವ್ಯಕ್ತಿಸಿದ ನುಡಿಯ ಮಹತ್ವಗಳು ಕನ್ನಡದ ಸಮಕಾಲೀನ ಸಮಸ್ಯೆಗಳಿಗೆ, ತಲ್ಲಣಗಳಿಗೆ ಸಾಂಸ್ಕೃತಿಕ ದೀವಿಗೆಯಾಗಬಹುದೆಂದು ಭಾವಿಸಲಾಗಿದೆ.

## ಅನುಬಂಧ ೧

### ಪರಾಮರ್ಶನ ಗ್ರಂಥಗಳು


೧. ಅಣ್ಣಮ್ಮ (೨೦೦೪), ಅಡಿಗರ ಕಾವ್ಯದಲ್ಲಿ ವಾಸ್ತವತೆ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೨. ಅನಂತರಂಗಾಚಾರ್ (೨೦೦೨), ಪಂಪಭಾರತ ಗದ್ಯಾನುವಾದ, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು.

೩. ಅಮರೇಶ ನುಗಡೋಣಿ (ಸಂ), (೨೦೦೬), ಹರಿಶ್ಚಂದ್ರ ಚಾರಿತ್ರ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಅಮರೇಶ ನುಗಡೋಣಿ (ಸಂ), (೨೦೦೯, ೨೦೧೪), ಜೈಮಿನಿಭಾರತ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಅರವಿಂದ ಮಾಲಗತ್ತಿ (ಸಂ), (೨೦೦೬), ಕುವೆಂಪು ಕೃತಿವಿಮರ್ಶೆ, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು.

೬. ಅಹಿತಾನಲ (ಸಂ), (೨೦೧೪), ಬೇಂದ್ರೆಅಂದ್ರೆ, ಅಭಿನವ ಪ್ರಕಾಶನ, ಬೆಂಗಳೂರು.

೭. ಆಮೂರ ಜಿ.ಎಸ್ (೨೦೦೭), ಭುವನದಭಾಗ್ಯ, ಪ್ರಿಯದರ್ಶಿನಿ ಪ್ರಕಾಶನ.

೮. ಆಮೂರ ಜಿ.ಎಸ್ (೨೦೧೫), ಕುವೆಂಪು: ಯುಗದಕವಿ, ಮನೋಹರ ಗ್ರಂಥಮಾಲಾ, ಧಾರವಾಡ.

೯. ಆಲೂರವೆಂಕಟರಾಯರು (೧೯೧೭, ೨೦೦೬), ಕರ್ನಾಟಕ ಗತವೈಭವ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೦. ಆರ್‌ಜೆಡಿ (೨೦೦೫), ಕನ್ನಡಕ್ಕಾಗಿ ಕೈಯೆತ್ತು, ಸಪ್ನಬುಕ್ ಹೌಸ್.

೧೧. ಅಂಗಡಿ ಎಸ್.ಎಸ್. (೨೦೦೯), ಸರಳಕವಿರಾಜಮಾರ್ಗ, ಮಂಗಳಪ್ರಕಾಶನ, ಹೊಸಪೇಟೆ.

೧೨. ಕಮಲದಾನಿ ಗುರುರಾಯರು, ಸರ್ವಜ್ಞನ ವಚನಗಳು, ಲಲಿತಪ್ರಕಾಶನ, ಹುಬ್ಬಳ್ಳಿ

೧೩. ಕಯ್ಯಾರಕಿಞ್ಞಣ್ಣ ರೈ (೧೯೮೩), ಶತಮಾನದ ಗಾನ, ಕವಿತಾಕುಟೀರ ಪೆರಡಾಲ.

೧೪. ಕವಿತಾ ರೈ (ಸಂ), (೨೦೧೧), ಕೊಡಗಿನ ಶತಮಾನದ ಕಾವ್ಯ, ಕ್ರೈಸ್ಟ್ ಯುನಿವರ್ಸಿಟಿ, ಕನ್ನಡಸಂಘ, ಬೆಂಗಳೂರು.

೧೫. ಕೀರ್ತಿನಾಥ ಕುರ್ತಕೋಟಿ (೧೯೯೫, ೨೦೧೨), ಕನ್ನಡ ಸಾಹಿತ್ಯ ಸಂಗಾತಿ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ.

೧೬. ಕುಲಕರ್ಣಿ ಆರ್.ವಿ. (೨೦೧೧), ಕಬ್ಬಿಗರಕಾವಂ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೭. ಕುವೆಂಪು (೧೯೪೪), ಕೋಗಿಲೆ ಮತ್ತು ಸೋವಿಯಟ್ ರಷ್ಯಾ, ಉದಯರವಿ ಪ್ರಕಾಶನ, ಮೈಸೂರು.

೧೮. ಕುವೆಂಪು (೧೯೭೦), ಕನ್ನಡ ಡಿಂಡಿಮ, ಸುರುಚಿ ಪ್ರಕಾಶನ, ಮೈಸೂರು.

೧೯. ಕುವೆಂಪು (ಸಂ), (೧೯೫೮, ೧೯೮೮), ಕರ್ನಾಟಕ ಭಾರತ ಕಥಾಮಂಜರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೨೦. ಕುವೆಂಪು (೧೯೭೬), ವಿಚಾರಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು.

೨೧. ಕುವೆಂಪು (೧೯೪೯, ೧೯೯೦), ಶ್ರೀರಾಮಾಯಣದರ್ಶನಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೨. ಕುರ್ಕಾಲ್ ಬಿ.ಎಸ್. (೨೦೧೩), ಕವಿರತ್ನ ಕಯ್ಯಾರ, ಅಭಿಜಿತ್ ಪ್ರಕಾಶನ, ಮುಂಬಯಿ.

೨೩. ಕೃಷ್ಣಕೊಲ್ಲಾರ ಕುಲಕರ್ಣಿ (೨೦೦೬), ಅಖಂಡ ಕರ್ನಾಟಕದ ಹೆಜ್ಜೆಗಳು, ಕನ್ನಡಸಾಹಿತ್ಯಪರಿಷತ್ತು, ಬೆಂಗಳೂರು.

೨೪. ಕೃಷ್ಣಮೂರ್ತಿ ಹನೂರು (೨೦೦೪), ನುಡಿಶೋಧ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೫. ಕೇಶವಭಟ್ಟ.ಎಂ (ಸಂ), (೨೦೦೬), ನಾಡೋಜಪಂಪ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೬. ಕೇಶವಭಟ್ಟ ಟಿ. (೨೦೦೩), ವಾಗ್ಭೂಷಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೭. ಗೀತಾಚಾರ್ಯ ನ. (ಸಂ), (೨೦೦೯), ಬಿ.ಎಂ. ಶ್ರೀಕಂಠಯ್ಯ ಜೀವನ ಸಾಧನೆ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ.

೨೮. ಗೀತಾನಾವೆಲ್ (೨೦೧೨), ನವ್ಯಸಾಹಿತ್ಯ, ಚೇತನ ಬುಕ್ ಹೌಸ್, ಮೈಸೂರು.

೨೯. ಗುರುಪಾದ ಮರಿಗುದ್ದಿ (೨೦೦೯), ನಡುಗನ್ನಡ ಸಾಹಿತ್ಯ ಪರಿವೇಷ, ಪ್ರತಿಧ್ವನಿ

ಪ್ರಕಾಶನ, ಬೆಂಗಳೂರು.

೩೦. ಗುರುಲಿಂಗ ಕಾಪಸೆ (೨೦೧೩), ಚೆನ್ನವೀರಕಣವಿಯವರ ಆಯ್ದ ಕವಿತೆಗಳ ಅನುಸಂಧಾನ, ಸಪ್ನಬುಕ್ ಹೌಸ್.

೩೧. ಗೋಪಾಲಕೃಷ್ಣ ಅಡಿಗ (೧೯೯೯, ೨೦೧೦), ಸಮಗ್ರಕಾವ್ಯ, ಸಪ್ನಬುಕ್ ಹೌಸ್, ಬೆಂಗಳೂರು.

೩೨. ಗೋವಿಂದರಾಜು ಸಿ.ಆರ್ (೨೦೦೫), ಕನ್ನಡಮ್ಮ ಹೆಣ್ಣುಸಂಕಥನದ ನಾಡು-ನುಡಿ ರೂಪಕ-ಪ್ರತೀಕಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೩೩. ಚಂದ್ರಪೂಜಾರಿ. ಎಂ (೨೦೧೪), ಸಂಶೋಧನ ಪರಿಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಚಂದ್ರಶೇಖರ ನಂಗಲಿ (೨೦೧೦), ಈಗಳೆಸಾಧ್ಯ, ಕ್ರೈಸ್ಟ್ ಯುನಿವರ್ಸಿಟಿ ಕನ್ನಡಸಂಘ, ಬೆಂಗಳೂರು.

೩೫. ಜನಾರ್ದನ ಭಟ್ (ಸಂ), (೨೦೦೧), ಶತಮಾನದ ಕನ್ನಡಕಾವ್ಯ, ಕನ್ನಡ ಸಂಘ, ಕಾಂತಾವರ.

೩೬. ಜಯಪ್ರಕಾಶ್ ಶೆಟ್ಟಿ. ಹೆಚ್ (೨೦೧೪), ಬೆಳಗಿನೊಳಗಣ ಬೆಳಗು, ರೂಪಪ್ರಕಾಶನ, ಮೈಸೂರು.

೩೭. ಜವರೇಗೌಡ ದೇ. (೨೦೦೭), ಕನ್ನಡಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ತಮಿಳ್‌ಸೆಲ್ವಿ (೨೦೧೫), ಅನನ್ಯ, ಸೃಷ್ಟಿ ಪಬ್ಲಿಕೇಶನ್ಸ್, ಬೆಂಗಳೂರು.

೩೯. ದೇವೀರಪ್ಪ (ಸಂ), (೧೯೫೫), ರಾಮನಾಥ ಚರಿತ, ಮೈಸೂರು ವಿಶ್ವವಿದ್ಯಾಲಯ.

೪೦. ದೊಡ್ಡರಂಗೇಗೌಡ (೨೦೧೦), ನಾದನಿನಾದ, ಓಂಕಾರ ಪ್ರಕಾಶನ, ಬೆಳಗಾವಿ.

೪೧. ನರಸಿಂಹಶಾಸ್ತ್ರಿ ಕೆ.ಎಲ್ (೨೦೧೧), ಆದಿಪುರಾಣ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೨. ನರಸಿಂಹಸ್ವಾಮಿ ಕೆ.ಎಸ್ (೧೯೮೬, ೨೦೧೨), ಮಲ್ಲಿಗೆಯಮಾಲೆ, ವಸಂತಪ್ರಕಾಶನ, ಬೆಂಗಳೂರು.

೪೩. ನರಸಿಂಹಮೂರ್ತಿಬಿದರಹಳ್ಳಿ (೨೦೦೪), ಮಹಲಿಂಗರಂಗನ ಅನುಭವಾಮೃತ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೪೪. ನಾರಾಯಣ ಕೆ. ವಿ. (೨೦೦೭, ೨೦೧೮), ಕನ್ನಡಜಗತ್ತು ಅರ್ಧಶತಮಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ನಾರಾಯಣ ಪಿ. ವಿ. (೨೦೧೩), ನಯಸೇನನ ಧರ್ಮಾಮೃತದ ಗದ್ಯಕಥನ, ಕಾಮಧೇನು ಪುಸ್ತಕಭವನ.

೪೬. ನಾಗಭೂಷಣ ಡಿ.ಎಸ್ (೨೦೦೫, ೨೦೧೨), ಕುವೆಂಪು ಒಂದು ಪುನರನ್ವೇಷಣೆ, ಗೀತಾಂಜಲಿ ಪ್ರಕಾಶನ, ಶಿವಮೊಗ್ಗ.

೪೭. ನಾಗಭೂಷಣ ಸ್ವಾಮಿ ಓ.ಎಲ್ (೧೯೮೩), ವಿಮರ್ಶೆಯ ಪರಿಭಾಷೆ, ಅಭಿನವಪ್ರಕಾಶನ, ಬೆಂಗಳೂರು.

೪೮. ನಾಗರಾಜ್ ಡಿ.ಆರ್ (೧೯೮೭, ೨೦೦೨), ಶಕ್ತಿಶಾರದೆಯ ಮೇಳ, ಅಕ್ಷರಪ್ರಕಾಶನ, ಹೆಗ್ಗೋಡು.

೪೯. ನಿತ್ಯಾನಂದ ಶೆಟ್ಟಿ (೨೦೦೬), ಕನ್ನಡಸಂಸ್ಕೃತಿ ವಾಙ್ಮಯ (ಅಪ್ರಕಟಿತ), ಮಂಗಳೂರು ವಿಶ್ವವಿದ್ಯಾಲಯ.

೫೦. ನಿರುಪಮ (೨೦೧೨), ರಾಷ್ಟ್ರೀಯತೆ ಮತ್ತುಕಾವ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೧. ನಂಜುಂಡಾರಾಧ್ಯ (೨೦೦೪), ಗಿರಿಜಾಕಲ್ಯಾಣ ಮಹಾಪ್ರಬಂಧಂ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೨. ನಿಸಾರ್ ಅಹಮ್ಮದ್ ಕೆ. ಎಸ್, (೧೯೭೯), ನಿತ್ಯೋತ್ಸವ, ಐ ಬಿ ಎಚ್ ಪ್ರಕಾಶನ, ಬೆಂಗಳೂರು.

೫೩. ಪಾಂಡುರಂಗ ಡಿ.ಆರ್ (ಸಂ), (೨೦೧೦), ಕನ್ನಡ ಜೈಮಿನಿಭಾರತ, ದೇವನೂರು ಚಾರಿಟೆಬಲ್ ಟ್ರಸ್ಟ್, ಬೆಂಗಳೂರು.

೫೪. ಪುಟ್ಟಯ್ಯ ಬಿ.ಎಂ (ಸಂ), (೨೦೧೫), ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ಪೂರ್ಣಚಂದ್ರತೇಜಸ್ವಿ (೨೦೦೯), ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ, ಮೈಸೂರು.

೫೬. ಪ್ರಶಾಂತನಾಯಕ (ಸಂ) (೨೦೦೬), ಸಾಹಿತ್ಯವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೭. ಬಸವಾರಾಧ್ಯ (ಸಂ), (೧೯೯೫), ಹರಿಶ್ಚಂದ್ರಕಾವ್ಯಂ, ಗೀತಾಬುಕ್ ಹೌಸ್, ಮೈಸೂರು.

೫೮. ಬೈರೇಗೌಡ (ಸಂ) (೨೦೦೦), ಕನ್ನಡನಾಡುನುಡಿ, ಮುದ್ದಪ್ಪಸ್ಮಾರಕ ಟ್ರಸ್ಟ್.

೫೯. ಭಾಗ್ಯವತಿ ಎಂ (೨೦೧೦), ಬೇಂದ್ರೆ ಮತ್ತು ಕುವೆಂಪು ಕಾವ್ಯ ತೌಲನಿಕ ಅಧ್ಯಯನ, ಶ್ರೀಅನ್ನಪೂರ್ಣಪ್ರಕಾಶನ, ಬೆಂಗಳೂರು.

೬೦. ಭಾಸ್ಕರ ರೈ ಕುಕ್ಕುವಳ್ಳಿ (ಸಂ) (೨೦೦೯), ನೆಯಿಪೇರ್, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು.

೬೧. ಮಲ್ಲೇಪುರಂ ಜಿ ವೆಂಕಟೇಶ (೧೯೯೯), ಶಂಭಾಕೃತಿ ಸಂಪುಟ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೨. ಮಹೀಶವಾಡಿ ಬಿ. ಬಿ. (ಸಂ), (೧೯೮೪), ಧರ್ಮಾಮೃತಂ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೩. ಮಾಳವಾಡ ಸ.ಸ (೧೯೬೩), ಬಸವಣ್ಣನವರ ವಚನ ಸಂಗ್ರಹ, ಸಾಹಿತ್ಯ ಅಕಾಡೆಮಿ.

೬೪. ಮುತ್ತಣ್ಣ ಐ. ಮಾ. (೨೦೦೬), ಮುತ್ತಣ್ಣಂಡೆ ಕವನಮಾಲೆ, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

೬೫. ಮೊಗಳ್ಳಿಗಣೇಶ್ (೨೦೦೮), ನಡುಗಾಲದ ಕನ್ನಡನಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಮೋಹನ ಆಳ್ವ (ಸಂ) (೨೦೧೩), ಕನ್ನಡಮನಸ್ಸು, ಆಳ್ವಾಸ್ ಪ್ರಕಾಶನ, ಮೂಡುಬಿದಿರೆ.

೬೭. ಮೋಹನ ಕುಂಟಾರ್ (೨೦೧೮) ಮಲಯಾಳ ಸಮಾಜ ಮತ್ತು ಸಂಸ್ಕೃತಿ, ಯಾಜಿ ಪ್ರಕಾಶನ, ಹೊಸಪೇಟೆ.

೬೮. ಮೋಹನ ಕುಂಟಾರ್ (೨೦೧೭), ಗಡಿನಾಡು ನುಡಿಸೊಗಡು, ಯಾಜಿ ಪ್ರಕಾಶನ, ಹೊಸಪೇಟೆ.

೬೯. ಮೋಹನ ಕುಂಟಾರ್ (೨೦೧೯), ಲೋಕಾಂತದ ಕಾವು, ಯಾಜಿ ಪ್ರಕಾಶನ, ಹೊಸಪೇಟೆ.

೭೦. ರವಿಕುಮಾರ್. ನ (ಸಂ), (೨೦೧೨), ನಮಗೆಬೇಕಾದ ಕನ್ನಡ, ಅಭಿನವ ಪ್ರಕಾಶನ, ಬೆಂಗಳೂರು.

೭೧. ರಹಮತ್ ತರೀಕೆರೆ (ಸಂ), (೨೦೦೪), ಕುಮಾರವ್ಯಾಸಭಾರತ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ರಹಮತ್ ತರೀಕೆರೆ (೨೦೦೫), ಇಲ್ಲಿ ಯಾರೂ ಮುಖ್ಯರಲ್ಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೩. ರಾಗೌ (೨೦೦೭, ೨೦೧೫), ಪ್ರಾಚೀನಕಾವ್ಯ ಚಿಂತನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭೪. ರಾಘವ ನಂಬಿಯಾರ್ ಕೆ. ಎಂ. (೨೦೧೨), ದ್ರಾವಿಡ ನಾಡುನುಡಿ, ಅಂಕಿತ ಪುಸ್ತಕ ಪ್ರಕಾಶನ.

೭೫. ರಾಜಶೇಖರ ಮಠಪತಿ (೨೦೧೧), ಕನ್ನಡಕ್ಕೊಂದು ಕನ್ನಡಿ, ಕಣ್ವಪ್ರಕಾಶನ, ಬೆಂಗಳೂರು.

೭೬. ರಾಮಕೃಷ್ಣ ಡಿ. ಡಿ. (ಸಂ) (೨೦೧೮), ಪ್ರಾಯೋಗಿಕ ವಿಮರ್ಶೆ, ಪ್ರಕೀರ್ಣಪ್ರಕಾಶನ, ಮೈಸೂರು.

೭೭. ರಾಮಚಂದ್ರಪ್ಪ ಬರಗೂರು (೨೦೦೭), ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೭೮. ರೋಹಿಣಾಕ್ಷ (೨೦೧೪), (ಅಪ್ರಕಟಿತ), ನಾಡು–ರಾಷ್ಟ್ರ ಪರಿಕಲ್ಪನೆ: ಕನ್ನಡ ಕವಿತೆಗಳ ವಾಗ್ವಾದದ ತಾತ್ವಿಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೯. ಮುಗಳಿ ರಂ. ಶ್ರೀ. (೨೦೦೯), ಕನ್ನಡ ಸಾಹಿತ್ಯವಿಮರ್ಶೆಯ ತಾತ್ವಿಕ ವಿವೇಚನೆ, ಹೇಮಂತಸಾಹಿತ್ಯ, ಬೆಂಗಳೂರು.

೮೦. ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್ (೨೦೦೯), ಪರಸ್ಪರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮೧. ವಸಂತಕುಮಾರ ಪೆರ್ಲ(ಸಂ), (೨೦೧೧), ಕವಿಗಳು ಕಂಡ ತುಳುನಾಡು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು.

೮೨. ವಿದ್ಯಾಶಂಕರ. ಎಸ್ (೨೦೧೪), ಚಾಮರಸನ ಪ್ರಭುಲಿಂಗಲೀಲೆ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೩. ವಿಶ್ವನಾಥ (೨೦೦೬), ಪರಿಶೀಲನ, ದೇವಿಪ್ರಕಾಶನ, ಅಲಂಪು.

